# ಸಮಗ್ರ ದಾಸ ಸಾಹಿತ್ಯ

ಸಂಪುಟ : ೧೭





## ಶ್ರೀ ಪ್ರಾಣೇಶದಾಸರು,
## ಶ್ರೀ ಗುರುಪ್ರಾಣೇಶದಾಸರು ಮತ್ತು
## ಶ್ರೀ ಶ್ರೀಶ ಪ್ರಾಣೇಶದಾಸರ ಹಾಡುಗಳು

ಸಮಗ್ರ ದಾಸಸಾಹಿತ್ಯ

ಸಂಪುಟ : ೧೭




# ಶ್ರೀ ಪ್ರಾಣೇಶದಾಸರು, ಶ್ರೀಗುರುಪ್ರಾಣೇಶದಾಸರು, ಶ್ರೀ ಶ್ರೀಶ ಪ್ರಾಣೇಶದಾಸರು ಅವರ ಹಾಡುಗಳು


ಸಂಪಾದಕರು :

ಡಾ॥ ಶ್ರೀಮತಿ ಮಂದಾಕಿನಿ

ನಿವೃತ್ತ ಪ್ರಾಂಶುಪಾಲರು – ರಾಯಚೂರು



ಕರ್ನಾಟಕ ಸರ್ಕಾರ

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಬೆಂಗಳೂರು

SAMAGRA DASA SAHITYA VOLUME - 17 :

*Complete Keerthanas of* .................. Edited by Dr. Shreemathi Mandakini and published by Sri. Y.K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.



ಪುಟಗಳು : 53 + ೫೦೭



ಪ್ರಥಮ ಮುದ್ರಣ : ೨೦೦೩
ಪ್ರತಿಗಳು : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦



ಮುದ್ರಣ ನಿರ್ವಹಣೆ :
ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಂ ರಸ್ತೆ
ಬೆಂಗಳೂರು – ೫೬೦ ೦೫೨

ಮುದ್ರಕರು :
ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

## ಸಂಪಾದಕ ಮಂಡಳಿ

### ಕಾರ್ಯನಿರ್ವಾಹಕ ಸಂಪಾದಕರು

ಡಾ. ಶ್ರೀನಿವಾಸ ಹಾವನೂರ
ಡಾ. ಟಿ. ಎನ್. ನಾಗರತ್ನ
ಪ್ರೊ. ವಸಂತ ಕುಷ್ಟಗಿ

### ಸದಸ್ಯರು

ಡಾ. ಎಂ. ಎಂ. ಕಲಬುರ್ಗಿ
ಪ್ರೊ. ಎಂ. ರಾಜಗೋಪಾಲಾಚಾರ್ಯ (ಫೆಬ್ರವರಿ '೯೮ ರವರೆಗೆ)
ಡಾ. ಕೃಷ್ಣ ಕೊಲ್ಹಾರಕುಲಕರ್ಣಿ
ಡಾ. ಮಂದಾಕಿನಿ
ಪ್ರೊ. ಸುಧಾಕರ
ಡಾ. ಬಸವರಾಜ ಸಬರದ

### ಸದಸ್ಯ ಕಾರ್ಯದರ್ಶಿ

ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಢೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ




# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನೂ ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು ; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿಡಿ ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ, ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿಡಿ ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮುವ್ವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು), ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ-ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ. ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ಸುಬ್ರಮಣ್ಯಂ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ ಪಾಮರರನ್ನು ಏಕ ಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು




# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಓದಲಾರದ ಕನ್ನಡ ಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ), ನಾಲ್ಕುನೂರಕ್ಕೂ ಮಿಕ್ಕಿದ ದಾಸರ ಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಅನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೩೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ' ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯವು ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿದ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾ ನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರ ಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದು ಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ ವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದ ವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದು, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದು ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು*, ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿ ಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ-ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ-ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿ ಕೊಡಬೇಕು – ಎಂಬುದಾಗಿ ನಿರ್ಧರಿಸಿತು.

---

*ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ ಎಂದು ಘೋಷಿಸಿದರು. ಅದರಂತೆ ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಶ್ರೀ ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾಲಿಪಾಟೀಲ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ.  ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ.  ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು.  ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿದೆ.  ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ.  ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತೇವೆ.  ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ-ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

## ಶ್ರೀ ಪ್ರಾಣೇಶದಾಸರ ಜೀವನ ವೃತ್ತಾಂತ

ಶ್ರೀ ಪ್ರಾಣೇಶದಾಸರು, ವಿಜಯದಾಸ ಯುಗದ ಕೊನೆಯಲ್ಲಿ ಆಗಿ ಹೋದವರು. ದಾಸಸಾಹಿತ್ಯದ ತವರು ಎನಿಸಿದ ಇಂದಿನ ರಾಯಚೂರು ಜಿಲ್ಲೆಗೆ ಸೇರಿದ ಲಿಂಗಸುಗೂರಿನಲ್ಲಿ ಕ್ರಿ. ಶ. ೧೭೩೬ ರಿಂದ ೧೮೨೨ ರ ವರೆಗೆ ಸಾರ್ಥಕವಾಗಿ ಬಾಳಿದವರು. ಲಿಂಗಸೂಗೂರಿನಲ್ಲಿ ಕಾಶ್ಯಪ ಗೋತ್ರದ ಶ್ರೀಪತಿ ಅಯ್ಯನವರು ಎಂಬ ಸದ್ವೈಷ್ಣವ ವಂಶದಲ್ಲಿ ಹುಟ್ಟಿದ ಶಾನುಭೋಗ ತಿರುಕಪ್ಪ ನವರು ಇವರ ತಂದೆ. ದಾಸರ ಮೊದಲ ಹೆಸರು ಯೋಗಪ್ಪ ಅಥವಾ ಯೋಗೇಂದ್ರರಾಯರು. ಹುಟ್ಟಿದಾಗ ಮಗುವಿನ ಶರೀರವೆಲ್ಲ ಬೆಳ್ಳಗಾಗಿದ್ದು, ತಂದೆತಾಯಿಗಳು ಮಂತ್ರಾಲಯದ ಗುರುಗಳ ಸೇವೆ ಮಾಡಿದಾಗ ಆ ಬಿಳಿಬಣ್ಣ· ಹೋಗಿ ಅಂಗಾಲಿನಲ್ಲಿ ಮಾತ್ರ ಉಳಿಯಿತು. ತಿರುಕಪ್ಪನವರು ಮತ್ತೂ ಸೇವೆ ಮಾಡಿದಾಗ ಗುರುರಾಜರು ಕನಸಿನಲ್ಲಿ "ಇದು ಮೂಲಸ್ವರೂಪಕ್ಕೆ ಸೇರಿದ ಕಾರಣ, ಹೋಗಲಾರದು..." ಎಂದು ಅಪ್ಪಣೆ ಕೊಡಿಸಿದರಂತೆ, ಆದ್ದರಿಂದ ಭಕ್ತರು ಇಂದಿಗೂ ಇವರು ಪಾಂಡುರಾಜನ ಅಂಶ ಎಂದು ಭಾವಿಸುತ್ತಾರೆ. ಶ್ರೀ ಪ್ರಾಣೇಶದಾಸರಿಗೆ ಇಬ್ಬರು ಸಹೋದರರಿದ್ದರು. ಅವರಲ್ಲಿ ರಾಘಪ್ಪನವರು ಹಿರಿಯರು, ಸುಬ್ಬಣ್ಣ ಎಂಬವರು ಕಿರಿಯರು. ರಾಘಪ್ಪನವರು ಶ್ರೇಷ್ಠ ಭಗವದ್ಭಕ್ತರು. ಸರಕಾರದ ಹಣವನ್ನು ಬಳಸಿದರೆಂಬ ಆರೋಪದಿಂದ ಅಂದಿನ ಸರಕಾರ ಇವರನ್ನು ಬಂಧನದಲ್ಲಿರಿಸಿತ್ತು. ಇವರ ನಿತ್ಯಾಹ್ನೀಕ ಸಮಯದಲ್ಲಿ ಒಂದು ಸರ್ಪ ಬರುತ್ತಿತ್ತು. ರಾಘಪ್ಪನವರು ತಮಗೆ ಕೊಟ್ಟ ಹಾಲನ್ನು ಆ ಸರ್ಪಕ್ಕೆ ಕುಡಿಸಿ ತಾವು ಉಪವಾಸ ಇದ್ದುಬಿಡುತ್ತಿದ್ದರು. ಅವರ ಈ ಮಹಿಮೆಯನ್ನು ಕಂಡು ಅವರನ್ನು ಬೇಗ ಬಂಧನದಿಂದ ಬಿಡುಗಡೆ ಮಾಡಿದರಂತೆ. ಪ್ರಾಣೇಶದಾಸರು ರಚಿಸಿದ ೨೫೨ ಪದಗಳನ್ನು ರಾಘಪ್ಪನವರೇ ಬರೆದಿಟ್ಟಿದ್ದಾರೆ.

ಸುಬ್ಬಣ್ಣನವರು ಮುಗ್ಧ ಸ್ವಭಾವದವರು. ಒಕ್ಕಲುತನದ ಕೆಲಸವನ್ನು

ಮಾಡಿಕೊಂಡಿದ್ದರು. ಒಮ್ಮೆ ಒಬ್ಬ ಕೆಳವರ್ಗದ ವ್ಯಕ್ತಿ ಜೈಮಿನಿ ಭಾರತದ ಒಂದು ನುಡಿಯ ಅರ್ಥವನ್ನು ತಪ್ಪಾಗಿ ಹೇಳಿದನಂತೆ. ಸುಬ್ಬಣ್ಣನವರು ಅದನ್ನು ತಿದ್ದಿ ಸರಿಯಾದ ಅರ್ಥವನ್ನು ಹೇಳಿದಾಗ ಆತ 'ಇದು ಕೋಣವನ್ನು ಕಟ್ಟಿ ಮೊಟ್ಟೆ ಹೊಡೆದಂತೆ ಅಲ್ಲ' ಎಂದು ಛೇಡಿಸಿದನಂತೆ. ಅದನ್ನು ಕೇಳಿ ಸುಬ್ಬಣ್ಣನವರಿಗೆ ವೈರಾಗ್ಯ ಹುಟ್ಟಿ ಪ್ರಾಣೇಶದಾಸರ ಅನುಗ್ರಹದಿಂದ ಶ್ರೇಷ್ಠ ಭಗವದ್ಭಕ್ತರಾದರೆಂದು ತಿಳಿದು ಬರುತ್ತದೆ.

ಪ್ರಾಣೇಶದಾಸರ ಪರಮ ಗುರುಗಳು ಮಾನವೀಯ ಶ್ರೀ ಜಗನ್ನಾಥದಾಸರು. ಪ್ರಾಣೇಶದಾಸರು ಅನೇಕ ವರ್ಷಗಳ ಕಾಲ ಅವರ ಸೇವೆಯನ್ನು ಮಾಡಿ ಅವರಿಂದ ಪರತತ್ತ್ವೋಪದೇಶವನ್ನು ಪಡೆದರು. ಗುರುಗಳ ಮೆಚ್ಚಿನ ಶಿಷ್ಯರಾಗಿ ಅಪರೋಕ್ಷಜ್ಞಾನಿಗಳೆನಿಸಿದರು.

ಶ್ರೀಗೋರೆಬಾಳ ಹನುಮಂತರಾಯರು ಬರೆದಿಟ್ಟ ಪ್ರಾಣೇಶದಾಸರ ಜೀವನ ಚರಿತ್ರೆಯಲ್ಲಿ ಅವರ ದಿನಚರಿಯನ್ನು ಹೀಗೆ ಹೇಳಿದ್ದಾರೆ :

"ದಾಸರು ಪ್ರತಿನಿತ್ಯ ಆಹ್ನೀಕವನ್ನು ತೀರಿಸಿಕೊಂಡು ತಮ್ಮ ಗುರುಗಳಾದ ಶ್ರೀ ಜಗನ್ನಾಥದಾಸರು ಅನುಗ್ರಹಿಸಿದ ಶ್ರೀ ಸೀತಾರಾಮ, ಲಕ್ಷ್ಮಣ, ವೇದವ್ಯಾಸ, ಪಟ್ಟಾಭಿರಾಮ, ತಾಂಡವಕೃಷ್ಣ, ಶ್ರೀ ಲಕ್ಷ್ಮೀವೆಂಕಟೇಶ್ವರ ಮೊದಲಾದ ಹದಿನಾಲ್ಕು ಪ್ರತಿಮೆಗಳನ್ನು ಪೂಜಿಸುತಿದ್ದರು. ಅನಂತರ ತಮ್ಮ ಗುರುಗಳ ಆದೇಶದಂತೆ 'ಗೃಹಕರ್ಮದ ಬ್ಯಾಸರದಲಿ ಪರಮೋತ್ಸಹದಲಿ ಮಾಡುತ' : – ಅದೇ ಪರಮಾತ್ಮನ ಸೇವೆ ಎಂದು ಭಾವಿಸುತ್ತಿದ್ದರು. ಅನಂತರ ಆಕಳುಗಳನ್ನು ತೆಗೆದುಕೊಂಡು ಅಡವಿಗೆ ಹೋಗಿ, ಅವುಗಳನ್ನು ಮೇಯಲು ಬಿಟ್ಟು ತಾವು ಒಂದು ಮರದ ಕೆಳಗೆ ಪ್ರಶಾಂತವಾದ ಸ್ಥಳದಲ್ಲಿ ಕೂಡುತ್ತಿದ್ದರು. ಶಾಂತಿ ಹಾಗೂ ನೆಮ್ಮದಿಯಿಂದ ಏಕಾಗ್ರ ಚಿತ್ತರಾಗಿ ಕುಳಿತುಕೊಂಡು ದೇವರನಾಮಗಳನ್ನು ರಚಿಸುತ್ತಿದ್ದರು. ಇವರಿಗೆ ಪ್ರಿಯವಾದುದು ದಶಮಸ್ಕಂಧ ಭಾಗವತ. ಆ ಗ್ರಂಥದಲ್ಲಿ ಬರುವ ಶ್ರೀಕೃಷ್ಣನ ಚರಿತ್ರೆ ಇವರ ಕೀರ್ತನೆಗಳ ಪ್ರಮುಖ ವಸ್ತುವಾಗಿದೆ."

ಶ್ರೀ ಪ್ರಾಣೇಶದಾಸರಲ್ಲಿ ಅಸಾಮಾನ್ಯವಾದ ದೈವೀಶಕ್ತಿಯಿತ್ತು ಎಂಬುದಕ್ಕೆ ಈ ಮುಂದಿನ ವೃತ್ತಾಂತವು ಸಾಕ್ಷಿಯಾಗಿದೆ :

ಶ್ರೀ ಜಗನ್ನಾಥದಾಸರು ತಮ್ಮ ಪಿತೃಕಾರ್ಯವನ್ನು ಮಾಡುವಾಗ ಪ್ರಾಣೇಶ ದಾಸರನ್ನೇ ಆಹ್ವಾನಿಸುತ್ತಿದ್ದರಂತೆ. ಅವರಿಗೆ ತಮ್ಮ ಬೆಳಗಿನ ಆಹ್ನೀಕವನ್ನೆಲ್ಲಾ ಪೂರೈಸಿ ಲಿಂಗಸುಗೂರಿನಿಂದ ಮಾನವಿಗೆ ೧೬ ಹರದಾರಿಯಷ್ಟು ದಾರಿಯನ್ನು

ನಡೆದು ಸಂಜೆ ಮಾನವಿಗೆ ಬಂದು ತಲುಪಿ ಪಿತೃಕಾರ್ಯವನ್ನು ಮುಗಿಸಿದ್ದರಂತೆ. ಜಗನ್ನಾಥದಾಸರು ಇವರಿಗಾಗಿ ಕಾಯುತ್ತಿದ್ದು ಇವರೊಬ್ಬರಲ್ಲಿಯೇ ಅನೇಕ ಬ್ರಾಹ್ಮಣರನ್ನು ಕಂಡು ತೃಪ್ತರಾಗುತ್ತಿದ್ದರಂತೆ.

ಪ್ರಾಣೇಶದಾಸರು ಪದ, ಪದ್ಯಸುಳಾದಿ, ಉಗಾಭೋಗಗಳಲ್ಲದೆ ಈ ಕೆಳಗಿನ ಕೃತಿಗಳನ್ನು ರಚಿಸಿದ್ದಾರೆ.

೧. ಗಾಲವ ಚರಿತ್ರೆ ೨. ಕಾಲಿಯಾಮರ್ದನ ಕಥೆ ೩. ಬುಡಿ ಬ್ರಹ್ಮನ ಕಥೆ ೪. ಗೋಪಿಕಾವಿಲಾಸ ೫. ಭ್ರಮರಗೀತಾ ೬. ಮುಯ್ಯದ ಪದ ೭. ಶ್ರೀಹರಿ ವಾಯುಸ್ತುತಿ ೮. ಸೀತಾ ಸ್ವಯಂವರ ೯. ಕಾಳೀ ಸ್ವಯಂವರ ೧೦. ಹನುಮದ್ವಿಲಾಸ (ಗರುಡ ಗರ್ವ ಹರಣ) ೧೧. ಭೀಮಸೇನ ವಿಲಾಸ (ಕೀಚಕವಧ) ೧೨. ವೀರಭದ್ರವಿಲಾಸ (ದಕ್ಷಾಧ್ವರಧ್ವಂಸ ಕಥೆ) ೧೩. ಪಾರ್ಥವಿಲಾಸ (ಸುಭದ್ರಾಹರಣ) ೧೪. ಅನಿರುಧ್ಧವಿಲಾಸ (ಉಷಾಹರಣ) ೧೫. ವಶಿಷ್ಠ ವಿಶ್ವಾಮಿತ್ರಾಖ್ಯಾನ ೧೬. ಊರ್ಧ್ವಪುಂಡ್ರ ಮಹತ್ಮ ೧೭. ತಿಥಿತ್ರಯನಿರ್ಣಯ ಹೀಗೆ ೧೭ ಕೃತಿಗಳು.

ದಾಸರಾಯರ ಕಾಲದಲ್ಲಿ ನಡೆದ ಒಂದು ಮಹತ್ವದ ಘಟನೆಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಮಂತ್ರಾಲಯದ ರಾಘವೇಂದ್ರಸ್ವಾಮಿಗಳ ಪೀಠದಲ್ಲಿ ಏಳನೆಯ ಯತಿಗಳಾದ ಶ್ರೀ ವರದೇಂದ್ರರು ಒಮ್ಮೆ ಲೋಕಹಿತಾರ್ಥವಾಗಿ ಸಂಚಾರವನ್ನು ಕೈಗೊಂಡು ಲಿಂಗಸುಗೂರಿಗೆ ಆಗಮಿಸಿ, ಪ್ರಾಣೇಶದಾಸರ ಮನೆಯಲ್ಲಿಯೇ ಆತಿಥ್ಯವನ್ನು ಸ್ವೀಕರಿಸಿದರು. ದಾಸರು ಸ್ವಾಮಿಗಳ ಬಗೆಗೆ ತೋರಿದ ಭಕ್ತಿಭಾವಕ್ಕೂ ಅವರ ಸಾತ್ವಿಕ ಗುಣಗಳಿಗೂ ಬಹಳ ಮೆಚ್ಚಿದರು. ಅವರ ಹಾಗು ಅವರ ಮನೆತನದವರ ಮೇಲೆ ವಿಶೇಷ ಅನುಗ್ರಹ ಮಾಡಬಯಸಿ ಅವರಿಂದ ಒಂದು ಬಣವಿಯ ದೊಡ್ಡಿಯನ್ನು ದಾನವಾಗಿ ಪಡೆದರು. ಆದರೆ ಅದನ್ನು ತಾವು ಕೇಳಿದಾಗ ಒಪ್ಪಿಸಬೇಕೆಂದು ಮುಂದೆ ಸಂಚಾರ ಮಾಡುತ್ತ ಪುಣ್ಯ ನಗರಕ್ಕೆ (ಇಂದಿನ 'ಪುಣೆ' ) ಹೋಗಿ ಅಲ್ಲಿಯೇ ವೈಕುಂಠವಾಸಿಗಳಾದರು. ಅನಂತರ ಶ್ರೀಗಳು ಪ್ರಾಣೇಶದಾಸರ ಕನಸಿನಲ್ಲಿ ಬಂದು 'ನಾವು ವೈಷ್ಣವಾಗ್ರಹಾರವಾದ ಲಿಂಗಸುಗೂರಿನಲ್ಲಿ ಇರಲಪೇಕ್ಷಿಸಿ ನೀವು ದಾನ ಕೊಟ್ಟಿರುವ ದೊಡ್ಡಿಯಲ್ಲಿ ಬಣವಿಯ ಸೊಪ್ಪೆಯ ಕೆಳಗೆ ತುಲಸೀ ವೃಕ್ಷ ರೂಪದಿಂದ ಬಂದಿದ್ದೇವೆ. ಅದೇ ಸ್ಥಳದಲ್ಲಿ ನಮ್ಮ ವೃಂದಾವನವನ್ನು ಸ್ಥಾಪಿಸಿರಿ. ಪುಣೆಯಿಂದ ನಮ್ಮ ಪಾದುಕೆಗಳನ್ನು ಅಲ್ಲಿಯ ಅರ್ಚಕರು ನಿಮಗೆ

ಕಳುಹಿಸುತ್ತಾರೆ. ಅವುಗಳನ್ನು ವೃಂದಾವನದ ಅಡಿಯಲ್ಲಿರಿಸಿ ಪೂಜಿಸಿರಿ ಎಂದು ಆಜ್ಞಾಪಿಸಿದರು.

ಅದರಂತೆಯೇ ಘಟನೆಗಳೆಲ್ಲ ನಡೆದು ಇಂದಿನವರೆಗೂ ಪ್ರಾಣೇಶದಾಸರು ಆರಾಧಿಸಿದ ರೀತಿಯಲ್ಲಿಯೇ ಲಿಂಗಸುಗೂರಿನಲ್ಲಿ ವರದೇಂದ್ರ ತೀರ್ಥರ ಆರಾಧನೆ ನಡೆಯುತ್ತ ಬಂದಿದೆ. ಈ ಕಥೆಯನ್ನು ಶ್ರೀಮೋದವಿಠಲರು ತಮ್ಮ ಒಂದು ಪದದಲ್ಲಿ ನಿರೂಪಿಸಿದ್ದಾರೆ.

ಶ್ರೀ ವರದೇಂದ್ರ ತೀರ್ಥರು ಹೀಗೆ ವೃಂದಾವನ ರೂಪದಲ್ಲಿ ಲಿಂಗಸುಗೂರಿನಲ್ಲಿ ಬಂದು ನೆಲೆಸಿದ ಅನಂತರ ದಾಸರಾಯರು ತಮ್ಮ ಮುಂದಿನ ಜೀವನವನ್ನು ಸ್ವಾಮಿಗಳ ಸೇವೆ, ಹರಿಸ್ಮರಣೆ ಹಾಗೂ ಧರ್ಮಗ್ರಂಥಗಳ ಪಾಠ ಇವುಗಳಲ್ಲಿ ಸಾರ್ಥಕಮಾಡಿಕೊಂಡು ಶಾಲಿವಾಹನ ಶಕೆ ೧೭೪೪ ಚಿತ್ರಭಾನು ಸಂವತ್ಸರ ಅಶ್ವೀನ ಶುದ್ಧಸಪ್ತಮಿಯಂದು (೧೮೨೨) ಪರಲೋಕವಾಸಿಗಳಾದರು.

ಪ್ರಾಣೇಶದಾಸರ ಸಾಹಿತ್ಯದಲ್ಲಿ ಸರಳ, ಸುಂದರ, ಸ್ವಾರಸ್ಯಕರವಾಗಿರುವ ಹಾಡುಗಳು ಇವೆ. ಕೆಲವು ಕಥೆ ಹೇಳುವ ತಂತ್ರದಲ್ಲಿಯೂ ವೈವಿಧ್ಯ ಪೂರ್ಣವಾಗಿವೆ. ಉದಾ :– ಸೀತಾಂಜನೆಯ ಸಂವಾದವೆಂಬ

"ನಮೋನಮೋ ರಾಮಕಳುಹಿಸಿದನಮ್ಮ ಮಮಸ್ವಾಮಿ ಬದುಕಿಹನೆ ಪೇಳೊ ತಮ್ಮ"

ಎಂಬ ಹಾಡು ಸೊಗಸಾದ ಸಂವಾದ ರೂಪದಲ್ಲಿದೆ. ಅದೇ ಹಾಡಿನಲ್ಲಿ ಬರುವ "ಪೋಗಿ ಬರುವೆನು ನಿಮ್ಮ ಗುರುತು ಏನಿದೆ ಕೊಟ್ಟು । ಬೇಗನೆಪ್ಪಣೆಯೆನಗೆ ಈವುದಮ್ಮ" ಎಂಬಂತಹ ತಿಳಿಗನ್ನಡದಲ್ಲಿಯೂ ದಾಸರು ಕೃತಿರಚನೆ ಮಾಡಿದ್ದಾರೆ.

"ವರುಣಗೂ ನಾರಾಯಣಗೂ ನೆಂಟತನ ಮಾಡುವುದಕೆ, ಸರಿಯೇ ಸಂದೇಹವೇನು ಸಮ್ಮೀಸಿ ನೋಡಿ :"

"ಜಲಧಿ ತಕ್ಕುದೋ ನಿನ್ನಳಿಯಗೂ ನಿನಗೂ,

ಹಲವು ಬಗೆಯಿಂದಲಿ ಪರೀಕ್ಷೆಯನು ಮಾಡಿದರೆ"

ಎಂಬ ಪದಗಳು ಬಹು ಚಮತ್ಕಾರಿಕವಾಗಿ, ವರುಣನಿಗೂ ನಾರಾಯಣ

ನಿಗೂ, ಜಲಧಿಗೂ ನಾರಾಯಣರಿಗೂ ಗುಣಗಳಲ್ಲಿರುವ ಸಾಮ್ಯ ವೈಷಮ್ಯ ಗಳನ್ನು ತೋರಿದ್ದಾರೆ.

"ನಿನ್ನ ಮಗಳವಗಿತ್ತವನ ಮಗಳ ಮದಿವ್ಯಾದಿ

ಕನ್ಯವಿಕ್ರಯ ಪರಸ್ಪರವೆನಿಸಿತೊ :"

ಎಂಬಲ್ಲಿ ಕಂಡು ಬರುವ ಭಕ್ತಿ ಪುರಸ್ಸರವಾದ ನಿಂದಾಸ್ತುತಿಯ ತಂತ್ರವು ರಮಣೀಯವಾಗಿದೆ.

ದೇವರ ವಿವಾಹ ಸಂದರ್ಭಕ್ಕೆಂದು ರಚಿತವಾದಂತಹ ಒರಳುಕಲ್ಲು ಪೂಜೆ ಹಾಡು, ಹಸೆಗೆ ಕರೆಯುವ ಹಾಡು, ಕಂಕಣ ಕಟ್ಟುವ, ಉರುಟಣೆಯ, ಉಡಿ ತುಂಬುವ, ಲಾಲಿ, ಮಂಗಳಾರತಿ ಮೊದಲಾದ ಹಾಡುಗಳ ಮೂಲಕ ಪ್ರಾಣೇಶ ದಾಸರು ಮಾಡುವ ಹರಿಸ್ತುತಿಗೂ ಇಂದಿಗೂ ಸಾಮಾನ್ಯ ಜನರ ಜೀವನದಲ್ಲಿಯ ಅಂತಹ ಸಂದರ್ಭಗಳಿಗೆ ಒದಗಿ ಬರುವಂತಹ ಪದಗಳಾಗಿವೆ.

ಪ್ರಾಣೇಶದಾಸರ ಬೋಧಪ್ರದವಾದ ಹಾಡುಗಳ ಸಂಖ್ಯೆಯೂ ಗಣನೀಯ ವಾಗಿದೆ.

ಬಾಳಿನಲ್ಲಿ ದಾರಿತಪ್ಪಿದ ದಾಸಪ್ಪನನ್ನು "ಆದಾದ್ದಾಯ್ತಿನ್ನಾದರು ಒಳ್ಳೆ ಹಾದಿ ಪಿಡಿಯೊ ಪ್ರಾಣಿ" ಎಂದು ಸಖಿಯಂದ ಗದರಿಸಿ ಒಳ್ಳೆಯ ಹಾದಿಗೆ ತರುವಲ್ಲಿ ತಮ್ಮ ಗುರುಗಳಾದ ಶ್ರೀ ಜಗನ್ನಾಥದಾಸರ ಅನುಗ್ರಹ ಶಕ್ತಿಯೊಂದಿಗೆ ಪ್ರಾಣೇಶ ದಾಸರ ಆಶೀರ್ವಾದವೂ ಸೇರಿದೆ.

ಕಟಕಿ, ವ್ಯಂಗೋಕ್ತಿಗಳನ್ನು ಬಳಸಿ ಪಾಮರರನ್ನು ದಾಸರು ತಿದ್ದಲೆತ್ನಿಸಿದ ರೀತಿ ಮನೋಜ್ಞವಾದುದು.

"ಹೋಗುವಳಗಸೀಯ ಪರಿಯಂತ
ಭ್ರಾಂತಳಾಗಿ ಬಂದೆಂಬಳ ಸೊಸೆಗೆ ಹೀಗಂತ ॥ಪ॥"

ಎಂಬ ಹಾಡು ಅತ್ತೆಯೊಬ್ಬಳ ಸಂಸಾರ ವ್ಯಾಮೋಹವನ್ನು ಚಿತ್ರಿಸುವ ಕಟಕಿಯ ಉದಾಹರಣೆಯಾಗಿದೆ. ಹೀಗೆಯೇ ಆದರ್ಶ ಮಾಧ್ವ ಜೀವನದ ರೀತಿನೀತಿ, ದಿನಚರಿಗಳನ್ನು ತಿಳಿಸುವ ಪದಗಳು ಪ್ರೌಢವಾಗಿಯೂ ಶಾಸ್ತ್ರಗರ್ಭಿತ ವಾಗಿಯೂ ಇವೆ. ಗೋಪಿಚಂದನ ಮುದ್ರಾಧಾರಣ ಮಹಾತ್ಮ್ಯೆ, ದೇವರಿಗೆ

ನೈವೇದ್ಯ ಇಡುವ ಕ್ರಮ ತಿಥಿತ್ರಯ ನಿರ್ಣಯ, ಈ ವಿಷಯಗಳನ್ನು ಕುರಿತ ಪದ, ಉಗಾಭೋಗಗಳು ಇಂತಹ ದಾಸರ ಪದಗಳಿಗೆ ಉದಾಹರಣೆಗಳಾಗಿವೆ.

ಭಕ್ತಿತತ್ತ್ವವನ್ನು ಜನರ ಮುಂದೆ ಇಡುವುದೇ ದಾಸರ ಉದ್ದೇಶವಾಗಿತ್ತಾದ್ದರಿಂದ ಅವರು ಬಳಸಿದ ಭಾಷೆಯೂ ಲಿಂಗಸುಗೂರು ಸುತ್ತಮುತ್ತಲಿನ ಅಂದಿನ ಜನರಾಡುವ ಭಾಷೆಯೂ ಮತ್ತು ಹಾಡುವ ಭಾಷೆಯೂ ಆಗಿದೆ. ಅಲ್ಲದೆ ಗೂಢವಾದ ಅರ್ಥದಿಂದಲೂ ಕೂಡಿದೆ. ಉದಾ :-

"ಕಡ್ಡಿಮೇಯಂದೂ ತುಡುಗು ಹೋಗಲರಿಯದಂಥಾ
ದೊಡ್ಡ ಆಕಳಕರವಾ ಹಗ್ಗಾದಿಂದಾ
ದುಡ್ಡಿನಗಲ ಠಾವಿನೊಳಗೆ ಕಂಬಕ್ಕೆ ಕಟ್ಟಿ.......
ಧಡ್ಡನಲ್ಲಾವಾ ಶ್ರೀ ಪ್ರಾಣೇಶಾ ವಿಠ್ಠಲ
ಮಡ್ಡಾರರಿಯಾರಿದನೂ..........."

ಕೆಲವೊಮ್ಮೆ ಅಜ್ಞರಾದ ಹೆಣ್ಣುಮಕ್ಕಳಿಗೆ ತಿಳಿಸಿ ಹೇಳುವ ರೀತಿಯಲ್ಲಿ

"ಶ್ರೀಕಾಂತೊಲಿದ ದಾಸರೀ ಕಲಿಯುಗದಲ್ಲಿ
ಲೇಖಾಂಶರಹುದೇ ತಂಗಿ :
ಶೋಕ ಬ್ಯಾಡೆಲೆ ನರಲೋಕ ಉಳಿದರೆಂದು
ಈ ಕಂಭದೊಳಗಿಹರೇ ಹೇ ನೀರೆ ।"

ತಂಗಿ, ನೀರೆ, ನಲ್ಲೆ ಎಂದು ಸಂಬೋಧಿಸಿ ವಿಷಯವನ್ನು ತಿಳಿಸಿದ್ದಾರೆ. ಇದು ಶ್ರೀ ಜಗನ್ನಾಥದಾಸರು ಇಹಲೋಕಯಾತ್ರೆ ಮುಗಿಸಿದ ಸಂದರ್ಭದ ಒಂದು ಹಾಡು.

'ಪ್ರಾಣೇಶದಾಸರ ವಿಷಯ ತೃಷ್ಣೆಯ ಬಿಡು' - ಎಂಬ ಸುಳಾದಿಯ ಆಚಾರ್ಯ ಮಧ್ವರ ಈಶಾವಾಸ್ಯ ಉಪನಿಷತ್ತಿನ ಅನುವಾದವೆಂದು ಪಂಡಿತರ ಅಭಿಪ್ರಾಯವಾಗಿದೆ.

ಗುರುಪ್ರಾಣೇಶದಾಸರು :- ಪ್ರಾಣೇಶದಾಸರಿಗೆ ವೆಂಕಟರಾಯನೆಂಬ ಒಬ್ಬ ಮಗನಿದ್ದನೆಂದೂ, ಈತನನ್ನು ದಾಸರು ೧೨ ವರುಷಗಳ ಕಾಲ ಜಗನ್ನಾಥದಾಸರ ಸೇವೆ ಮಾಡಲು ಬಿಟ್ಟಿದ್ದರೆಂದೂ ತಿಳಿದು ಬರುತ್ತದೆ. ವೆಂಕಟರಾಯ ಗುರುಗಳ ಸೇವೆ ಮಾಡಿ, ಅವರ ಪರಮಾನುಗ್ರಹದಿಂದ ವಿದ್ಯಾಸಂಪನ್ನರಾಗಿ, ಅವರ ಆಜ್ಞೆಯಂತೆ ತಂದೆಯವರಾದ ಪ್ರಾಣೇಶದಾಸರಿಂದ "ಶ್ರೀಗುರುಪ್ರಾಣೇಶ

ವಿಠ್ಠಲ..." ಎಂಬ ಅಂಕಿತವನ್ನು ಪಡೆದು ದಾಸದೀಕ್ಷೆಯನ್ನು ಹೊಂದಿದರು. ಇವರಿಗೆ ಗುರುಗಳಾದ ಜಗನ್ನಾಥದಾಸರು ಇತ್ತ ತಂಬೂರಿಯು ಈಗಲೂ ಇವರ ವಂಶದವರಲ್ಲಿದೆ.

ಶ್ರೀ ಗುರುಪ್ರಾಣೇಶವಿಠಲ ಎಂಬ ಅಂಕಿತದಿಂದ ದಾಸರು ಕೆಲ ಪದಗಳನ್ನು ರಚಿಸಿದರೆಂದೂ ಮುಂದೆ ಪ್ರಾಣೇಶವಿಠಲರು ಬೇಡವೆಂದು ಅಪ್ಪಣೆ ಕೊಡಿಸಿದ ಅನಂತರ ಪದರಚನೆಯನ್ನು ನಿಲ್ಲಿಸಿದರೆಂದೂ ತಿಳಿದುಬರುತ್ತದೆ.

ಒಮ್ಮೆ ಶ್ರೀಗುರುಪ್ರಾಣೇಶದಾಸರು ಕಾರ್ಯನಿಮಿತ್ತ ತಮ್ಮ ಕುಲಕರಣಿ ಗ್ರಾಮವಾದ ರಾಮಪುರಕ್ಕೆ ಕುದುರೆಯ ಮೇಲೆ ಹೋಗುತ್ತಿದ್ದರು. ಆಗ ಎಲ್ಲಿಂದಲೋ ಒಂದು ಹುಲಿ ಬಂದು ದಾಸರ ಕುದುರೆಯನ್ನು ಹಿಂಸಿಸಿ ಅವರಿಗೆ ಮಾತ್ರ ಯಾವ ಅಪಾಯವನ್ನು ಮಾಡದೆ ಹಿಂತಿರುಗಿತು. ಆಗ ಅವರ ತಲೆಯ ಮೇಲಿನ ರುಮಾಲು ಕೆಳಗೆ ಬಿದ್ದಿತಂತೆ. ಆ ಘಟನೆಯೇ ಅವರಲ್ಲಿ ಸಂಸಾರ ನಿರಸತೆಯನ್ನು ಹುಟ್ಟಿಸಿ ಮುಂದೆ ಅವರು ಭಗವಧ್ಯಾನದಲ್ಲಿ ಕಾಲಕಳೆಯು ವಂತೆ ಮಾಡಿತು. ಅನಂತರ ಇವರನ್ನು ದೊಡ್ಡ ದೊಡ್ಡ ವಿದ್ವಾಂಸರೂ ಗೃಹಸ್ಥರೂ ಸನ್ಮಾನಿಸತೊಡಗಿದರು.

ಗುರುಪ್ರಾಣೇಶದಾಸರು ಮಹಾಮಹಿಮರಾಗಿದ್ದುದರಿಂದ ತಮ್ಮ ಅವತಾರ ಸಮಾಪ್ತಿಯ ಕಾಲವನ್ನು ಬಲ್ಲವರಾಗಿದ್ದರು. ತಮ್ಮ ಮರಣಕಾಲಕ್ಕಿಂತ ಆರು ತಿಂಗಳು ಮೊದಲು ತಮ್ಮ ಮಕ್ಕಳಿಗೆ ತಮ್ಮ ಮರಣದ ತಿಥಿಯನ್ನು (ಮಾಘ ಬಹುಳ ಅಮಾವಾಸ್ಯ) ತಿಳಿಸಿ, ತಮ್ಮ ಅಂತ್ಯ ಸಂಸ್ಕಾರಕ್ಕೆ ಬೇಕಾಗುವ ಸ್ಥಳವನ್ನು ಸ್ವಚ್ಛಗೊಳಿಸಿ ಅಲ್ಲಿ ಗಚ್ಚಿನ ಕಟ್ಟೆಯನ್ನು ಕಟ್ಟಿಸಿ ತುಲಸಿಕಾಷ್ಠ, ಚಂದನ ಕಾಷ್ಠ ಗಳನ್ನು ಸಂಗ್ರಹಿಸಿಡಬೇಕು ಎಂದು ಆಜ್ಞಾಪಿಸಿದರು. ಅದರಂತೆ ಸರಿಯಾಗಿ ಆ ದಿನ ಲಿಂಗಸುಗೂರಿಗೆ ಹತ್ತಿರದಲ್ಲಿ ಹರಿಯುತ್ತಿದ್ದ ಕೃಷ್ಣಾ ಭಾಗೀರಥಿಯ ಪವಿತ್ರ ಜಲವನ್ನು ತರಿಸಿ ಶುಭ್ರಸ್ನಾತರಾಗಿ, ಊರ್ಧ್ವಪುಂಡ್ರಗಳನ್ನು ಧರಿಸಿ ತಮ್ಮ ಪ್ರಿಯಶಿಷ್ಯರಾದ ಶ್ರೀ ಶ್ರೀಶ ಪ್ರಾಣೇಶದಾಸರಿಂದ ತೀರ್ಥವನ್ನು ತೆಗೆದುಕೊಂಡರು. ಅನಂತರ ಶಿಷ್ಯರ ತಲೆಯ ಮೇಲೆ, ಜಗನ್ನಾಥದಾಸರ ಸೇವೆಯನ್ನು ಹನ್ನೆರಡು ವರ್ಷಗಳವರೆಗೆ ಮಾಡಿದ ತಮ್ಮ ಪವಿತ್ರ ಕೈಗಳನ್ನು ಇಟ್ಟು ಆಶೀರ್ವದಿಸಿದರು. ಹೀಗೆ ಯಾವ ರೋಗ ರುಜಿನಾದಿಗಳಿಲ್ಲದೆ ಇಚ್ಛಾಮರಣವನ್ನು ಹೊಂದಿದ ಮಹಾತ್ಮರಾದರು ಈ ದಾಸರು.

ದಾಸರು ವೈಕುಂಠವಾಸಿಗಳಾದ ನಂತರ ಅವರ ಇಚ್ಛೆಯಂತೆ ಅವರ ಆಪ್ತ ಸ್ನೇಹಿತರಾದ ಶ್ರೀಕೃಷ್ಣಾಚಾರ್ಯ ಗಾರಲವಾಡ ಅವರು ದಾಸರ ವಂಶಸ್ಥರಿಗೆ ನಿತ್ಯಪೂಜೆ, ಆರಾಧನೆಗಳನ್ನು ಮಾಡಲು ಸಕಲ ಏರ್ಪಾಡುಗಳನ್ನು ಮಾಡಿ ಕೊಟ್ಟರು. ಇಂದಿಗೂ ದಾಸರ ಮನೆಯಲ್ಲಿ ಅದೇ ಪದ್ಧತಿ ನಡೆದಿದೆ.

ಗುರುಪ್ರಾಣೇಶದಾಸರು ಮಾಡಿದ ೧೮ ಪದಗಳು ದೊರೆತಿವೆ. ಪಂಢರಿರಾಯ, ಲಕ್ಷ್ಮೀದೇವಿ, ವಾಯುದೇವರು, ಸರಸ್ವತಿ, ರುದ್ರದೇವರು ಮೊದಲಾದ ದೇವಾನುದೇವತೆಗಳ ಸ್ತೋತ್ರ, ರಾಘವೇಂದ್ರ ಸ್ವಾಮಿಗಳು, ಸತ್ಯಪರಾಯಣ ಸ್ವಾಮಿಗಳು, ಪ್ರಾಣೇಶದಾಸರು ಇವರ ಸ್ತುತಿ ಪದಗಳೂ ದಾಸರಿಂದ ರಚಿತವಾಗಿವೆ. ಇವರಿಂದ ವಿಪುಲವಾದ ಕೀರ್ತನೆಗಳು ರಚನೆ ಯಾಗದೇ ಹೋದರೂ ಆದ ಕೀರ್ತನೆಗಳು ಭಕ್ತಿಭಾವಪೂರಿತವಾಗಿವೆ. ಕನ್ನಡ ಮತ್ತು ಸಂಸ್ಕೃತ ಮಿಶ್ರವಾದ ಭಾಷಾಶೈಲಿಯಿಂದ ಕೂಡಿವೆ. ಹೆಣ್ಣುಮಕ್ಕಳಿಗೆ ಹಾಡಲು ಅನುಕೂಲವಾಗುವಂತೆ,

"ಪಂಚಶರ ಪಿತನೆ ಅಹಿಮಂಚದಲಿ ಮಲಗಿಹನೆ
ಪಂಚಾನನಾದಿ ಸುರವಂದ್ಯಾ :
ಸುರವಂದ್ಯಾದುರಿತಾರಿ ಪಂಚಾಸ್ಯವದನಾ ಸಲಹೆಮ್ಮಾ"

ಎಂಬ ಒಂದು ಸುವ್ವಿ ಪದವೂ ರಚಿತವಾಗಿದೆ.

## ಶ್ರೀ ಶ್ರೀಶಪ್ರಾಣೇಶ ವಿಠಲರು

ಶ್ರೀಶಪ್ರಾಣೇಶವಿಠ್ಠಲರು ಪ್ರಾಣೇಶದಾಸರ ಮೊಮ್ಮಕ್ಕಳು, ಶ್ರೀಗುರುಪ್ರಾಣೇಶ ವಿಠ್ಠಲರ ಪರಮ ಶಿಷ್ಯರು. ಇವರ ಹೆಸರು ರಾಮರಾಯ. ಇವರ ಕಾಲ ಕ್ರಿ.ಶ. ೧೮೧೫ ರಿಂದ ೧೮೯೨.

ಪ್ರಾಣೇಶದಾಸರ ಅಣ್ಣಂದಿರಾದ ರಾಘಪ್ಪನವರ ಮಗಳಾದ ಹೀರೇವೆಂಕಮ್ಮ ಹಾಗೂ ಮುದಗಲ್ಲಿನ ಪಾಗಾ ವಾಸುದೇವರಾಯ ದಂಪತಿಗಳಿಗೆ ವರದೇಂದ್ರ ತೀರ್ಥರ ಅನುಗ್ರಹ ಹಾಗೂ ಜಗನ್ನಾಥದಾಸರ ಸೇವೆಯಿಂದ ಬಹುಕಾಲದ ಅನಂತರ ರಾಮರಾಯನೆಂಬ ಮಗ ಹುಟ್ಟಿದ.

ತಂದೆಯ ಅಕಾಲ ಮರಣದ ಅನಂತರ ರಾಮರಾಯನನ್ನು ಗುರುಪ್ರಾಣೇಶ ದಾಸರು ಲಿಂಗಸುಗೂರಿಗೆ ಕರೆದುತಂದು ಉಪನಯನವನ್ನು ಮಾಡಿದರು.

ಆದರೆ ರಾಮರಾಯನಿಗೆ ವಿದ್ಯೆಯ ಕಡೆಗೆ ಗಮನವೇ ಇರಲಿಲ್ಲ. ಈತನ ಹುಡುಗಾಟವನ್ನು ಕಂಡ ಗುರುಪ್ರಾಣೇಶರು ಒಮ್ಮೆ ವೆಂಕಟೇಶನ ಪೂಜೆಗಾಗಿ ಗಂಧತೇಯುತ್ತಿದ್ದರು, ಗಂಧದ ಕೊರಡಿನಿಂದಲೇ ರಾಮರಾಯನ ತಲೆಗೆ ಹೊಡೆದರು. ಒಡನೆ ರಕ್ತ ಹರಿಯತೊಡಗಿತು. ದಾಸರು ದುಷ್ಟರಕ್ತ ಹರಿದು ಹೋಗಲೆಂದು ಸುಮ್ಮನಿದ್ದು ಅನಂತರ ತಾವೇ ಸ್ನಾನಾದಿಗಳನ್ನು ಮಾಡಿಸಿ ವರದೇಂದ್ರ, ಗುರುರಾಜರ ಸನ್ನಿಧಿಗೆ ಕರೆದೊಯ್ದು ಮಂತ್ರೋಪದೇಶವನ್ನು ಮಾಡಿ, ದಾಸದೀಕ್ಷೆಯನ್ನಿತ್ತು ಶ್ರೀಶಪ್ರಾಣೇಶವಿಠ್ಠಲ- ಎಂಬ ಅಂಕಿತವನ್ನು ಕೊಟ್ಟರು. ಕೂಡಲೇ ಅವರಿಂದ 'ದಾಸರ ಭಾಗ್ಯವಿದು, ಹರಿದಾಸರ ಭಾಗ್ಯವಿದು'- ಎಂಬ ಕೀರ್ತನೆ ಹೊರಹೊಮ್ಮಿತು.

ಗುರುಗಳಾದ ಗುರುಪ್ರಾಣೇಶವಿಠ್ಠಲರ ಮಾರ್ಗದರ್ಶನದಲ್ಲಿ ಶ್ರೀಶವಿಠಲರಿಗೆ ಮಧ್ವಶಾಸ್ತ್ರದ ಅಧ್ಯಯನವಾಯಿತು. ಸುಜ್ಞಾನ ಹಾಗೂ ಸತ್ಕರ್ಮಾಚರಣೆಯಿಂದ ದಾಸರ ಬಾಳು ಅಪರಂಜಿಯಾಯಿತು.

ಅನಂತರ ಐದನಾಳ ಕುಲಕರಣಿ ಶ್ರೀನಿವಾಸರಾಯರ ಪುತ್ರಿ ರಾಘಮ್ಮನವ-ರೊಂದಿಗೆ ರಾಮರಾಯರ ವಿವಾಹವಾಯಿತು. ದೇವತಾರ್ಚನೆ ಗುರುಸೇವೆ-ಗಳು ನಿರಾತಂಕವಾಗಿ ನಡೆಯಲೆಂದು ವೆಂಕಟದಾಸರು (ಗುರುಪ್ರಾಣೇಶರು) ರಾಮರಾಯರಿಗೆ ತಮ್ಮ ಮನೆ ಮುಂದಿನ ವೆಂಕಟೇಶದೇವರ ಪೂಜೆಗೆ ನಿಯಮಿಸಿ ವಾಸಕ್ಕೆ ಒಂದು ಮನೆ, ಪರಮಾತ್ಮನ ನೈವೇದ್ಯಕ್ಕಾಗಿ ಒಂದು ಹೊಲವನ್ನು ಕೊಟ್ಟರು.

ಅನಂತರ ೧೮೬೭ರಲ್ಲಿ ಗುರುಗಳು ಹರಿಪದವನ್ನು ಸೇರಿದಾಗ, ಶ್ರೀಶಪ್ರಾಣೇಶ ದಾಸರು ವಾಸುದೇವನ ಪುರಕ್ಕೆ ತೆರಳಿದರು : "ಶ್ರೀಶನಾಪ್ರೀಯ ಗುರು ಪ್ರಾಣೇಶ ದಾಸಾರ್ಯರು" ಎಂಬ ಚರಮಗೀತೆಯನ್ನು ರಚಿಸಿದರು.

ಶ್ರೀಶಪ್ರಾಣೇಶದಾಸರು ತಾವು ಬಾಳಿದ ಅವಧಿಯಲ್ಲಿ ಅನೇಕ ಮಹಿಮೆ ಗಳನ್ನು ಮೆರೆದಿದ್ದಾರೆ. ಅವುಗಳಲ್ಲಿ ದಾಸರ ದೈವಭಕ್ತಿಯನ್ನು ಬಿಂಬಿಸುವ ಒಂದು ಘಟನೆ ಬಹು ಸ್ವಾರಸ್ಯಕರವಾಗಿದೆ. ಒಮ್ಮೆ ಅಂದಿನ ನೈಜಾಂ ಸರ್ಕಾರದ ಅಧಿಕಾರಿಯೊಬ್ಬ ದಾಸರಿಗೊಪ್ಪಿಸಿದ ವೆಂಕಟೇಶನ ಪೂಜೆ ಸರಿ ಯಾಗಿ ನಡೆದಿದೆಯೋ ಇಲ್ಲವೋ ಎಂಬುದನ್ನು ತಿಳಿದುಕೊಳ್ಳಬಯಸಿದನು. ಅವರನ್ನು ಕರೆಸಿ ಆ ಬಗೆಗೆ ವಿಚಾರಿಸಿದಾಗ, ಪೂಜೆ ಮಾಡುವವಳು ಲಕ್ಷ್ಮೀದೇವಿ ನಾನಲ್ಲ ಎಂದರು ದಾಸರು. ಮುಸಲ್ಮಾನನಾದ ಅಧಿಕಾರಿಗೆ ಸಂಶಯ ಬಂದು

ಆ ದೇವಸ್ಥಾನದ ಆಸ್ತಿಯನ್ನು ಮರಳಿ ಸರ್ಕಾರದ ವಶದಲ್ಲಿ ತೆಗೆದುಕೊಳ್ಳ ಬಯಸಿದನು. ಮರುದಿನ ಊರಿನ ಪ್ರಮುಖರು ವಿಷಯವನ್ನು ವಿವರಿಸಿ, ದಾಸರ ದೈವಭಕ್ತಿಯನ್ನು ಕುರಿತು ವಿವರಿಸಿದಾಗ ಇನಾಮಿನ ಜಮೀನು ಉಳಿಯಿತು.

ಭಕ್ತಿಯೊಂದಿಗೆ ತ್ಯಾಗ, ಅಪರಿಗ್ರಹಗಳು ಅವರ ಸ್ವಭಾವವಾಗಿದ್ದವು. ನೋಡಲು ಮೂಕರಂತೆ ಕಿವುಡರಂತೆ ಇರುತ್ತ ಸದಾ ಏಕಾಂತ ಭಕ್ತಿಯಲ್ಲಿ ಮನಸ್ಸಿಡುತ್ತಿದ್ದರು. ಶಿಷ್ಯರಾದರೂ ತಮ್ಮ ಅಂದಿನ ನೈವೇದ್ಯಕ್ಕಿಂತ ಹೆಚ್ಚಿನ ದ್ರವ್ಯವನ್ನು ಕೊಟ್ಟರೆ ಅದನ್ನು ತಿರುಗಿಕೊಟ್ಟು ಬಿಡುತ್ತಿದ್ದರು. ಕೊನೆಗಾಲದಲ್ಲಿ ಇವರ ನೆಚ್ಚಿನ ಶಿಷ್ಯರಾದ ಶ್ರೀ ಗೋರೆಬಾಳ ವೆಂಕಣ್ಣನವರು ಯಲಗುಂದಿ, ಶಿಲಹಳ್ಳಿಯೆಂಬ ಗ್ರಾಮಗಳನ್ನು ಅವುಗಳ ಮಧ್ಯದಲ್ಲಿದ್ದ ಸುಮಾರು ೮೦ ಎಕರೆ ತರಿ ಭೂಮಿಯನ್ನು ಕೊಡಲು ಹೋದರೆ ಅದನ್ನು ನಯವಾಗಿ ನಿರಾಕರಿಸಿ ತಮ್ಮ ಗುರುಗಳಾದ ಶ್ರೀ ಜಗನ್ನಾಥದಾಸರು, ಪ್ರಾಣೇಶದಾಸರು, ಅಲ್ಲದೆ ತಪೋನಿಧಿಗಳಾದ ವರದೇಂದ್ರತೀರ್ಥರು ವಾಸಿಸಿದ್ದ ಲಿಂಗಸುಗೂರು ಒಂದು ಪುಣ್ಯಸ್ಥಳ. ಆದ್ದರಿಂದ ತಾವು ಅಲ್ಲಿಯೇ ಉಳಿಯುವುದಾಗಿ ಹೇಳಿದರು.

ಇವರ ಏಕಾಂತ ಭಕ್ತಿಗೆ ಮೆಚ್ಚಿ ಶ್ರೀಜಂಬಖಂಡಿ ವಾದಿರಾಜಾಚಾರ್ಯರು ಇವರನ್ನು ಚಲಪ್ರತಿಮೆಯೆಂದು ಕರೆದು ಪ್ರತಿಮೆಗೆ ಮಾಡುವ ಶೋಡಷೋಪ ಚಾರಗಳನ್ನು ಮಾಡಿ ಪೂಜಿಸುತಿದ್ದರಂತೆ. ಆಗಾಗ ಈ ಈರ್ವರ ಮಧ್ಯೆ ಬೆಳಗಾವಿ ಯಲ್ಲಿ ತತ್ತ್ವವಿಚಾರವೂ ನಡೆಯುತ್ತಿದ್ದಿತಂತೆ. ಆಚಾರ್ಯರನ್ನು ಕುರಿತು, "ಕಂಡು ಬಹಳ ಧನ್ಯನಾದೆನೋ ಸಿರಿಮಂಗಳಾತ್ಮರ" ಎಂಬ ಪದವನ್ನು ರಚಿಸಿದ್ದಾರೆ.

ಶ್ರೀಶಪ್ರಾಣೇಶದಾಸರು ೧೬ ದೇವರ ಸ್ತೋತ್ರಗಳನ್ನು ರಚಿಸಿದ್ದಾರೆ. ಅವುಗಳಲ್ಲಿ, ನಾರಾಯಣ ಗೋವಿಂದ ಎಂಬ ದಶಾವತಾರ ಸ್ತೋತ್ರ, ಲಿಂಗಸುಗೂರಿನ ಸುತ್ತಮುತ್ತಲಿನ ಪ್ರದೇಶದಲ್ಲಿ ಸ್ಥಾಪಿತವಾದ ಮುಖ್ಯ ಪ್ರಾಣದೇವರ ಸ್ತೋತ್ರಗಳು, ಶ್ರೀ ರಾಘವೇಂದ್ರರ ಹಾಗೂ ತಮ್ಮ ಗುರುಗಳ ಸ್ತೋತ್ರಗಳು ಇವೆ.

ದಾಸರು ತಮ್ಮ ಕೆಲವು ಜನ ಭಕ್ತರಿಗೆ ಅಂಕಿತವನ್ನು ಕೊಟ್ಟು ಅಂಕಿತಪದ ಗಳನ್ನು ರಚಿಸಿದ್ದಾರೆ. ಶ್ರೀ ಮೊದಲಗಿತ್ತಿ ಕೃಷ್ಣಣ್ಣನವರು, ಶ್ರೀ ಪಲಿಮಾರು ಕೃಷ್ಣಣ್ಣ ನವರು, ನರಸಿಂಹಚಾರ್ಯಜೋಶಿ ಇವರು ಅಂಕಿತ ಪಡೆದ ಹರಿದಾಸರು, ಅಲ್ಲದೇ ಇವರ ಪ್ರಮುಖ ಶಿಷ್ಯ ವರ್ಗದಲ್ಲಿ ಮದ್ರಾಸಿನ ದಾಸಪ್ರಕಾಶದ ಒಡೆಯ ರಾದ ಶ್ರೀ ಕೆ. ಸೀತಾರಾಮರಾಯರೂ ಸೇರಿದ್ದರು.

ದಾಸರು ಕೇವಲ ೧೬ ಕೀರ್ತನೆಗಳನ್ನು ಅಂಕಿತ ಪದಗಳನ್ನು ರಚನೆ ಮಾಡಿದ್ದರು. ಈ ಎಲ್ಲ ಹಾಡುಗಳು ಭಕ್ತಿರಸಪೂರ್ಣವಾದ ಸರಳ ಸುಂದರ ರಚನೆಗಳಾಗಿವೆ.

ಶ್ರೀಶಪ್ರಾಣೇಶವಿಠಲರು ಪ್ರತಿವರುಷ ಮಂತ್ರಾಲಯ ಯಾತ್ರೆಯನ್ನು ಕೈಕೊಳ್ಳುತ್ತಿದ್ದರಂತೆ, ಹಾಗೆ ಒಮ್ಮೆ ರಾಯರು ಕನಸಿನಲಿ ಬೇಡವೆಂದು ಅಪ್ಪಣೆ ಕೊಡಿಸಿದಾಗಲೂ, ಪತ್ನಿಯ ಆಗ್ರಹಕ್ಕೆ ಮಣಿದು ಕುದುರೆಯ ಮೇಲೆ ಪ್ರಯಾಣ ಮಾಡುತ್ತಿದ್ದಾಗ ಕೆಳಗೆ ಬಿದ್ದು ಎರಡು ಕಾಲುಗಳ ಶಕ್ತಿಯನ್ನು ಕಳೆದುಕೊಂಡರಂತೆ. ಆದರೂ ಮುಂದೆಯೂ ಅದೇ ರೀತಿ ಮಂತ್ರಾಲಯ ಬೆಳಗಾವಿ ಮೊದಲಾದೆಡೆಗೆ ಶಿಷ್ಯರನ್ನು ಅನುಗ್ರಹಿಸಲು ಯಾತ್ರೆ ಮಾಡುತ್ತಿದ್ದರಂತೆ.

ದಾಸರಾಯರು ಹೀಗೆ ಪರಮ ಭಾಗವತ ಧರ್ಮವನ್ನು ಪಾಲಿಸುತ್ತ ಶಾ.ಶ. ೧೮೧೪ ಕ್ರಿ.ಶ. ೧೮೯೨ ರಲ್ಲಿ ನಿರ್ಯಾಣ ಹೊಂದಿದರು. ಇವರಿಂದ ಉದ್ಧಾರವಾದ ಗುರುಶ್ರೀಶಪ್ರಾಣೇಶ ವಿಠಲರು, ಶ್ರೀನಿವಾಸ ವಿಠಲರು, ತಿರುಪತಿ ವಿಠಲರು, ವಾಮನ ವಿಠಲರು, ವರದೇಶ ವಿಠಲರು, ವರದೇಂದ್ರ ವಿಠಲರೇ ಮೊದಲಾದವರು ಇವರನ್ನು ಸ್ತುತಿಸಿ ಪದಗಳನ್ನು ರಚನೆ ಮಾಡಿದ್ದಾರೆ.

## ಸಂಪಾದಕರ ನುಡಿ

ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಯ ಅಡಿಯಲ್ಲಿ ಶ್ರೀಪಾಣೇಶ ದಾಸರು ಗುರು ಪ್ರಾಣೇಶದಾಸ ಮತ್ತು ಶ್ರೀಪ್ರಾಣೇಶದಾಸರ ಕೀರ್ತನೆಗಳನ್ನು ಒಂದು ಸಂಪುಟದಲ್ಲಿ ಸಂಪಾದಿಸುವ ಗುರುತರ ಕಾರ್ಯವನ್ನು ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ನನಗೆ ವಹಿಸಿಕೊಟ್ಟು ಈ ಒಂದು ಅಲ್ಪ ಸೇವೆ ಮಾಡುವ ಭಾಗ್ಯವನ್ನು ಕಲ್ಪಿಸಿಕೊಟ್ಟಿತು. ಮೊದಲನೆಯ ದಾಗಿ ಸಂಪಾದಕ ಮಂಡಳಿಯಲ್ಲಿ ಅನೇಕ ಪರಿಣಿತರ ಜೊತೆಯಲ್ಲಿ ನನ್ನನ್ನು ಸದಸ್ಯೆಯನ್ನಾಗಿ ಮಾಡಿದುದಕ್ಕೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಅಲ್ಲದೆ ಪ್ರಸಕ್ತ ಸಂಪುಟ ರಚನೆಯ ಕಾರ್ಯವನ್ನು ಮಾಡಲು ಅನುವು ಮಾಡಿಕೊಟ್ಟದ್ದಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾಗಿ, ಈ ಕೆಲಸದಲ್ಲಿ ಸಲಹೆ ಸೂಚನೆಗಳನ್ನು ಕೊಟ್ಟ, ಡಾ॥ ಶ್ರೀನಿವಾಸ ಹಾವನೂರ, ಡಾ॥ ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿಯವರಿಗೂ ನನ್ನ ವಂದನೆಗಳು ಸಲ್ಲುತ್ತವೆ.

ಹಿಂದೆ ದಾಸಸಾಹಿತ್ಯವನ್ನು ಏಕಾಂಗಿಯಾಗಿ ಸಂಗ್ರಹಿಸಿ, ಪ್ರಕಟಿಸಿದ ಲಿಂಗಸುಗೂರಿನ ವರದೇಂದ್ರ ಹರಿದಾಸ ಸಾಹಿತ್ಯ ಮಂಡಳಿಯ ಮೂಲಕ ಶ್ರೀ ಗೋರೆಬಾಳ ಹನುಮಂತರಾಯರ ಅಂದಿನ ಅನೇಕ ಗ್ರಂಥಗಳು ಇಂದು ಅಲಭ್ಯವಾಗಿವೆ. ಇಂತಹ ಕಠಿಣ ಪರಿಸ್ಥಿತಿಯಲ್ಲಿ ನನಗೆ ಹೈದ್ರಾಬಾದಿನ ಲಿಂಗಸುಗೂರು ವಿಠಲರಾಯರು ಶಾ.ಶ ೧೮೪೮ ರಲ್ಲಿ (ಕ್ರಿ.ಶ. ೧೯೨೬) ರಲ್ಲಿ ಪ್ರಕಟವಾದ ಶ್ರೀ ಪ್ರಾಣೇಶ ವಿಠಲರ ಕೀರ್ತನೆಗಳು ಮತ್ತು ಗುರು ಪ್ರಾಣೇಶ, ಶ್ರೀಶಪ್ರಾಣೇಶ ವಿಠಲರ ಕೀರ್ತನೆಗಳು, ಶ್ರೀವರದೇಂದ್ರ ಸ್ವಾಮಿಗಳವರ ಸ್ವಪ್ನವೃಂದ ವನಖ್ಯಾನವೂ ಎಂಬ ಬಹು ಅಪರೂಪವಾದ ಕೃತಿಯನ್ನು ನನಗೆ ಕೊಟ್ಟು ನನ್ನನ್ನು ತುಂಬು ಹೃದಯದಿಂದ ಆಶೀರ್ವದಿಸಿದರು. ಮುಂದೆ ಕೆಲ ಸಮಯ ದಲ್ಲಿ ಅವರು ವೈಕುಂಠವಾಸಿಗಳಾದರು. ಈ ಸಂಪುಟ ಹೊರಗೆ ಬರುವ ಸಂದರ್ಭದಲ್ಲಿ ಅವರು ನಮ್ಮ ಮಧ್ಯದಲ್ಲಿಲ್ಲದಿರುವುದು ನಮ್ಮ ದುರ್ಭಾಗ್ಯವಷ್ಟೆ.

ಮುಂದೆ ೧೯೬೮ ರ ಅನಂತರ ಪುಸ್ತಕದಲ್ಲಿಯ ಕೀರ್ತನೆಗಳನ್ನು ಕಠಿಣ ಶಬ್ದಾರ್ಥ ಹಾಗೂ ಕ್ಲಿಷ್ಟ ವಿಷಯಗಳ ವಿವರಣೆಗಳೊಂದಿಗೆ ವರದೇಂದ್ರ ಹರಿದಾಸ ಸಾಹಿತ್ಯ ಮಂಡಳವು ಐದು ಭಾಗಗಳಲ್ಲಿ ಪ್ರಕಟಿಸಿತು.

೧)ದೇವತಾಮನನ ೨) ಬೋಧಾಮೃತ ೩) ಸಾತ್ವಿಕ ಸ್ತವನ ಅಥವಾ ಋಜುನಮನ ೪) ಗುರುನಮನ ೫) ರತ್ನಾಕರಸುತಾಸ್ತುತಿ ಎಂಬ ಐದು ಸಂಗ್ರಹಗಳನ್ನು ಹೊರ ತಂದವರು ಶ್ರೀ ಗೋರೆಬಾಳ ಹನುಮಂತರಾಯರ ಸೋದರಳಿಯಂದಿರೂ ದಾಸ ಸಾಹಿತ್ಯದಲ್ಲಿ ಕಠಿಣ ಪರಿಶ್ರಮ ಹಾಗೂ ಭಕ್ತಿಶ್ರದ್ಧೆ ಯುಳ್ಳವರೂ ಆದ ಲಿಂಗಸುಗೂರಿನ ಸೀಮಾಮಾ ಅವರು. ಅವರು ಮಂಡಳದ ಕಾರ್ಯದರ್ಶಿಗಳೂ ಆಗಿದ್ದವರು. ಈ ಸಂಪಾದನ ಕಾರ್ಯಕ್ಕೆ ತೊಡಗುವ ಮೊದಲು ನನಗೆ ಅವರ ಹಾಗೂ ಇಂದಿಗೂ ನಮ್ಮ ಮಧ್ಯದಲ್ಲಿರುವ ಶ್ರೀಯುತ ಸಂತೆಕೆಲ್ಲೂರು ವೆಂಕಟರಾಯರು, (ಅವರನ್ನು ಸುಳಾದಿ ವೆಂಕಣ್ಣನವರೆಂದೇ ಜನ ಕರೆಯುತ್ತಾರೆ,) ಈ ಇಬ್ಬರೂ ಹಿರಿಯರ ಆಶೀರ್ವಾದವೂ ನನಗೆ ದೊರೆಯಿತು. ವೆಂಕಣ್ಣನವರು ನನಗೆ 'ಗುರುಪ್ರಸಾದ' ಎಂಬ ಶ್ರೀ ಪ್ರಾಣೇಶ ವಿಠಲ ದಾಸರ ಕೀರ್ತನ ಸಂಗ್ರಹವನ್ನು ಕೊಟ್ಟು ಉಪಕರಿಸಿದರು. ಈ ಸಂಗ್ರಹವನ್ನು ಸಿದ್ಧಪಡಿಸಿದವರು ದಾಸರ ವಂಶಸ್ಥರಾದ ಶ್ರೀ ಅಡವಿರಾವದಾಸ ಲಿಂಗಸುಗೂರು ಅವರು.

ಮೊದಲಿನ ಐದು ಪುಸ್ತಕಗಳನ್ನು ನನಗೆ ಕೊಟ್ಟವನು ನನ್ನ ಸೋದರ

ಸಮಾನನಾದ ಸಂತೆಕೆಲ್ಲೂರು ಪ್ರಹ್ಲಾದನು. ಮೇಲೆ ಹೆಸರಿಸಿದವರೆಲ್ಲರೂ ಪ್ರಾಣೇಶದಾಸರ ವಂಶಸ್ಥರು ಮತ್ತು ಬಂಧುಗಳು. ಕಂಪ್ಲಿಯ ಕುಂಟೋಜಿ ದಾಸರ ವಂಶಸ್ಥರಾದ ಶ್ರೀ ಖಜಾನ್ದಾರ ರಾಘುವೇಂದ್ರರಾಯರು ಈ ಭಾಗದ ದಾಸಸಾಹಿತ್ಯದ ವಿಷಯದಲ್ಲಿ ಅಧಿಕಾರಯುಕ್ತವಾದ ಜ್ಞಾನವುಳ್ಳವರು, ನನಗೆ ಸೋದರ ಸಮಾನರಾದ ರಾಘಣ್ಣನವರು ಶ್ರೀ ಪ್ರಾಣೇಶದಾಸರ ಎರಡು ಸುಳಾದಿಗಳನ್ನೂ ಕಠಿಣ ಶಬ್ದಾರ್ಥದ ಒಂದು ಚಿಕ್ಕ ನೋಟಬುಕ್ಕನ್ನೂ ಕೊಟ್ಟು ನನ್ನ ಸಂಪಾದನ ಕಾರ್ಯದಲ್ಲಿ ಸಹಾಯಮಾಡಿದ್ದಕ್ಕೆ ಅವರಿಗೆ ನನ್ನ ಅನಂತ ಕೃತಜ್ಞತೆಗಳು ಸಲ್ಲುತ್ತವೆ.

ಪ್ರಾಣೇಶದಾಸರ ಎಲ್ಲ ಹಾಡುಗಳನ್ನು ದುಂಡಕ್ಷರಗಳಲ್ಲಿ ಪ್ರತಿ ಮಾಡಿಕೊಟ್ಟ ವಿದ್ಯಾರ್ಥಿನಿ ಸೀತಾಗುಡೂರು, ಹಾಗೂ ವಿನಾಯಕ ಜೋಶಿಯವರಿಗೆ ನನ್ನ ಹರಕೆಗಳು.

ನನ್ನೆಲ್ಲ ಸಾಹಿತ್ಯಿಕ : ಸಾಮಾಜಿಕ ಕಾರ್ಯಗಳಲ್ಲಿ ಸದಾ ಉತ್ಸಾಹ ಹಾಗೂ ಸ್ಫೂರ್ತಿಯನ್ನೂ ತುಂಬುವ ನನ್ನ ಪತಿ ಶ್ರೀ ನರಸಿಂಗರಾಯರಿಗೆ ಕೃತಜ್ಞತೆ ಸಲ್ಲಿಸದಿರುವುದು ಸಾಧ್ಯವೆ ?

ಕೊನೆಯದಾಗಿ ಎಲ್ಲರ ಅಂತರಂಗದಲ್ಲಿ ನಿಂತು ಕೈಹಿಡಿದು ನಡೆಸುತ್ತಿರುವ ಪಾಂಡುರಂಗ ವಿಠ್ಠಲನಿಗೆ ಅನಂತಾನಂತ ನಮನಗಳು ಸಲ್ಲುತ್ತವೆ.

**– ಡಾ॥ ಶ್ರೀಮತಿ ಮಂದಾಕಿನಿ**

# ಕೀರ್ತನೆಗಳ ಕ್ರಮಸೂಚಿ

## ಶ್ರೀಕೃಷ್ಣಲೀಲಾ ಕೀರ್ತನೆಗಳು

## ದೇವ ದೇವತೆಗಳ ಸ್ತುತಿ

## ಯತಿಗಳ ಪರಂಪರಾ ಸ್ತೋತ್ರ ಪದಗಳು

## ಮಾನಸ ಪೂಜಾಕ್ರಮ



## ತಂತ್ರಸಾರೋಕ್ತಿ ಕೇಶವಾದಿ ಇಪ್ಪತ್ತನಾಲ್ಕು ಮೂರ್ತಿ ಲಕ್ಷಣ



## ಗ್ರಂಥಮಾಲಿಕಾ ಸ್ತೋತ್ರ



## ಶ್ರೀ ಗೋಪಿಚಂದನ ಮುದ್ರಾಧಾರಣ ಮಹಾತ್ಮ್ಯ



## ಶ್ರೀ ದೇವರಿಗೆ ನೈವೇದ್ಯ ಇಡುವ ಕ್ರಮ



## ತಿಥಿತ್ರಯದಲ್ಲಿ ವರ್ಜ್ಯ ಪದಾರ್ಥಗಳ ವಿವರ

## ಶ್ರೀ ಗುರುಪ್ರಾಣೇಶವಿಠಲರ ಕೀರ್ತನೆಗಳು

### ಶ್ರೀ ದೇವರ ಸ್ತೋತ್ರ

## ಸುವ್ವಿ ಪದ



## ಉಪದೇಶ ಪರ ಪದ



## ಲಕ್ಷ್ಮೀದೇವಿ ಸ್ತೋತ್ರ



## ಶ್ರೀ ವಾಯುದೇವರ ಸ್ತುತಿ



## ಸರಸ್ವತಿದೇವಿ ಸ್ತುತಿ



## ರುದ್ರದೇವರ ಸ್ತುತಿ



## ಶ್ರೀ ಪ್ರಾಣೇಶದಾಸಾರ್ಯರ ಸ್ತುತಿ

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|

## ಶ್ರೀ ವೇ. ನರಸಿಂಹಾಚಾರ್ಯ ಜೋಶಿ, ಕುಷ್ಟಗಿಯವರಿಗೆ ನೀಡಿದ ಅಂಕಿತಪದ



## ಗುರು ಶ್ರೀಶಪ್ರಾಣೇಶವಿಠಲರ ಹಾಡು



## ಶ್ರೀನಿವಾಸವಿಠಲರ ಹಾಡು



## ತಿರುಪತಿವಿಠಲರ ಹಾಡು



## ವಾಮನ ವಿಠಲರ ಹಾಡು



## ವರದೇಶವಿಠಲರ ಹಾಡು



## ವರದೇಂದ್ರವಿಠಲರ ಹಾಡು



## ವರದೇಂದ್ರವಿಠಲರ ಹಾಡು : ನಿರ್ಯಾಣ ಸ್ತೋತ್ರ



## ಶ್ರೀವರದ ವಿಠಲರ ಹಾಡು

# ಗಣೇಶ ಪ್ರಾರ್ಥನೆ

೧

ಲಂಬೋದರ ಪಾಹೀ ಪಾಹೀ ಜಗದ್ಗುರು ।
ಶಂಭುನಂದನ ಸುರಸುತ ಪಾದಾ ಪ

ಯೋಗೀಶಾರ್ಚಿತ ಶ್ರೀ ಪಾರ್ವತಿ ಪುತ್ರ ನತಮಿತ್ರಾ ।
ಆಗಸವಾಳ್ದ ಮೂಷಕ ರೂಢಾ ॥
ನಾಗಶಯನನ ಪಾದ ಧ್ಯಾನದಲ್ಲಿಡು ನಿತ್ಯಾ ।
ಶ್ರೀ ಗಣಪತಿ ನಿನ್ನ ಬಲಗೊಂಬೆ ೧

ಶ್ರೀವರ ಶ್ರೀರಾಮಚಂದ್ರ ಧರ್ಮರಾಯಾ ।
ದೇವೇಂದ್ರಾ ನಿನ್ನ ಪೂಜಿಸಿದಾರೋ ॥
ಕೇವಾಲಾ ಕಲಿ ದುರ್ಯೋಧನ ಪೂಜಿಸದೆ ಕೆಟ್ಟಾ ।
ಶ್ರೀ ವಿಘ್ನೇಶ್ವರ ನಿನ್ನ ಬಲಗೊಂಬೆ ೨

ದನುಜಾರ ಮೋಹೀಸೂವದಕೆ ಸಂಕಟ ಚೌತಿ ।
ಮನಿಸೀ ಪೂಜಿಸಿಕೊಂಬೆ ಖಳರಿಂದಾ ॥
ಮುನಿ ವ್ಯಾಸ ಕೃತ ಗ್ರಂಥಾರ್ಥವ ತಿಳಿದು ಬರೆದಾ ।
ಗಣರಾಜಾ ನಿನ್ನ ಪಾದಾ ಬಲಗೊಂಬೆ ೩

ಶಂಬು ಚಕ್ರಾಂಕಿತಾ ಪಾಶಧಾರನೇ ರಕ್ತ ।
ಅಂಬರಾದ್ವಯ ಭೂಷಾ ನಿರ್ದೋಷಾ ॥
ಶಂಬರಾರಿಪುಶರಾ ವಿಜತಾಮೃದ್ಭವ ಗಾತ್ರಾ ।
ಅಂಬಾರಾಧಿಪ ನಿನ್ನ ಬಲಗೊಂಬೆ ೪
(ಅಂಬೂಜಾಲಯಜಾನೆ ಬಲಗೊಂಬೆ)

ಏಕವಿಂಶತಿ ಪುಷ್ಪಾನ ಮನ ಮೋದಕ ಪ್ರೀಯ ।
ನೀ ಕರುಣಿಪುದೂ ನಿನ್ನವಾನೆಂದು ॥
ಸಾಕು ವಿಷಯ ಸುಖಾ ಸುಜನಾರೋಳಾಡಿಸೊ ।
ಏಕಾದಂತನೆ ನಿನ್ನ ಬಲಗೊಂಬೆ ೫

ಏನು ಬೇಡುವೊದಿಲ್ಲಾ ಏನು ಮಾಡುವೊ ಕರ್ಮ ।
ಶ್ರೀನಿವಾಸನೆ ಮಾಡಿಸುವನೆಂಬೊ ॥
ಜ್ಞಾನಾವೆ ಯಂದೆಂದಿಗಿರಲಿ ತಾರಶಾಂತ- ।
ಕಾನುಜಾ ನಿನ್ನ ಬಲಗೊಂಬೆ ೬

ಪ್ರಾಣಸೇವಕ ಚಾಮೀಕರವರ್ಣ ಗಜಮುಖ ।
ಪ್ರಾಣೇಶ ವಿಠಲನಾ ಸುಕುಮಾರಾ ॥
ನೀನೊಲಿದೆಮಗೆ ವಿಘ್ನವ ಪರಿಹರಿಸುತ ।
ಪೋಣಿಸು ಸನ್ಮತೀ ಬಲಗೊಂಬೆ ೭

## ಶ್ರೀಹರಿ ಸಂಕೀರ್ತನೆ

### ೨

ಶರಣು ಹೊಕ್ಕೆನೊ ನಿನ್ನ ಜಾತರೂಪಾಂಗದ
ವರದ ಕೈಪಿಡಿಯನ್ನ ಪರಮೇಷ್ಠಿ ವಂದಿತ ।
ಚರಣ ಸುರ ಶಿರೋರನ್ನ ಸುಖ ಜ್ಞಾನ ಪೂರ್ಣಾ ಪ

ಉರಗ ಪರ್ವತ ನಿಲಯ ಭಕತರ ಕರೆದು ।
ವರಗಳ ಕೊಡುವ ವೆಂಕಟ । ಗರುಡವಾಹನ ಲಕ್ಷ್ಮೀಪತಿ
ಮಂದರಧರಾಧರಧಾರ ದೇವ ಅ.ಪ.

ಕಾಮಿತಾರ್ಥದ ರಂಗ ಮಧ್ವಮುನಿ ಪೂಜಿತ ।
ರಾಮ ಭವಭಯ ಭಂಗ ದಶರೂಪಿ ಶರಧಿಜಾ ।

ಪ್ರೇಮ ಸುಜನರ ಸಂಗ ಕೊಡು ಎಂದೆಂದಿಗೂ ॥
ತಾಮಸ ರಿಪು ಕುರಂಗಾ ಅಂಕ ಸಖ ಸಾಂಗ ।
ಹೇಮಗರ್ಭನ ನಾಭೀ ಕಮಲದಿ ।
ನೀ ಮುದದಿ ಪಡೆದೀ ಚರಾಚರ ।
ನೇಮದಿಂದಲಿ ಸೃಜಿಸ ಪೇಳಿದ ।
ಸ್ವಾಮಿ ನೀ ಸರ್ವರೊಳು ವ್ಯಾಪಿಸಿ ।
ಭೂಮಿಯೊಳು ಸಾತ್ವಿಕರು ರಾಜಸ ।
ತಾಮಸರ ನಿರ್ಮಾಣ ಮಾಡಿ ಸು ।
ಧಾಮ ಸಖಿಗತಿ ದುರ್ಗತಿಗಳನು ।
ಈ ಮರುಳು ಜನರಿಗೀಯುತ ।
ನೀ ಮಡಿವಂತನು ಎನಿಸುವೆ ಲೇಸು
ತ್ರಾಮಾ ವರಜ ಬಲು ಸೋಜಿಗವೊ ಇದು ।
ವ್ಯೋಮನ ದೀಪದ ನೀ ಮಾಡಿದ ಮರ್ಯಾದೆಯೋ
ಮರಳ್ಯೊಬ್ಬರು ಪೇಳುವರುಂಟೇ ೧



ಪುಂಡರೀಕದಳಾಕ್ಷ ತನ್ಮಾತ್ರಾ ದೂರ ।
ಪಾಂಡುರಂಗಘ ಕಕ್ಷ ಗಾಂಗೇಯ ಗೀತ ।
ಪಾಂಡುನಂದನ ಪಕ್ಷ ದರ ಚಕ್ರಪಾಣಿ ।
ಪುಂಡ ಕೌರವ ಶಿಕ್ಷ ಶ್ರೀ ವತ್ಸ ವಕ್ಷ ।
ಕುಂಡಲೀಶ ಶಯನ ವಿದುರ ಸಖ । ಮಾ–
ರ್ತಾಂಡ ಕೋಟಿ ಪ್ರಕಾಶ ಹರಿವು ।
ದ್ದಂಡ ಮಹಿಮನೆ ಕಂಡ ಕಂಡವ ।
ರಂಡಲೆಯ ಯನ್ನ ಶರೀರವು ॥
ಬೆಂಡು ಆಯಿತು ಕಾಣೆ ಕಾಯ್ವರ ।
ಜಾಂಡೋದರ ನಿನ್ನುಳಿದು ಓರ್ವರ ।
ದಂಡಿಸದೆ ಬರುತಿರ್ಪ ಜನ್ಮವ ।
ಖಂಡಿಸಿ ನಿನ್ನ ನಾಮವುಳಿಸೊ ॥
ಮಂಡೋದರೀ ವಲ್ಲಭ ಶಕಟ ಪ್ರ ।
ಚಂಡ ಮುರಾದಿ ಖಳ ಕುಲಾಂತಕ ।

ದಂಡಾತ್ಮಜ ರಕ್ಷಕ ಹರಿ ಮೇ ।
ಷಾಂಡಜ ಸಂಹರ ಕರುಣದಿ ನೋಡೋ ೨

ಧರಣಿಯೊಳಗಿನ ರಾಯರೆಂಬುವರು ವೇಷಕಾ ।
ಪುರುಷನಿಗೆ ಬಹು ದ್ರವ್ಯವಿತ್ತಿನ್ನು ವೇಷವ ।
ತರಲಿಗೊಡರೆಲೊ ದೇಹ ಬಹು ತಾಳಿ ಬಂದೆನೊ ।
ಕರುಣವಿಲ್ಲದೆ ಜೀಯ । ಸಾಕೆನ್ನೂ ಮಾಯಾ- ॥
ವರನೆ ಅಟವು ಮಾತ್ರ ಹಣ ಕೊಡ- ।
ದಿರೊ ನಾ ಬಲ್ಲೆನೊ ಕುಡಿದ ಸ್ತನ - ಪಯ ।
ಶರಧಿ ದ್ವಿಗುಣವು ಯನ್ನ ಅಸ್ಥಿಯು ।
ಗಿರಿಗೆ ದ್ವಿಗುಣವಾಗಿಪ್ಪವೊ ಇಂತಿ ।
ಕರೆ ಕರೆಯ ನಾನಾರಿಗುಸಿರಲಿ ।
ಸುರಪತಿ ಪ್ರಾಣೇಶ ವಿಠ್ಠಲ ।
ತರುಣಿ ಸುತ ಧನ ಪಶು ಎಂಬುವ ಈ ।
ಪರಮ ಮೋಹದ ಮಡುವೊಳ್ಬಿದ್ದು ॥
ಹರಿ ನಿನ್ನೊಂದಿನ ಸ್ಮರಿಸಿಲ್ಲವೋ ನೀ ।
ನರಿಯೆ ನಿಂತ್ಯಲ್ಲವೋ ಪರತರ ।
ಕರಿವರದಿ ಮ್ಯಾಲೆನರಿದದು ಮಾಡುವ - ।
ದರಿ ಕರಿಷಂಡ ಮೃಗೇಂದ್ರ ಪರಾಶು ॥ ಶರಣು ೩

## ೩

ಜಯ ಪಾಂಡುರಂಗ ಹೋ ಜಲದ ನಿಭಾಂಗ ಹೋ ।
ಜಗದಂತರಂಗ ಹೋ ಜಯ ಪಾಂಡುರಂಗ ಹೋ ಪ

ನೀಲ ಭೂಧರವಾಸ ಕೌಸ್ತುಭ ಭೂಷ ರಮೆಯಾಧೀಶ ಸುಮನಸ ।
ಪಾಲ ಗುಣಗಂಭೀರ ನವನೀತಚೋರ ಕುಜನ ಕುಠಾರ । ನರಹರಿ ॥
ಫಾಲಲೋಚನ ಬಂಧು ದೈತ್ಯನ ಕೊಂದು ವೇದವ ತಂದು ದ್ರುಹಿಣಗೆ ।
ಮೇಲು ಶರುಣುದಲಿತ್ತೆ, ಮಂದರ ಪೊತ್ತೆ ಸುಂದರ ಮೂರ್ತಿ ೧

ನಿಗಮ ವಂದಿತ ರಾಮ ಹರಿ ಪೂರ್ಣ ಕಾಮ ಸದ್ಗುಣಧಾಮ, ವಾಮನ ।
ಮಗನ ಮೂಗಿಲಿ ಪುಟ್ಟಿ, ಹೇಮನ ಕುಟ್ಟಿ, ಅವನಿ ತಂದಿಟ್ಟಿ, ಈರೇಳು ॥
ಜಗದಿ ಪೂಜಿತನಾದಿ ಕೈಟಭ ಭೇದಿ ಇಭಪನ ಕಾಯ್ದಿ, ಪ್ರಣತರ ।
ಅಘವನೋಡಿಸುತಿಪ್ಪ ಹಲಾಯುಧ ತಲ್ಪ ಮನ್ಮಥನಪ್ಪ ೨

ವೇದ ವಿಸ್ತರ ಮಾಡ್ಡೀ, ದಾನವ ಬೇಡ್ಡೀ, ದನುಜನಿಗ್ಯೋಡ್ಡೀ, ಕುರುಕುಲ ।
ಸೂದನ, ಕಿರೀಟ ಸೂತ, ಪವಮಾನ ತಾತ, ದುರ್ಬಲನಾಥ ಎನ್ನನು ॥
ಆದರದಿ ಕೈಪಿಡಿಯೋ, ದುರಿತವ ತಡೆಯೊ, ದುರ್ಮತಿ ಕಡಿಯೊ, ಅಗಣಿತ ।
ಮೋದ ಪ್ರಾಣೇಶ ವಿಠಲ, ನರಮೃಗ, ನಿಟಿಲನೇತ್ರ, ಅಕುಟಲ ೩

೪

ಯೋಗಧರ ತಾತ ಕಘ ಲೋಕಪತಿ ದೇವ ಸಿರಿ ।
ಯೋಗ ನಿನ ಪದಕೆ ಶರಣೆಂಬುವೆನೊ ಕಾಯೋ ಪ

ಯೋಗಾಂಡದೊಳ ಹೊರಗೆ ವ್ಯಾಪ್ತನೆ ಗುಣರಹಿತನೆ ।
ಯೋಗಾಂಬರ ಧರ ಫ–ಮುಖ ಜನಕ ॥
ಯೋಗ ಗಾತ್ರ ಷ ದೂರ ವರ್ಗದ್ವಯ ಅವತಾರ ।
ಯೋಗ ಪಾಣೀ ಸುತ ಪ್ರಿಯ ಸುಮತಿ ಕೊಡು ಜೀಯ ೧

ಯೋಗರಾಯಗೆ ಅದೇ ಪದವಿ ಕರುಣಿಸಿ ಕೊಟ್ಟೆ ।
ಯೋಗೇಶಣಾಸ್ತ್ರ ಪಿತ ದಂತಿವರದ ॥
ಯೋಗದಲಿ ಮನಸು ನಿಶ್ಚೈಸೊ ಹಾ ಕರ್ತೃತ್ವ ।
ಯೋಗಫಲ ಸ್ವೀಕರಿಸುತಿಹ ಕಂಜನಾಭ ೨

ಯೋಗನಾಗೆಯೋ ದುರ್ಮತಿಗಳಿಗೆಂದಿಗೂ ನೀನು ।
ಯೋಗಿ ಜನ ವಂದ್ಯ ಹಾ ನಾರೀಪತಿ ನಿನ್ನ ॥
ಯೋಗ ಸೇವಕರೊಳಿಡೋ ಪ್ರಾಣೇಶ ವಿಠ್ಠಲನೇ ।
ಯೋಗ ಹ್ರಾಸ ವಿವರ್ಜ ಘಟಜ ಕರಪೂಜ್ಯ ೩

೫

ರಾಮ ಗೋವಿಂದ ಪೂರ್ಣ ಕಾಮ ಸದ್ಗುಣ ಗಣ ।
ಧಾಮ ದಶಾನನ ವಿರಾಮ ನತಜನ ಪ್ರೇಮ ॥
ಸೋಮಧರನ ಸಖ ಕಾಮಜನಕ ಸುರ ।
ಸ್ತೋಮ ಕರಾರ್ಚಿತ ವಾಮನ ಪಾಲಿಸೋ ಪ

ಮಂದರಾಚಲಧರ ಇಂದಿರೆಯರಸ ಮುಕುಂದ ಲೋಕೇಶಾ । ಶತಾ–
ನಂದ ವಂದಿತ ಪರಮಾನಂದ ಯಶೋದಾನಂದ ॥
ನಂದನ ಸುದತಿಯರ ವೃಂದವ ಮೋಹಿಸುವ ।
ವೃಂದಾವನ ಸಂಚಾರಿ ಮಂದಾಕಿನೀ ಪಿತ ॥
ವೃಂದಾರಕ ಗುರು ತಂದೆ ಸಲಹೋ ಯೆನ ।
ಲಂದು ಉದ್ಧರಿಸಿದೆ ಸಿಂಧುರ ವರನ ಪುರಂದರ ಪ್ರಿಯ । ಆ–
ರಿಂದಮ ಹರಿ ದಶಸ್ಯಂದನ ತನಯನೆ ೧

ಪುಂಡರೀಕಾಕ್ಷನೆ ಮಾರ್ತಾಂಡ ಕೋಟಿ ಪ್ರಕಾಶ ।
ಪುಂಡ ಕಂಸಾರಾತಿ ಉದ್ದಂಡ ವಿಕ್ರಮನೇ ॥ ಭೂ–
ಮಂಡಲದೊಳಗೆ ಪ್ರಚಂಡ ಮುಷ್ಟಿಕರನ್ನು ।
ಹಿಂಡಿ ಬಿಸುಟು ಬಲು ಬಂಡು ಮಾಡಿದೆಯೋ ಆ ॥
ಖಂಡಲನನುಜನೆ ಭಂಡ ಕುರುಪನಿಗೆ ದಂಡಿಸಿ ತೋರಿದೆ ।
ದಂಡಧರನ ಪುರವ ಉಂಡು ವಿಷವ ಶಶಿಮಂಡೆ ಬಳಲೆ ಭಯ ॥
ಖಂಡಿಸಿ ಸಲಹಿದೆ, ಅಂಡಜವಾಹನ ೨

ಒಡೆಯ ಪ್ರಾಣೇಶವಿಠಲ ಉಡುಪತಿ ತೇಜ ಅನುದಿನ ।
ಬಿಡದೆ ವಂದಿಪರ ಕರಪಿಡಿವೆ ನಿನ್ನ ಮಹಿಮೆ ॥
ಕಡಲಾರಾಜ ಕನ್ನಿಕೆ ಜಡಜಾಸನ ಮುಖರು ।
ಕಡೆಗಂಡುದ್ದಲ್ಲವೋ ಮದಡ ನರ ನಾ ಬಲ್ಲೆನೇ ॥
ದೃಢ ಭಕ್ತರಿಗೆ ವರ ತಡೆಯದೆ ಮುದದಿಂ ।

ಕೊಡುತಿಪ ಮಹಿಮನೆ ಕಡು ಕೃಪಾ ಮೂರುತಿ ॥
ಕಡಿಸೆನ್ನ ಕುಮತಿ ಪಿಡಿಸು ಸುಪಥವನು ।
ಬಿಡಿಸು ಭವಭಯವ ಪೊರೆಪ ವರದಾ ೩

೬

ಪಾಹಿ ನಾರಾಯಣನೆ ಪಾಹಿ ವಾಸುಕಿಶಯನ ।
ಪಾಹಿ ಗರುಡಧ್ವಜನೆ ಪಾಹಿ ಕಮಲಾಕ್ಷ ಪ

ಸಂವತ್ಸರಾಂಬರಧರ ನತಜನ ಪಾಲ ।
ಸಂವತ್ಸರ ಹರೇ ಕಾರುಣ್ಯ ನಿಧಿಯೇ ॥
ಸಂವತ್ಸರಕೆ ನಿನ್ನ ಸಮರಾರೊ ತ್ರಿಜಗದಿ ।
ಸಂವತ್ಸರ ಜಲಜಕೆ ಸಂವತ್ಸರುಪಮಾ ೧

ಸಂವತ್ಸರಾಕ್ಷಸುತ ಗಜವೈರಿ ಸಂಹರನೆ ।
ಸಂವತ್ಸರಾದಿ ಸಂವತ್ಸರ ರಿಪು ॥
ಸಂವತ್ಸರ ಕುವರನೆ ಸಂವತ್ಸರನೆ ಯನ್ನ ।
ಸಂವತ್ಸರವಳಿದು ಕೊಡು ಸಂವತ್ಸರ ಮತಿ ೨

ಸಂವತ್ಸರ ಸಮಗ್ರ ಪ್ರಾಣೇಶ ವಿಠಲನೆ ।
ಸಂವತ್ಸರ ಸ್ವಾಮಿ ದೋಷ ದೂರ ॥
ಸಂವತ್ಸರ ಪಿತ ಸಿರಿ ಸಂವತ್ಸರನೇ ಕ್ಲೇಶ ।
ಸಂವತ್ಸರ ಮಾಡು ದೀನ ಕಲ್ಪತರು ೩

೭

ಗಂಗಾಪಿತ ರಾಘವ ನಂಬಿದೆ ಶ್ಯಾಮ–
ಲಾಂಗ ನಿನ್ನಯ ಪಾದವ ॥

ಮಂಗಳೆ ರಮಣ ಭುಜಂಗಧರಾರ್ಚಿತಾ ।
ನಂಗಜ ಜನಕ ಪಾಲಿಸಿಂಗಡಲೊಡೆಯನೆ ಪ

ಶಫರ, ಕಮಠ, ಕೋಲ ನೃಹರಿ ಬಾಲ ।
ನೃಪಕುಲ ಪವನ ವ್ಯಾಲ ॥
ವಿಪಿನ ಸಂಚರಾ ಕೃಷ್ಣ ವಿಪುಳಾ ಬುದ್ಧ ಕಲ್ಕಿ ।
ವಪುಧರ ಅನಿರುದ್ಧ ಕೃಪಣ ವತ್ಸಲ ಸ್ವರ್ಪಾ– ॥
ದಪನೆ ಪರಿ ಕಾಶ್ಯಪಿಯೊಳಗೆ ಸುರ ರಿಪುಪ । ಶಿವನ ಕ ।
ರಿಪನ ನರಪತಿ ದ್ರುಪದ ನಂದನೆಯ ಪೊರೆದೀಶ್ವರ ।
ಕಪಟ ನಾಟಕ ಕಪಿಲ ರೂಪಿ ೧

ಕುರು ಕುಲೋತ್ತಮನಾಗಾರದೊಳಗೆ ಕ್ಷೀರ ।
ಸುರಿದೆ ಗೋಕುಲ ವಿಹಾರ ॥
ವರ ವಿಪ್ರಜರ ತಂದೆ ಹರಚಾಪ ಹನನ ಈ ।
ಶರೀರವೇ ನಿನ್ನದು ಸರಿಬಂದದನು ಮಾಡೋ ॥
ಕರೆಕರೆಯ ಭವಶರಧಿಯೊಳು ಬಾ– ।
ಯ್ದೆರೆವೆ ರಕ್ಷಿಸುವರನು ಕಾಣೆನೊಬ್ಬರ ನಿನ್ನುಳಿ– ॥
ದುರಗ ಶಯನನೇ ಧರಿಜ ವಲ್ಲಭ ಕರುಣಿ ಕೇಶವ ೨

ಜನನ ಮರಣ ದೂರ ಇಂದ್ರಾನುಜ ।
ಮುನಿ ಗೇಯಾ ಚಲಧರ ॥
ವನರುಹ ಭವ ಸಂಕ್ರಂದನ ವಂದ್ಯ ವೀತ ಆ ।
ವನಿ ಮುಖ ತನ್ಮಾತ್ರಾಗುಣ ಪ್ರಾಣೇಶ ವಿಠಲ ॥
ಪ್ರನಮಿತಾಘ ಕಕ್ಷಾನಲ ಕಂದರ್ಪನ ಪಿತನೆ ।
ನಿನ್ನನುಗರೊಳಗಿಡೋ ಮಣಿಯೇ ಅನ್ಯರಿ ॥
ಗನಘ ಪಾಲಿಪುದನವರತ ಯನ್ನನು ಬಿಡದಲೆ ೩

## ೮

ವೆಂಕಟಾಚಲ ವಾಸ ವಂದಿಪೆನೋ ತವ ಪದ ।
ಪಂಕಜವ ನಿರ್ದೋಷ ವಾರಾಶಿಜಾ ದ್ರುಹಿಣ ।
ಶಂಕರ ಪ್ರಮುಖ ಪೋಷ ಶ್ರೀ ಶ್ರೀನಿವಾಸ ಪ

ವೆಂಕಟ ಗದಾ ಸುದರುಶನ ವಿಜಯ ।
ಅಂಕಿತನೆ ಗಾಂಗೇಯ ಜೈಲ ತ- ।
ಳಂಕ ನನುಜ ಪಾಲಿಪುದು ಯನ್ನ ಮೀ ।
ನಾಂಕ ಜನಕ ಶಶಾಂಕ ಭಾಸ ಅ.ಪ.

ಸ್ವಾಮಿ ಹೇ ನಿರಪೇಕ್ಷ ಝಷ ಕೂರ್ಮ ವರಾಹ ।
ಹೇಮ ಕಶ್ಯಪು ತೀಕ್ಷ ವಟು ಭೃಗು ಕುಲೋದ್ಭವ ॥
ರಾಮ ಪಾಂಡವಪಕ್ಷ ತ್ರಿಪುರಾರಿ ಕಲ್ಕಿ ।
ಭೀಮವಂದಿತ ತ್ರ್ಯಕ್ಷ ಸಖ ವ್ರತತಿಜಾಕ್ಷ ॥
ಕಾಮಿತಪ್ರದ ಕೈರವ ದಳ ಶ್ಯಾಮಸುಂದರ ಕೋಟಿ ಮಾರ ಸು- ।
ಧಾಮ ಪ್ರಿಯ ಭಯ ವಿಪಿನ ವಹ್ನಿ ಸು ॥
ತ್ರಾಮ ನಂದನ ಪ್ರಾಣರಕ್ಷಕ ।
ಭೂಮಿಯೊಳು ದುರುಳರಿಪು ಸಾಲಿ ॥
ಗ್ರಾಮ ಮಂದಿರ ಲಕುಮೀ ಮನೋಹರ ।
ಸಾಮಜೇಂದ್ರನ ಪೊರೆದ ಸಹಸ್ರನಾಮ ಕಾಳೀಮದಾಹ ದೇವತ್ರ ॥
ಈ ಮಾಯಾ ತೃಣಕಾಷ್ಠಾದಿ ವ್ಯಾಪುತ ।
ಚಾಮೀ ಕರ ಭೂಷಣ ಶೋಭಿತ ॥
ಹೇಮಾಚಲ ಮಂದಿರ ಮುನಿಗಣ
ಸೋಮಾರ್ಚಿತ ಕರುಣಿಸು ತ್ವರ್ಯಾ ೧

ನೀರ ಚರ ನಗಧರ ಕಿಟಿ ನೃಹರಿ ವಾಮನ ।
ಧರಣಿಪ ಸಂಹರ ಕೋದಂಡಕರ ಸ- ॥
ತ್ಯಾರಮಣ ಅಂಬರ ವರ್ಜಿತ ।
ತುರಂಗಮವೇರಿ ಕುಂಭಿಣಿ ಭಾರ ವಿಳುಹಿದ ಉದಾರ ॥

ಪರಾಶರ ಸುತ ಕಪಿಲರೂಪಿ ಸ- ।
ಮೀರ ವಂದ್ಯ ಅನಸೂಯ ವರ ಕುಮಾರ ಪು- ॥
ಷ್ಕರ ಕೇಶನನುಜ ಮಂದಾರನತ ಜನ ವಿಶ್ವ ।
ಧರಣ ಶರೀರ ವ್ಯೋಮ ಸಂತ್ವತಿ ನಘ ತು- ॥
ಷಾರ ಗಣ ವ್ಯೆದುವರೊ ನಿನ್ನಯಾ ।
ಪಾರಮಹಿಮೆಯ ತಿಳಿಯಲಾರರು ನೀರಜಾಕ್ಷ ॥ ಯ ॥
ಪಿತಾಮಾತಾ ಮಹಿಮೆಯ ॥
ಕ್ಕರಿಂದೊಶ ಅಗ್ನಿಭಯ ನಿವಾರಣ ॥
ಸಾರೆಗರೆದು ಪೂರೈಸಭಿಲಾಷೆಯ ।
ಘೋರಿಸುತಿಹ ತಾಪತ್ರಯ ಬಿಡಿಸೊ ರ- ।
ಮಾರಮಣನೇ ಪ್ರಣತಾರ್ಥಿ ಪರಿಹರ ೨

ವೇದೋದ್ಧರ ಕೂರ್ಮ ಈ ಕ್ಷಿತಿಯ ಮಾಯದಲೊ- ।
ಯ್ದುದುರ್ಮತಿ ಭರ್ಮ ಲೋಚನರ ತರಳ ಪ್ರ- ॥
ಹ್ಲಾದ ವರದ ಸುಕರ್ಮಸ್ಥಿತ ಮಾತೃಹಿಂಸಕ ।
ನಾದ ನಿರಶ ಸುಶರ್ಮ ಪ್ರಮುಖರನ ಮರ್ಮ ॥
ಭೇದಿಸೇಳಿದ ಭೈಷ್ಮೀ ವಲ್ಲಭ ।
ಶ್ರೀದ ಬುದ್ಧ ಖಳಕುಲ ಭಂಜನ ॥
ಬಾದರಾಯಣ ನಿಗಮವೇದ್ಯನೆ ।
ಮೋದಮಯ ಪ್ರಾಣೇಶ ವಿಠ್ಠಲ ॥
ಕಾದುಕೋ ನಿನ್ನವರನು ಎಂದಾದಿಮಧ್ಯ ।
ವಿದೂರ ಯನ್ನ ವಿಷಾದಗುಣಗಳೆಣಿಸದೆ ಕುಬುಜೆಗೆ ॥
ಮೋದ ತೋರಿದ ದೀನಬಂಧು ।
ಶ್ರೀಧರ ಕೌಸ್ತುಭ ವಕ್ಷಸ್ಥಳ ॥
ದ್ವಾದಶವಪು ಸನ್ನಿಭ ನಿನ್ನಯ ಕ್ರೋಧಿಗಳೊಳು ಸ್ನೇಹವ ಪುನರಪಿ ।
ಮೇದಿನಿಯೊಳು ಜನ್ಮವ ಕೊಡದಿರು ೩

೯

ಪಕ್ಷಿವಾಹನ ಶ್ರೀ ವಾಮನ್ನ ಅಂತ– ।
ರಿಕ್ಷಾಳಕ ಪ್ರಿಯ ಕಾಯೆನ್ನ ॥
ಋಕ್ಷಪನಿಭ ಮಾಯಾ ಕಕ್ಷಾಜ್ಞಿಹರೆ ಜಗ– ।
ತ್ಯಕ್ಷೆ ನಂಬಿದೆನೆನ್ನುಪೇಕ್ಷೆ ಮಾಡಲಿ ಬೇಡ ಪ

ಅಂಜಿನಾಧರಾ ಧರ ಧಾಮ ಹೇ ನಿ ।
ರಂಜನ ವನಮಾಲಿ ಭೂಮಾ ॥
ಅಂಜಲಿ ಪುಟದಿಂದಲಂಜಿ ಬೇಡುವೆ ಬಲ ।
ಭಂಜನಾನುಜ ವಿತತ ತ್ರಿಜಗ ॥
ಮಂಜುಳಾಂಗನೇ ವೀತ ಭೂಮುಖ ।
ಕಂಜನಾಭನೆ ತರುಣಿ ಶಿವ ನೃಪ ॥
ಕುಂಜರ ವರದ ಕರವ ಪಿಡಿಯೊ ೧

ಪಾಠೀಣ ಕಮಠ ವರಾಹ । ನೀಚ
ಹಾಟಕಾರಿ ವಟು ಭೂಭುಜ ಹಾ ॥
ಖೇಟಾಹ ಬುದ್ಧ ಕಲ್ಕಿ ಘೋಟಕಾನನ ವಿಶ್ವ ।
ನಾಟಕ ಭೈಷ್ಮೀ ಮುಖ ವಧೂಟನಿಯರ ವಲ್ಲಭ ॥
ಕೋಟಿ ಭಾಸ್ಕರ ತೇಜ ನಿನ್ನಯ ।
ಆಟ ತಿಳಿಯಲು ಕೋಕನದ ಶುಭ ॥
ಪೀಠ ಲಕುಮಿ ಅಶಕ್ತರಹರು ಕಿ ।
ರೀಟ ಸಖ ನಿನ್ನವರೊಳಗಿಡೊ ೨

ಶಂತನುವಿನ ವಂಶ ರಕ್ಷ । ಮಾತು
ಲಾಂತಕ ಜಲಜದಳಾಕ್ಷ ॥
ಮಂಥಾರಿ ಶಿಶುಪಾಲ ದಂತವಕ್ರ ಮುರಾದಿ ।
ಪಂತ ದಾನವರ ನಿಕೃಂತನಾಹಿಮದ ಹಾ ॥
ನಂತಧುನಿಪಿತ ವೇದ ವೇದ್ಯ ಅ ।

ನಂತ ಮಹಿಮನೆ ಅತ್ರಿ ಸುತ ನಿ- ॥
ಶ್ಚಿಂತ ಶ್ರೀ ಪ್ರಾಣೇಶ ವಿಠಲ ದು- ।
ರಂತ ಶಕ್ತಿ ಭವಾಬ್ಧಿ ಘಟಜಾ ೨

## ೧೦

ಗಂಗಾಪಿತ ವೆಂಕಟ ಪರ್ವತ ನಿಲಯ ಕೌಸಲ್ಯತನಯಾ ।
ಮಂಗಳ ವಲ್ಲಭ ಭವಕರಕರೆಯ ಪರಿಪರಿಮುದು ತ್ವರಿಯಾ ।
ಅಂಗಜ ಜನಕನೆ ಸಂಗರಹಿತ ಸತ್ಸಂಗ ಕೃಪಾಬ್ಧಿ ವಿಹಂಗವಾಹನನೇ ಪ

ಸ್ವಾಮಿ ಲಾಲಿಸು ಯನ್ನಯ ಮನದುಸರ ನೀನಲ್ಲದಿತರರ ।
ಭೂಮಿಯೊಳ್ಕಾಣೆನೋ ಉದ್ಧರಿಸುವರ ನವನೀತ ಚೋರ ।
ಸಾಮಜ ದ್ರೌಪದಿ ಆ ಮುಚುಕುಂದ ಸುಧಾಮರ ಪೊರೆದ ತ್ರಿಧಾಮ ಮಹಾತ್ಮ ೧

ವಾಸುಕೀ ಶಯನ ದಯಾ ಸಂಪನ್ನ ನಾರಾಯಣ ನಿನ್ನ ।
ದಾಸರೊಳಗಾಡಿಸೊ ಸದ್ಗುಣ ಪೂರ್ಣ ಸಾರ್ವರಿಗೆ ಪ್ರಸನ್ನ ।
ಈಸಲಾರೆ ಈ ಸಂಸಾರ ಶರಧಿ ಕೈ ಸೋತಿತೆಲೋ ಪರಾಶರ ತನಯ ೨

ನಿತ್ಯಾನಂದ ನಿಗಮೋದ್ಧಾರ ಪೂತನೀ ಸಂಹಾರ ।
ಮೃತ್ಯುಂಜಯ ಸಖ ರವಿದರ ಗದಾಧರ ಸುಖ ಪಾರಾವಾರ ।
ಭೃತ್ಯವತ್ಸಲ ಸುರೋತ್ತಮ ಪಾರ್ಥನ ತೊತ್ತಿಗನಾದಿ ಸುಸತ್ಯ ಸಂಕಲ್ಪ ಗಂಗಾ ೩

ಮಂದರಾಚಲ ಧರಿಸಿದ ಗೋವಿಂದ ಶ್ರೀ ಯಶೋದಾನಂದ ।
ನಂದನ ಶ್ರೀ ಕೇಶವ ಮುಕುಂದ ವಾಮನ ಸುಖಸಾಂದ್ರ ।
ತಂದೆ ಸಲಹೊ ನಿನ್ನ ಬಂಧಕ ಶಕುತಿಯಲಿಂದ ದಣಿಸದೆ ಅರಿಂದಮ ಪ್ರಭುವೇ ೪

ಅಂತರಂಗವ ಬಲ್ಲ ಮಧುದ್ವೇಷಿ ಯನ್ನಯ ಮನದಾಸೀ ।
ಅಂತು ಪೂರ್ತಿಸಿ ದುಷ್ಕರ್ಮದ ರಾಶಿ ಉಳಿಸದೆ ಪರಿಹರಿಸಿ ।
ಸಂತತ ಹೃದಯದಿ ನಿಂತು ಪೊಳೆವುದೋ ಅನಂತ ಮುರಾಂತಕ ಚಿಂತಾರಹಿತನೆ ೫

ಶಕ್ರ ವರ ಪೂಜಿತ ಬಲವಂತ ರುಕ್ಮಣೀಪತಿ ದಂತ ।
ವಕ್ತ್ರಾರಿ ಬಾಧಿಸದಂತೆ ಕೃತಾಂತ ಮಾಳ್ಪುದು ಕೆಡದಂಥ ।
ಸುಕೃತ ಪೀಡಿಸೋ ತ್ರಿವಿಕ್ರಮ ಮೂರುತಿ ಶುಕ್ರ ಯುಕ್ತಿ ಹರ ಅಕ್ರೂರ ವರದ ೬

ಕಂಕಾನುಜ ಮಂದಿರ ಪ್ರಾಣೇಶ ವಿಠಲ ಗೋಕುಲ ಗೋಪಾಲ ।
ಪಂಕಜಾಸನ ಜನಕ ಶಕಟ ಕಾಲ ಜಾಂಬವತೀ ಲೋಲ ।
ಶಂಕರಾದ್ಯಮರರ ಕಳಂಕೆಣಿಸದ ಗರುಡಾಂಕ ಉರಗ ಪರ್ಯಂಕ ಸುಖಾತ್ಮ ೭

## ೧೧

ರಕ್ಷಿಸೆನ್ನನು ಶ್ರೀ ಪಂಢರೀನಾಥಾ ದೀನಜನದಾತ ವಿಶ್ವ ।
ಕುಕ್ಷಿ ವಿಖ್ಯಾತಾ ಪ

**ಶ್ಲೋಕ :**

ಛರ್ಮ ವಸನಧರ ವಿಷ್ಣು ಸೌಂದರ್ಯ ಸಾರ ।
ಧರ್ಮ ಪ್ರಮುಖ ವೀರ ವಂದ್ಯ ಲೋಕೈಕ ಧೀರ ॥
ಕರ್ಮ ವಿತತ ನಾರಾಯಣನೆ ಸುಖ ಪಾರಾವಾರ ।
ನಿರ್ಮಲ ದಧಿಚೋರ ವಾರಿದ ನಿಭಾಂಗ ಜಾರಾ ೧

**ಪದ :**

ಮಾ–ತಾ–ಪೀ–ಫಣಿ, ಫಣಿಧರ ನುತ ದಿವ್ಯಚರಿತ
ವೃಂದಾರಕ ವೃಂದನಾಥಾ ।
ನೇಕ ತಾಪಸರಿಗೆ ಸುಳಿಯೆಯಲ್ಲ ತ್ವರಿಯ ಈ ಗೊಲ್ಲ–
ರಿಗೊಲಿದೆಯೊ ಸತ್ಯಾನಲ್ಲ ।
ಬೇಕೆಂದು ಶ್ರೀ ದೇವಕಿಯ ಪೊಟ್ಟೆಯಲ್ಲಿ ನೀ ಪುಟ್ಟಿ
ವೃಂದಾವ– ।
ನಕಾಗಿ ಅಟ್ಟಿಸಿಕೊಂಡು ನಂದನ ಮನೆಯಲ್ಲಿ ಕ್ಷೀರ ಘೃತ ಚೆಲ್ಲಿ
ಮೆದ್ದೆ ಪರಿಪರಿಯಲ್ಲಿ ೨

**ಶ್ಲೋಕ :**

ಮೀನ ಕಮಠ ಕೋಲ, ಮರ್ತ್ಯ ಮೃಗರೂಪ ಬಾಲ ।
ಕ್ಷೋಣಿಪಹ ಸುಶೀಲ ವೇಣುಗಾನ ವಿಲೋಲ ॥
ಮಾನವವಿದುಕೂಲ ಹಯವದನ ಸುಜನಪಾಲ ।
ಹೀನ ಶಕಟ ಕಾಲನೇಮಿ ಮುಖ ದನುಜ ಕಾಲ ೩

**ಪದ :**

ನದೀ ಪಿತ ನೀ ಭಾಂಡಜಲಧಿ ಮಿಂದೆ । ಈ ಲೋಕದ ಮಂದಿ–
ಯಂತೆ ಫಲವನ್ನು ತಿಂದೆ ।
ಸದಾ ತೃಪ್ತ ನಿನ್ನ ಬಂಧಕದೊಳು–ಜಗ, ಕೈಕಾಲು
ನೀ ಕಟ್ಟಿಸಿಕೊಂಬೆ ಮೇಲು ॥
ಬೆದರರೊ ನಿನಗೆ ಕಮಲೆ ವಿಧಿ, ಆ ಗುಮ್ಮನ ಬಾಧೆ
ತೋರಿಸುವಳೊ ಯಶೋದೆ ।
ಮದನ ಪಿತನೆ ಕೌಸ್ತುಭಕಿಂತ ಗುಂಜಿಯತ್ಯಂತ ಪ್ರೀತೆ–
ಶಾರ್ಙ್ಗ ಅನಂತ ೪

**ಶ್ಲೋಕ :**

ತಪನ ಸಖ ಸುನೇತ್ರ ಪರಿಮಳ ಭೂಷ ಗಾತ್ರ ।
ವಿಪಿನ ನಳಪ ಗೋತ್ರ । ದ್ವಿಟ್ಜ ಸಖ ಶೂರ ಪೌತ್ರ ॥
ಸುಫಲದ ಸ್ತುತಿ ಮಾತ್ರಾ ಪಾಪಾಟವೀ ವೀತಿಹೋತ್ರ ।
ನೃಪತಿಪ ತ್ರಯ ಶಾಸ್ತ್ರ ವೇದ್ಯ ಕಮಲಾ ಕಲತ್ರ ೫

**ಪದ :**

ಜಲದೊಳಿಪರ ವಸ್ತ್ರವ್ಯೊಯ್ದಿಯೊ । ವೃಕ್ಷ ಜಿಗಿದೆಯಾ ಎಂಥ
ಕರುಣಾಂಬುಧಿಯೋ ।
ಬಲವಿಂದೆರಡು ಕೈಯ ಮುಗಿಯೆಂದಿ । ಕೊಡುತಿಪೆನೆಂದಿ
ಸರ್ವರನು ಕರತಂದಿ ।

ಮಳಲಿಂದ ಕೆರೆಗಟ್ಟಿ ನಾರೇರ ಕೂಡಿ ವಿಹಾರ ಮಾಡಿ
ದೆಯಾ ವಾರಂ ವಾರಾ ।
ಫಲ ಭಕ್ಷಕರ ಕೊಂದಿಂದ್ರನ ಗರ್ವ ಬಿಡಿಸಿದೆ ಸರ್ವ
ರುಳಿಸಿದೆ ಪೂಜಿಗರ್ಹಾ ೬

**ಶ್ಲೋಕ :**

ಕಲ್ಪಸ್ರಷ್ಟಂದ್ರ ಭಾಸ ಅಣು ಮಹತ್ಪೂರ್ಣ ಶೇಷ ।
ತಲ್ಪ ವಿಗತದೋಷ ಭಕ್ತ ಜನರಾಭಿಲಾಷಾ ॥
ಕಲ್ಪತರುವೆ, ಶ್ರೀಶ, ಅಚ್ಯುತ, ಭೀರು ವೇಷ ।
ಸ್ವಲ್ಪ ಇತರ ಕ್ಲೇಶನಾಶನಾನಂದ ಲೇಶ ೭

**ಪದ :**

ಕರೆಸಲು ಬಿಲ್ಲು ಹಬ್ಬದ ಬಗೆಯಿಂದ ಮಧುರೆಗೆ ।
ಅಕ್ರೂರನ ಕೈಯ ಪೋಗೆ ।
ಕರಿಯ ಸಂಹರಿಸಿ ಮಲ್ಲರಗುದ್ದಿ, ಕುಬುಜೆಯ ತಿದ್ದಿ
ದುಷ್ಟ ಕಂಸನ ವದ್ದಿ ।
ಹಿರಿಯುಗ್ರಸೇನಗೆ ಅಭಿಷೇಕ ಮಾಡೆ ನಿಃಶೋಕ
ವೆನಿಸಿದಿ ಭೂಮೀ ನಾಶ ।
ವರ ಸಾಂದೀಪಿ ಬಳಿಯೊ ಳೋದಿದೆ, ತಂದು ತೋರಿದೆ
ಪುತ್ರನಾಘಪನೋದಿ ೮

**ಶ್ಲೋಕ :**

ಜನನೀ ಜನಕ ಭಂಗ ಮೋಚಕ ಪಾಂಡುರಂಗ ।
ಅನುಪಮನೆ ಭುಜಂಗ – ದರ್ಪಹಾ ಸಾಧು ಸಂಗ ॥
ಅನವರತ ಅಸಂಗವೀತ ಭೂತಾ ಕೃಪಾಂಗ ।
ದಿನಪನಿಭ, ವಿಹಂಗ ವಾಹನ, ಜಗದಂತರಂಗ ೯

**ಪದ :**

ಲಾಲಿಸೆನ್ನಯ ಮಾತ ಭಗವಂತ
ಶ್ರೀ ರುಕ್ಮಿಣೀ ಕಾಂತ ನಿತ್ಯಾನಂದ ನಿಶ್ಚಿಂತ ।
ಬಾಲಕ ಸ್ತ್ರೀ ಪೋಷಣೆಗೆ ಎಂದೂ ದೇಹ ಬಹು
ನೊಂದು ವೇಷ ತಪ್ಪಿಸಿ ತಂದು ।
ನಾಲೇಶ ಸುಖವನ್ನು ಬಡಲಿಲ್ಲಾ
ಒಂದು ದಿವಸನೂ ನಿನ್ನ ಪೂಜಿಸಲಿಲ್ಲ ।
ಕಾಲನವರಿಗೆನ್ನ ಭಿಡೆಯವೆ ನುಡಿ
ತಡೆಯವೆ ಎಳ್ಳಿನಷ್ಟು ಸಾಧನವೇ ೧೦

**ಶ್ಲೋಕ :**

ಕಟಿ ಸ್ಥಿತ ಕರಧಾರಿ ಜಲಜದರ ಪೂತನಾರಿ ।
ಪಟುತರ ಭುಜ ಶಾರಿ ಚಕ್ರಿ, ಚೈದ್ಯಪಹಾರಿ ॥
ಕರಿಣ ಶುಭವ ವಾರಿನಿಧಿ ಕರಿರಜ – ಉದಾರಿ ।
ವಿಠಲ ಸುಗದಿದಾರಿ ಕಾಣನ್ಯೋ ಕರೆಯಾ ಸಾರಿ ೧೧

**ಪದ :**

ಒಡಲಿಗೆರಡು ಕೈಯಾ ಇಕ್ಕುತ – ನುಡಿಗುಕ್ಕುತ
ಕಂಠ ಬಿಗಿದು ಬಿಕ್ಕುತ ।
ಕೊಡುವನ ಮೊಗ ನೋಡಿ ನಾಚುತ ಬಾಯ್ದೆರೆಯುತ
ಮರಳೊಮ್ಮೆ ಮುಚ್ಚುತ ॥
ಅಡಗಿಸಿ ಕಾಯ ಕಟಕನಲ್ಲಿ ನಾಯಿ ತೆರದಲ್ಲಿ
ಸುಳಿದಾಡುತ ಅಲ್ಲಿ ।
ಕಡೆಗೆ ನಿಷ್ಫಲವಾಗ ಸತಿ ಮುಂದೆ ಅನ್ನಲೇನಂದೆ
ಇಂಥ ಶ್ರಮಗಳೊಂದೊಂದೇ ೧೨

**ಶ್ಲೋಕ :**

ಶಾತ ಮಕುಟವಿಟ್ಟ ಮಧು ಕೈಟಭಾರಿ ಕೃಷ್ಣಾ ।
ಖ್ಯಾತಿಗವನಿ ಕೊಟ್ಟಾ ಬಲಿಯ ರಸಾತಳದೊಳಿಟ್ಟ ॥
ವೀತಭಯ ವಿಶಿಷ್ಟ, ನಾಮ ಮೂರ್ತಿ, ಚತುಷ್ಟ ।
ವಾತ ವಿನುತ ದುಷ್ಟದೂರ ಸರ್ವತ್ರ ಚೇಷ್ಟಾ ೧೩

**ಪದ :**

ಯನ್ನ ದೋಷಕ ವಂದು ನೆಲೆಗಾಣೆ ಪರಮಾತ್ಮನೆ
ಸ್ನಾನ ಸಂಧ್ಯಾವಂದನೆ ।
ಯನ್ನು ಗೃಹಸ್ಥಾಶ್ರಮದ ಕರ್ಮ ಮಾಡಿದೆನೆ ಧರ್ಮ
ಯಮ ತೆಗೆಸಾನೆ ಚರ್ಮ ।
ಅನ್ಯ ಸ್ತ್ರೀಯರ ಮೆಚ್ಚಿ ಕೆಟ್ಟೆನೋ
ನಿನ್ನ ಬಿಟ್ಟೆನೋ ಮುಂದುಪಾಯವಿನ್ನೇನೋ ।
ಪನ್ನಗ ಶಯನನೆ ಈ ಪರಿ ಮಾಡುವರೆ
ದೊರೆ ಜನುಮಗಳೇಸು ಬಾರಿ ೧೪

**ಶ್ಲೋಕ :**

ಶತಕ್ರತು ಅನುಜಾತ ವಾಮನ ಪಾರ್ಥಸೂತ ।
ಕ್ಷಿತಿವರ ಯದುನಾಥ ಧಾತ ತಾತ ವಿಧಾತಾ ॥
ವ್ರತಿ ಮನ ನತ ಪ್ರೀತ ಅತ್ರಿ- ಅನಸೂಯಾ ಜಾತ ।
ಸತೀ ಪತಿ ವಿಧು ಸಹಿತ ಗುಣಪೂರ್ಣ ತ್ರಿಗುಣರಹಿತ ೧೫

**ಪದ :**

ಧರೆಯೊಳು ವೇಷಕ ಕಾ ಪುರುಷರು
ಒಂದೆರಡು ಮೂರು ಆಟ ತೋರಲಳುವರು ।
ಮರಳೊಮ್ಮೆ ತರಿಸದೆ ಸಮ್ಮಾನ ಮಾಡಿ ಬಹುಧನ
ಕೊಡುವರೊ ಮೂರು ಭುವನ ।

ದೊರೆ ನಿರ್ಜರಾರಾಧ್ಯ ನಿನ್ನ ಮುಂದೆ, ವೇಷ
ಬಹು ತಂದೆ ಕಾಸ ಕೊಡದಿರೊ ತಂದೆ ।
'ನರ ನಿನ್ನ ವೇಷವು ಸಾಕೆನ್ನಬೇಕೋ'
ಪಾವನ್ನ ಮೂರ್ತಿ ದಣಿಸದಿರೆನ್ನ ೧೬

**ಶ್ಲೋಕ :**

ಗಜ ದ್ರುಪ ತನುಜಿ ರಕ್ಷ ಬಾಲ ಪಾಲನಾಪೇಕ್ಷ ।
ದ್ವಿಜ ಕುಲವರ ತ್ರ್ಯಕ್ಷ ದುರ್ಯೋಧನಾದಿ ಶಿಕ್ಷ ॥
ವಿಜಯ ಪ್ರಮುಖ ಪಕ್ಷ ಸ್ವಾಮಿ ಶ್ರೀವತ್ಸ ವಕ್ಷ ।
ಅಜಮಿಳನಿಗೆ ಮೋಕ್ಷವಿತ್ತ ಪಾಪಾಹಿತಾರ್ಕ್ಷ್ಯ ೧೭

**ಪದ :**

ಪುಂಡರೀಶವಗಲೀದಿಲ್ಲಿಗೆ ಬಂದೆ
ಬಹು ಬೇಗ ಭಕ್ತರೆಂಬುದು ಹೀಗೆ ।
ಕಂಡ್ಯಾ ಯನ್ನವರೊಳು ಕೂಡಿಸೋ ನಿನ್ನ ಪಾಡಿಸೋ ।
ಆಶೆಯೆಂಬುದ ಬಿಡಿಸೋ ।
ದಂಡಜ ವರದ ಶ್ರೀ ಪ್ರಾಣೇಶ ವಿಠ್ಠಲ ನಿರ್ದೋಷ
ನಿನ್ನವರಿಗೀಯೋ ಲೇಸಾ ।
ಮಂಡಲದೊಳು ನಿನ್ನ ವ್ಯತಿರಿಕ್ತಾರಿಲ್ಲಾಮಿತ ಶಕ್ತ
ಪಾಹಿ ಸರ್ವೋದ್ರಿಕ್ತ ೧೮

## ೧೨

ಪಾಲಿಸೋ ವೆಂಕಟಗಿರಿ ರಾಯಾ ಲಕ್ಷ್ಮೀ ।
ಲೋಲ ನೀಲಾಂಬುದ ಸಮ ಕಾಯಾ ಪ

ಮಾ ಕಮಲಾಸನ ವಾಸವ – ಸುರ ।
ನೀಶ ಕರಾಧ್ಯ ಕೇಶವ ॥

ಲೋಕೇಶ ಯನ್ನಲ್ಲಿ ವಾಸವ-ಮಾಡಿ
ನೂಕು ತುಚ್ಛತರ ಕ್ಲೇಶವ ೧

ಹಿಂದಿನ ಜನುಮಗಳೆಣಿಕಿಲ್ಲ – ದಯಾ ।
ಸಿಂಧು ಸಾಧನವೀಗಲಿನಿತೆಲ್ಲಾ ॥
ಮುಂದಿನ ಗತಿಯೇನೋ ತಿಳಿದಿಲ್ಲ – ಇದ ।
ರಿಂದಲಂಜುವೆ ಜಾಂಬವತೀ ನಲ್ಲ ೨

ಬಾಲಕನಾದೆ ಕೆಲವು ದಿನ – ಪ್ರಾಯ ।
ಕಾಲವೊದಗಲು ಪರಾಂಗನಾ ॥
ಮೇಲೆ ಅಭಕ್ಷಣೆಯಲಿ ಮನವಿಟ್ಟೆ – ಹೇ ।
ಳಲೊಂದೆರಡೇ ಯನ್ನವಗುಣ ೩

ಉದಯ ಸ್ನಾನವು ಸಂಧ್ಯಾವಂದನೆ – ಅರ್ಘ್ಯ ।
ವಿಧಿ ಗುರು ಹಿರಿಯರ ವಂದನೆ ।
ಮೊದಲಾಗಿ ಪಿತರಾರಾಧನೆ ಬಿಟ್ಟೆ ।
ಮದದಿಂದ ಹೀನನೆಂಬುವ ನಾನೇ ೪

ಅನ್ಯರ ಮನೆ ದ್ವಾರ ಕಾಯ್ದೆನೋ – ಸ್ವಾಮಿ ।
ನಿನ್ನ ಸ್ಮರಣೆಯ ಕ್ಷಣ ಮಾಡೆನೋ ॥
ಅನ್ನಕ್ಕೆ ಬಹುದೂರ ಪೋಪೆನೋ – ಸಾರೆ ।
ಪುಣ್ಯಕ್ಷೇತ್ರಗಳಿರೆ ನೋಡೆನೋ ೫

ಧನಹೀನನಾದ ಕಾರಣದಿಂದ – ಸತಿ ।
ಮನೆ ಹೊಂದಿಸಳೋ ಪರಮಾನಂದ ॥
ತನುಜರಶನ ವಸನಗಳಿಂದ ಕಾಡು ।
ವಣು ಮಾತ್ರ ಸುಖವಿಲ್ಲ ಇದರಿಂದ ೬

ಏಸು ಹೇಳಲಿ ಮಾತ ಲಾಲಿಸೋ – ಶ್ರೀ ಪ್ರಾ– ।
ಣೇಶ ವಿಠ್ಠಲ ನೀನೇ ತಾರಿಸೋ ॥

ಆ ಸತ್ಕರ್ಮದಿ ಮನ ಪ್ರೇರಿಸೋ – ನಿನ್ನ ।
ದಾಸವರ್ಗದೊಳೆನ್ನ ಕೂಡಿಸೋ ೭

## ೧೩

ಬಣ್ಣಿಸಲಳವೆ ನಿನ್ನ । ಪನ್ನಗ
ಶಯನ ಪ್ರಪನ್ನ ವತ್ಸಲ ರಂಗ ಪ

ಮಧು ಕೈಟಭಾಂತಕನೆ ಮಧುರಾಪತಿ ಜಿತನೆ ।
ಮಧು ಸಖ ಜನಕನೆ ಮಧುಮಾಂತ್ರಿಯಾಂಬಕನೇ ೧

ಋಷಿ ಪತ್ನಿಯರ ಮೋಹಕ, ಋಷಿ ಪತ್ನಿಯ ತಾರಕ ।
ಋಷಿ ಪತ್ನಿಯ ನಾಶಕ ಋಷಿ ಪತ್ನೀ ಬಾಲಕ ೨

ಪದುಮ ಸಂಭವನಯ್ಯ ಪದುಮೇಶ ಕವಿ ಗೇಯ ।
ಪದುಮಾವರದ ಜೀಯ ಪದುಮಜಾಂಡದೊಡೆಯ ೩

ಭಾನುಕೋಟಿ ಪ್ರಕಾಶ ಭಾನುಲೋಚನಾಧೀಶ ।
ಭಾನುಪ ಸುತ ಪೋಷ ಭಾನುಪಾಣಿ ನಿರ್ದೋಷ ೪

ಹರಿ ಪ್ರಾಣೇಶ ವಿಠಲಯ್ಯ ಹರಿ ಶಯನ ಮತ್ಪ್ರಿಯ ।
ಹರಿಯಾಸ್ಯ ನರದೇಹ ಹರಿಸುವುದಘ ತ್ವರಿಯಾ ೫

## ೧೪

ಉಪಕಾರ ಮರೆವುದುಚಿತವಲ್ಲೋ ।
ತಪನಾಪ್ತಾಕ್ಷನೆ ನಮ್ಮ ಹಿರಿಯರಂದು ಮಾಡಿದಾ ಪ




ಹರಿಯೆ ನಿನ್ನವರಿಗಮೃತವ ನೀಡುವೆನೆಂದು ।
ಭರದಿಂದ ಮಥನ ಮಾಡಿಸಿದೆ ಕಡಲ ॥
ಗರಳವುದ್ಭವಿಸಲು ದಿವಿಜರಂಜಲು ಆಗ ।
ತ್ವರದಿಂದ ದರ ಭಯ ಪರಿಹರಿಸಿದರಾರೊ ೧

ಆರಣ್ಯದೊಳು ನೀನಿರಲು ನಿನ್ನೊಲ್ಲಭಿಯ ।
ಆ ರಾವಣನೊಯ್ಯಲು ಕಪಿಗಳೆಲ್ಲ ॥
ಹಾರಲಾರೆವೊ ಸಮೂದ್ರಾ ಎನ್ನಲು ಬೇಗ ।
ಭಾರತೀ ರಮಣನೇ ಪೋಗಿ ವಾರ್ತೆಯ ತಂದ ೨

ಶರಧಿ ಕಟ್ಟುವುದಕ್ಕೆ ರೋಮ ರೋಮದಿ ಗುಡ್ಡ ।
ಧರಿಸಿ ತಂದನು ನೊಂದೆನೆನ್ನದಲೆ ।
ಹರಿಜಿತು ಶರದಿಂದ ಬಿಗಿಯೆ ಪ್ಲವಗರೆಲ್ಲಾ ।
ಧರಣಿ ಹೊಂದಲು ಸಂಜೀವನ ತಂದು ಉಳುಹಿದ ೩

ವಸುದೇವಜನಾಗಿ ನೀಂ ಜರಿಜನ ಭಯದಿಂದ ।
ವಸುಧೆಯೊಳಗೆ ನಿಲ್ಲಲಾರದಿದ್ದೆ ॥
ಶಶಿಕುಲದಲ್ಲಿ ವಾತ ಜನಿಸಿ ಅವನ ಕೊಂದು ।
ಕುಸುಮನಾಭನೆ ನಿನ್ನ ಭಯ ಬಿಡಿಸಿದನಲ್ಲೋ ೪

ಮಣಿಮಂತ ಜಗದೊಳು ನಿನ್ನ ಮಹಿಮೆಯನ್ನು ।
ಮುಣುಗಿಸಿದನು ತ್ವರಿತ ನಮ್ಮ ಗುರುವು ॥
ಘನ ಶಾಸ್ತ್ರಂಗಳ ರಚಿಸಿ ದುರ್ಮತವ ಸೋಲಿಸಿ ।
ಮನಸಿಜ ಪಿತನೇ ಪರನೆಂದು ಮೆರೆಸಿದ ೫

ಇಷ್ಟು ಸೇವೆಯ ಮಾಡಿ ಮೆಚ್ಚಿಸಿದನು ಗೇಣು ।
ಬಟ್ಟೆ ಬೇಡಿದನೇನೋ ಆತ ನಿನ್ನ ॥
ಬಿಟ್ಟದ್ದಾನಾದಿತು ನಮ್ಮ ವಂಶಕರಿಗೆ ।
ಕೊಟ್ಟು ರಕ್ಷಿಸುವನು ಸ್ವಾಮಿ ಒಳ್ಳೆವನೆಂದು ೬

ಈಸು ಪರಿಯಿಂದ ನಮ್ಮ ಭಾರತೀಕಾಂತ ।
ತಾ ಸೋತಿರಲು ನಿನಗೆ ನಮ್ಮನೀಗ ॥
ಘಾಸಿ ಮಾಡದೆ ಸಲಹುವದುಚಿತವೋ ಶ್ರೀ ಪ್ರಾ– ।
ಣೇಶ ವಿಠ್ಠಲರೇಯ ಅಪಕೀರ್ತಿ ಕೊಳಬೇಡ ೭

೧೫

ಇಂತಿರುವುದೇನು ಬಗೆ ರಾಮಾ । ಹರಿ ಸ್ವ–
ತಂತ್ರ ಶ್ರೀನಿಧಿಯೆಂದು ಪೊಗಳುತಿವೆ ವೇದ ಪ

ವಿಧಿಗೆ ಪದವಿತ್ತವನೇ ವನವ ಚರಿಸುವದೇನೋ ।
ಪದುಮ ಸದನೆಯ ರಮಣ ಬಡವನಾಗಿಹದೇನೋ ॥
ಮದನ ಜನಕನೆ ಋಷಿಗಳಂತೆ ಆಗುವದೇನೋ ।
ಉದರದೊಳು ಬಹು ಜಗಗಳಿರಲೂ ಪತ್ರ ಸದನವಾಶ್ರಯಿಸಿ–
ಕೊಂಡಿರುವಿ ಇದು ಏನೋ ೧

ನಿತ್ಯ ತೃಪ್ತನೆ ಶಬರಿಯೆಂಜಲುಂಬುವದೇನೋ ।
ಉತ್ತಮ ವಿಹಗವಿರಲು ಕಾಲ್ನಡಿಗೆಯಿದೇನೋ ॥
ಭೃತ್ಯರು ದಿವಿಜರು ನೀಂ ಚಾಪವ ಹೊರುವದೇನೋ ।
ನಿತ್ಯ ಶ್ರೀ ಹೃದಯದೊಳಗಿರಲು ನಿನ್ನ ಪತ್ನಿ ಹೋದಳೆಂದು
ಚಿಂತಿಸುವದೇನೋ ೨

ಸ್ವಾಮಿ ಅಹಿಶಯನ ತೃಣಶಾಯಿಯಾಗುವದೇನೋ ।
ಭೂಮಿ ನಿನ್ನೊಂದಂಘ್ರಿ ಸೇತು ಕಟ್ಟುವದೇನೋ ॥
ಈ ಮರುಳು ರಕ್ಕಸರು ನಿನಗೊಂದೀದೇನೋ ।
ತಾಮಸರ ಮೋಹಿಸುವದಕೆ, ಭಕ್ತ ಪ್ರೇಮ ಪ್ರಾಣೇಶ ವಿಠ್ಠಲನೆ
ಲೀಲೆಯೇನೋ ೩

೧೬

ಹುಚ್ಚು ಹಿಡಿಸಿದೆಯಾ ಮಾಧವ ।
ನಿಚ್ಚ ನಿನ್ನ ಪಾದಾಂಬುಜವ ಭಜಿಪರಿಗೆ ಪ

ಮತ್ತಗಜವೆಂಟು ಸೊಕ್ಕಿಲಿ ಕೊಲ್ವವು ।
ಕುತ್ತಿಗೆ ಮುರಿವರಾರು ಮಂದಿಯೂ ॥
ಎತ್ತ ಹೋಯಿತೋ ಬುದ್ಧಿ ಕುಳಿತುಕೊಂಡರೆ ಮೇಲೆ ।
ಹುತ್ತ ಬೆಳದರೆಚ್ಚರಿಕೆಯಿಲ್ಲದಂಥ ೧

ದಾರಾ ಸುತರೆನ್ನದಾರೆಂದು ನೋ ।
ಡರಾಗಾರ ನಮ್ಮದೆಂದು ಪೋಷಿಸರು ॥
ಆರಣ್ಯದಲಿ ಮುಸುಕಿಕ್ಕಿ ಧ್ಯಾನಿಸುವರು ।
ಶಾರೀರದ ಪರವಿಯನ್ನು ಬಿಟ್ಟಹರು ೨

ಬಿದ್ದು ಯದ್ದ ಕಾಳು ಆದುಕೊಂಡುಂಬರು ।
ಇದ್ದ ಬದುಕು ಜೋಕೆ ಮಾಡೊಲ್ಲರು ॥
ಪ್ರದ್ಯುಮ್ನ ಪ್ರಾಣೇಶ ವಿಠಲನೇ ಇಂಥ ।
ಬುದ್ಧಿಯ ಪ್ರೇರಿಸಿ ನೋಡಿ ಹಿಗ್ಗುವೆನೀ ೩

೧೭

ಈ ವಸುಧೆಯೊಳೆಲ್ಲರಿಗಿಂತ ಕೃಷ್ಣನು ಆವುದರಿಂದಧಿಕಾ ಪ

ವಾರಿಧಿ ಮನೆಯಲ್ಲೆ ಈಗಿನರಸರಿಗೆ ।
ನೀರೊಳಗೇಸೊಂದು ಊರಿಲ್ಲವೇ ॥
ಶಾರ್ಙ್ಗ ಧನುವಾದರೇನು ದುರ್ಲಭವಲ್ಲ ।
ಧಾರಿಣಿಯೊಳು ಮನೆ ಮನೆಯಲ್ಲಿ ಕಾರ್ಮುಖವು ೧

ಲೇಸೇನು ಕೌಸ್ತುಭವೊಂದೆಯೇ ಮಣಿಗಳು ।
ಏಸೊಂದಿಲ್ಲದೆ ಭಾಗ್ಯವಂತರಲ್ಲಿ ॥
ಶೇಷನ ಹಾಸಿಗೆ ಹಾವಾಡಿಸಿ ಹೊಟ್ಟೆ ।
ಪೋಷಿಸಿಕೊಳ್ಳರೆ ಗಾರುಡಿಗರೆಲ್ಲ ೨

ಪೀತಾಂಬರಂತು ಎಲ್ಲರಿಗಿಹದು ದೊಡ್ಡ ।
ಮಾತಲ್ಲ ವನಮಾಲೆ ವೈಜಯಂತಿ ॥
ಖ್ಯಾತಿಗೆ ಶಂಖಚಕ್ರವು ಹೇಳಿಕೊಳ್ಳಲು ।
ಜಾತಿಕಾರಗಿಲ್ಲೇ ಬಡಿವಾರವೇತಕೆ ೩

ಶ್ರೀವತ್ಸ ಶ್ರೀವತ್ಸವೆಂಬರು ಮಂದೆಲ್ಲ ।
ಆವ ಹುಣ್ಣಿನ ಕಲೆಯಾಗಿಹದೋ ॥
ಆವಾನಿ ಹಯರಥ ಮುದಿಹದ್ದುಯೇರುವ ।
ಕೋವಿದರೆಲ್ಲೇನು ನೋಡಿ ವಂದಿಸುವರೋ ೪

ವೈಕುಂಠ ಮೊದಲಾದ ಮೂರೇ ಊರವನಿಗೆ ।
ಲೋಕದೊಳರಸರಿಗೇಸೋ ವೂರು ॥
ಶ್ರೀಕಾಂತ ಪ್ರಾಣೇಶ ವಿಠಲನ ಸಂಗ ।
ಬೇಕೆಂದು ಬಯಸುವರೆಲ್ಲರೂ ತಿಳಿಯದೆ ೫

## ೧೮

ಧೊರೆತನ ಮಾಡುವರೀ ಪರಿಯಾಗಲು ।
ತರವೇ ರುಕ್ಮಿಣೀ ಪತಿ ಕೇಳು ಪ

ಬಲು ಬಲು ಋಷಿಗಳು ತಪವನೆ ಮಾಡಿ ನಿನ್ನ ।
ನಿಲುವಗಾಣದೆ ಬಳಲುವರು ॥
ಘಳಿಗೆ ಬೇಸರದಲೆ ಊಳಿಗದವನಂತೆ ।
ಬಲಿಯ ಬಾಗಿಲು ಕಾಯ್ವರೇ ೧

ಜಲಜ ಸಂಭವ ಈಶೇಂದ್ರಾದಿ ದೇವತೆಗಳು ।
ಬಿಡದೆ ನಿನ್ನ ವಂದಿಸುತಿರಲು ।
ಬಡವನಂದದಿ ಕರೆದಾಗಲೆ ತಡೆಯದೆ ।
ನಡಿಸುವರೆ ಪಾರ್ಥನ ರಥವ ೨

ಸಚ್ಚಿದಾನಂದ ನಿತ್ಯ ತೃಪ್ತ ಪೂರ್ಣ ಕಾಮನೆಂದು ।
ಹೆಚ್ಚಾಗಿ ವೇದ ಕೂಗುತಿರಲು ॥
ಹುಚ್ಚು ಪ್ರಾಣೇಶ ವಿಠ್ಠಲನಯ್ಯನೆ ಶಬರಿಯ ।
ಉಚ್ಚಿಷ್ಠ ಹಣ್ಣ ಮೆಲ್ಲುವರೆ ೩

## ೧೯

ಅಂದುಂಟಿಂದಿಲ್ಲೇ ಮಾಧವ ನಿನ್ನ ।
ಹೊಂದಿದವರ ಭಯ ಕಳೆದು ಪೊರೆವ ದಯೆ ಪ

ಶಂತನು ಭೂಪನರಸಿ ಬಳಲಿ ।
ಕಂತುಜನಕ ನೀ ಗತಿಯೆನಲೀ ॥
ಅಂತರಿಸದೆ ವಿಧವೆರಲಾಕ್ಷಣ
ಸಂತತಿ ನೆಲಸಿದೆ ಮನ್ನಿಸುತಾ ದಯ ೧

ಕಲಿಯಾಳಿಕೆ ಬಹಳಾಗಿರಲು ।
ಮಲಿನಯುಕ್ತ ಧರೆಯಾಗಿರಲು ॥
ತಿಳಿದ ಹದಿನೆಂಟು ಪುರಾಣವ ವಿರಚಿಸಿ ।
ಸಲಹಿದೆಯುತ್ತಮ ಜೀವರನಾ ದಯೆ ೨

ತಿಳಿಯದೆ ನಿನ್ನೊಲುಮೆಯವಗೆಂದು ।
ನಳಿನಾನುಜ ನೀ ಬೇಕೆಂದು ॥
ಕೊಳಲರಿದರ ಕರದಿತ್ತಾರಣದೊಳು ।
ಗೆಲಿಸಿದೆ ತೋಂಡನ ಮುದದಿಂದಾ ದಯೆ ೩

ಪಾದಜಲರಸರ ಬದುಕಿಸಿತು ।
ಪಾದ ಪೆಸರೇ ಪತಿತನ ಕಾಯ್ತು ॥
ಪಾದದಮುಂದು ಕುಬೇರಜರೀರ್ವರ ।
ಪಾದವೇ ಸದ್ಗತಿಗೈದಿಸಿತಾ ದಯ ೪

ಆ ಸೈಂಧವನಳಿದರ್ಜುನನ ।
ಪೋಷಿಸಿದಂತೆ ಮೃತಾತ್ಮಜನಾ ॥
ಭೂಸರಗಿತ್ತಂತೀ ವಿಪ್ರರ ಪ್ರಾ ।
ಣೇಶ ವಿಠ್ಠಲ ರಕ್ಷಿಸಬೇಕಾ ದಯೆ ೫

## ೨೦

ಸ್ವಾಮಿತ್ವದವರಿಗೆ ಅಯುಕ್ತವೇ ಯುಕ್ತ ।
ಶ್ರೀಮನೋರಮನೆ ಪೇಳುವೆ ಕೇಳು ಶಕ್ತ ಪ

ಮಾವನಿಗೇ ಮಾವನಾದೆಯಲೊ ಜನ್ಮಾರಭ್ಯ ।
ನೀವೊಡಲ ಹೊರದೆ ಚೋರತನ ಮಾಡಿ ॥
ಕೋವಿದಂಗತಿ ಮೆಚ್ಚು ಜಾರತನ ಮಾಡಿದುದು ।
ಆ ವನಿತೆ ಮೆದ್ದ ಫಲ ಮೆದ್ದಿ ನಿರ್ದೋಷಿ ೧

ನರಸೇವೆಯ ಮಾಡಿ ಪೆಸರಾದಿ ಮಾತೆಯ ಕೊಂದೆ ।
ಧರೆಯೊಳಗೆ ಮಾತುಲನ ಕೊಲ್ಲಬಹುದೇ ॥
ತಿರುಕಿ ಬೇಡಿಸುವಳರಸರನ ನಿನ್ನಯ ರಾಣಿ ।
ಪರಿಮಿತಿಯಿಲ್ಲದ ದುರಾಚಾರಿ ನಿನ್ನಯ ಮಗನು ೨

ಮೈದುನನು ಗುರುದ್ರೋಹಿ ಮೊಮ್ಮಗನು ಬಹು ಜಾಡಿ ।
ಮೇದಿನಿಯೊಳಗೆ ಹೇಳುತಲೆ ತಿರುಗುವ ॥
ಶ್ರೀದ ಪ್ರಾಣೇಶ ವಿಠ್ಠಲನೇ ನೀನೇ ದೊರೆ ।
ಯಾದ ಕಾರಣ ದಕ್ಕಿತಿದು ಇಲ್ಲದರೆ ಸಲ್ಲ ೩

## ೨೧

ಈ ದುರ್ಮಾರ್ಗಗಳನ್ನು ಪೀಡಿಸಬೇಡೈ ।
ಮಾಧವನೆ ಇಂದಲ್ಲ ಜನುಮ ಜನುಮದಲೀ ಪ

ಮಾತಾ ಪಿತರರ ಆಜ್ಞೆ ಮೀರಿ ನಡೆಯಿಸಬೇಡ ।
ಜಾತಿ ಧರ್ಮವ ಬಿಟ್ಟನೆನಿಸಬೇಡ ॥
ಈ ತುಚ್ಛ ವಿಷಯದಾಪೇಕ್ಷೆ ಮಾಡಿಸಬೇಡ ।
ಭೂತೇಶನೇ ಪರಮಾತ್ಮನೆನಿಸಬೇಡ ೧

ಹರಿದಿನದಲಿ ಬಿಂದು ಉದಕ ಕುಡಿಯಿಸಬೇಡ ।
ಪರದ್ರವ್ಯದಲೀಪ್ಸ ಕೊಡಲು ಬೇಡ ॥
ನಿರುತ ಪರರಾ ನಿಂದಾವನ್ನು ಮಾಡಿಸಬೇಡ ।
ನರರ ಸೇವಿಸಿ ಬದುಕಿಸಲಿಬೇಡ ೨

ಸಣ್ಣ ಮಾನವರ ಸಂಗತಿಯ ಕೊಡಲಿಬೇಡ ।
ಅನ್ಯ ಶಾಸ್ತ್ರಗಳ ಕೇಳಿಸಲು ಬೇಡ ॥
ನಿನ್ನ ದಾಸಾನಾಮತವ ಬಿಟ್ಟು ಇರಿಸಬೇಡ ।
ಯನ್ನದೀ ಶರೀರಾದಿಯೆನಿಸಬೇಡ ೩

ಉತ್ತಮರ ಪೂಜೆಗೆ ಜಾಗು ಮಾಡಿಸಬೇಡ ।
ವಿತ್ತವ ಸಜ್ಜನರಿಗೆ ಕೊಡಿಸಬೇಡ ॥
ನಿತ್ಯ ಸತ್ಕಥಾ ಶ್ರವಣವಿಲ್ಲದಲ್ಲಿಡಬೇಡ ।
ಸತ್ಯೇಶ ಯನ್ನ ಮಾತು ಮರೆಯಬೇಡ ೪

ಪ್ರಾಣೇಶ ವಿಠ್ಠಲ ನಿನ್ನನಲ್ಲದೆ ಎಂದೆಂದು ।
ಹೀನ ದೇವತೆಗಳಿಗೆ ಮಣಿಸಬೇಡ ॥
ಮಾನುಷ್ಯೋತ್ತಮಾದಿ ಬ್ರಹ್ಮಾಂತ ದಿವಿಜರಲ್ಲಿ ।
ನ್ಯೂನ ಭಕುತಿಯನ್ನು ಕೊಡಲಿಬೇಡ ೫

## ೨೨

ನೀನೇಯೆಂದು ಮರೆ ಹೊಕ್ಕೆನೋ ರಂಗ ।
ದೀನ ಜನರ ಪಾಲಿಪ ದಯಾಸಾಗರ ಪ

ಉತ್ತಮ ದ್ವಿಜರು ಮನೆಗೆ ಬರಲು ।
ಪ್ರತ್ಯುತ್ಥಾನವ ಕೊಡದಲೆ ಉ ॥
ನ್ಮತ್ತತನದಿ ಬಹು ಪಾಪವ ಗಳಿಸಿದೆ ।
ಚಿತ್ತಜ ಜನಕನೆ ದೋಷನಗ ಕುಲಿಶ ೧

ಪಾತ್ರರ ಸಂಗಡ ಕ್ಷೇತ್ರಗಳ ।
ಯಾತ್ರೆ ಚರಿಸದೆ ನಿರರ್ಥಕದಿ ॥
ಗಾತ್ರವ ಬೆಳಸಿದೆ ರುಕ್ಮಿಣೀವರನೆ ವಿ- ।
ಧಾತೃ ಕರಾರ್ಚಿತ ಕುಂದನೆಣಿಸದಿರು ೨

ಸ್ನಾನ ಸಂಧ್ಯಾವಂದನೆ ಬಿಟ್ಟು ।
ಜ್ಞಾನಿಗಳಾದವರನು ಹಳಿವೆನು ॥
ಧ್ಯಾನಿಪೆ ಸರ್ವದಾ ಪರರ ಕೇಡನು ।
ಏನೆಂಥೇಳಲಿ ಯನ್ನಯ ಅವಗುಣ ೩

ಮರೆತಾದರೂ ಹರಿಯೆಂದೊಮ್ಮೆ ।
ಸ್ಮರಿಸಿದವರ ದುರ್ಗುಣಗಳನು ॥
ಪೊರೆವನೆಂಬ ನಿನ ಬಿರುದು ಕೇಳಿ ಪದ ।
ಸರಸಿಜಕೆರಗಿದೆ ಕರುಣಿಸೋ ಮಾಧವ ೪

ಪುಸಿಯಲ್ಲವೋ ಇದು ಅಜಾಮಿಳ ।
ಪೆಸರಾಗಿಹ ಪಾಪಿಷ್ಠರೊಳು ॥
ವಶ ಮೀರಿ ಸುತನ ಕರೆಯಲಾಕ್ಷಣ ।
ಪೋಷಿಸಿದೆ ತ್ವರದಿ ಶ್ರೀ ಪ್ರಾಣೇಶ ವಿಠ್ಠಲಾ ೫

## ೨೩

ನಿನಗೆ ತಿಳಿದಂತೆ ಮಾಡುವದಯ್ಯ ಬೇಡೆನಲು ।
ಯನಗೆ ಸ್ವಾತಂತ್ರ್ಯವುಂಟೇ ॥
ಮನಸಿಜ ಪಿತ ನಿನ್ನ ಮೀರಿ, ಸಿರಿ, ವಿಧಿ, ಶರ್ವ ।
ತೃಣ ಮುರಿಯೆ ಶಕ್ತರಲ್ಲಾ ಹರಿಯೇ ಪ

ಅಪಮಾನ ಮಾಡಿಸೊ ಕೋಪವನೆ ಹೆಚ್ಚಿಸೊ
ಕೃಪಣತನದಲ್ಲಿರಿಸೊ ।
ಅಪಹಾಸಗೈದಿಸೋ ಡಾಂಭಿಕದವನೆನಿಸೋ
ಉಪವಾಸದಲ್ಲೇ ಇರಿಸೊ ।
ಕೃಪೆಯುಳ್ಳ ನರನೆನಿಸೋ ಮಾನವೆಗ್ಗಳ ಕೊಡಿಸೊ
ಚಪಲ ಬುದ್ಧಿಯನೆ ಕಲಿಸೊ ।
ಅಪರಾಧವನೆ ಹೊರಿಸೊ ಬಲು ಭಯವ ತೋರಿಸೋ
ತ್ರಿಪುರಾಂತಕರ್ಚಿತ ಪದ ಹರಿಯೇ ೧

ಬೈಸು ಬೈದಾಡಿಸೊ ಬಾಂಧವರನಗಲಿಸೊ
ಹೇಸಿಕೆಯು ಲಜ್ಜೆ ತೋರಿಸೊ ।
ಗ್ರಾಸವನೇ ಉಣಿಸೋ ನರರಾಲಯವ ಕಾಯಿಸೋ
ಕ್ಲೇಶ ನಿತ್ಯದಲಿ ಬಡಿಸೊ ।
ಆಶೆಯನು ಜರಿಸು ಕೈಕಾಲುಗಳ ಕುಂಠಿಸೊ
ದೋಷಕ್ಕೆ ಮನವಂಜಿಸೋ ।
ವಾಸುದೇವನೆ ನಿನ್ನ ವ್ರತವ ಮಾಡಿಸುವಂದು
ವೇಶ ಬಹುಕಡೆಗೆ ತಿರುಗಿಸೊ ಹರಿಯೇ ೨

ಕವನಗಳ ಪೇಳಿಸೊ ಕರ್ಮ ಬಾಹಿರನೆನಿಸೊ
ಭುವನದೊಳು ಭಂಡನೆನಿಸೊ ।
ಕವಿಸು ಅಜ್ಞಾನವನು ಸನ್ಮತಿಯ ಪ್ರೇರಿಸೊ
ಕಿವಿ ಮಾತ್ರ ದೃಢದಲಿರಿಸೋ ।

ಜವನ ಸದನದ ಪೊಗಿಸೋ ಬಂಧಾನದೊಳಗಿರಿಸೊ
ತವ ದಾಸರೊಳು ಕೂಡಿಸೊ ।
ದಿವಿಜರೊಲ್ಲಭ ನ್ಯಾಯವನ್ಯಾಯವನೆ ಮಾಡು
ಭವ ಪಂಕದೊಳು ಮುಳುಗಿಸೋ ಹರಿಯೇ ೩

ಹೆತ್ತವರ ಸೇವೆ ಮಾಡಿಸೊ ನೀಚರ ಬಳಿಯ
ತೊತ್ತು ಕೆಲಸವ ಮಾಡಿಸೋ ।
ಚಿತ್ತ ಚಂಚಲಗೊಳಿಸೊ ವೈರಾಗ್ಯ ಪುಟ್ಟಿಸೊ
ಉತ್ತಮರ ನೆರೆಯಲಿರಿಸೊ ।
ಮುತ್ತಿನಾಭರಣಿಡಿಸೊ ತಿರುಕೆಯನೆ ಬೇಡಿಸೊ
ವಿತ್ತ ಸಂಗ್ರಹ ಮಾಡಿಸೊ ।
ಮುತ್ತೆಗೊಲಿದಿಪನೆ ವಿಷ ಕುಡಿಸೊ ಅಮೃತವುಣಿಸೊ
ಮತ್ತೊಬ್ಬರಾರು ಗತಿಯೋ ಹರಿಯೇ ೪

ಸಾಲಗೊಯ್ಯನ ಮಾಡು ಕಂಡ ಕುಲದಲಿ ತಿನಿಸು
ಕೀಳು ಮನುಜರ ಪೊಂದಿಸೋ ।
ನಾಲಿಗೆಗೆಡಕನೆನಿಸೊ ಸತ್ಯ ವಚನಿಯು ಎನಿಸೊ
ಸ್ಥೂಲ ಪುಣ್ಯವ ಮಾಡಿಸೋ ।
ಕೇಳಿಸೋ ಸಚ್ಛಾಸ್ತ್ರ, ನೀತಿಯರಿಯನು ಎನಿಸೋ
ಆಲಯದಿ ಸುಖದಲಿರಿಸೋ ।
ಮೂಲೋಕ ಪತಿಯೆ ಹರಿ ಕುದುರೆಯೇರಿಸೊ ಮತ್ತೆ
ಕಾಲು ನಡಿಗೆಯಲೆ ನಡೆಸೊ ಹರಿಯೇ ೫

ಅರಸು ಪದವಿಯ ಕೊಡಿಸೊ ಕಾಷ್ಠ ಭಾರವ ಹೊರಿಸೊ
ಪರದೂಷಣೆಯ ಮಾಡಿಸೊ ।
ಮರ್ಯಾದೆಗಳು ತಿಳಿಸು ಅತಿಮೂಢನೆಂದನಿಸೊ
ನಿರುತ ರೋಗದಲಿ ಇರಿಸೋ ।
ಕರೆಕರೆಯ ಹಿಂಗಿಸೊ ದಿವ್ಯ ವಸನವನುಡಿಸೊ
ಸುರಗಂಗಿ ತಡಿಯೊಳಿರಿಸೊ ।

ಪರಮಾತ್ಮನೆ ವಂಧ್ಯನೆನಿಸೊ ಸುತರನ್ನೆ ಕೂಡೊ
ಮರಿಸೋ ದುರ್ವಿಷಯಗಳನೂ ಹರಿಯೆ ೬

ಮಾಕಾಂತ ಪ್ರಾಣೇಶ ವಿಠಲ ನೀನಿತ್ತುದಕೆ
ಶೋಕಿಸಲು ಸಲ್ಲದಯ್ಯ ।
ಆ ಕುಂಭೀಪಾಕ ಮೊದಲಾದ ನರಕದೊಳೆನ್ನ
ಹಾಕಿದರೂ ಒಳಿತೆ ಜೀಯಾ ।
ಈ ಕಲಿಯುಗದಿ ಪಂಚಭೇದ ತಿಳಿಯದ ದೈತ್ಯ
ರಾಕುಲದೊಳಿರಿಸಬೇಡ ।
ಶ್ರೀ ಕಾಳೀಕಾಂತನರ್ಚನೆ ಸರ್ವ ಕಾಲದಲಿ
ಬೇಕು ಬಿನ್ನಪ ಲಾಲಿಸೋ ಹರಿಯೇ ೭



೨೪

ಇದರೆನ್ನಧಿಕ ಸುಖವೊಂದವೊಲ್ಲೆ
ಪದುಮನಾಭನೆ ನಿನ್ನ ಪಾದಯುಗ್ಮವೆ ಸಾಕ್ಷಿ ಪ

ಮಧ್ವ ಮತದೊಳಗೆ ಜನಿಸಿ ದ್ವಾದಶನಾಮ ।
ಮುದ್ರೆ ಶ್ರೀ ತುಲಸಿ ಅಕ್ಷಮಾಲೆ ಧರಿಸಿ ॥
ಶುದ್ಧ ಗ್ರಂಥವನೋದಿ ಅದ್ವೈತರನು ಹಳಿದು ।
ಸದ್ವೈಷ್ಣವನೆಂದೆನ್ನಿಸಿಕೊಂಡರೆ ಸಾಕು ೧

ಹಿರಿಯರಾದವರಿಗೆ ಬಾಗಿ, ದಾನವ ಮಾಡಿ ।
ನಿರುತ ಸತ್ಕಥೆಗಳ ಕೇಳುತಲಿ ॥
ವರಮಂತ್ರ ಜಪಿಸುತ ಪಂಚಯಜ್ಞವ ಮಾಡಿ ।
ಹರಿದಿನ ವ್ರತವನು ನಡೆಸುತಿಪ್ಪುದೆ ಸಾಕು ೨

ಪ್ರಾಣೇಶ ವಿಠಲ ನೀನೇ ಸರ್ವೋತ್ತಮ, ಬ್ರಹ್ಮ- ।
ಪ್ರಾಣಾದಿಗಳು ನಿನ್ನ ದಾಸರೆಂಬ ॥

ಜ್ಞಾನವೆ ಗಳಿಸಿ ವೈಷ್ಣವರ ಮನೆಯ ಬಾಗಿ – ।
ಲನು ನಿರುತ ಕಾಯ್ದು ಜೀವಿಸುವದೇ ಸಾಕು ೩

## ೨೫

ಹರಿಯೆ ನೀನಲ್ಲದಾರ ಕಾಣೆ ಕಾಯ್ವರ
ಮರೆ ಹೊಕ್ಕವರ ಭಯ ಪರಿಹಾರವನು ಮಾಡಿ ಪ

ಶಿವಭಕ್ತಾಗ್ರಣಿ ಬಾರ್ಹ್ರದ್ರಥ ಗಂಜಾಲೆಮಜಾ ನಿ– ।
ನ್ನವನಿಂದಳಿಸಿದೆ, ಬಾಣನ ಬಾಗಿಲೂ ।।
ಭವ ಕಾಯ್ದಿರಲು ನೀ ತೋಳ್ಗಳನು ಛೇದಿಸುವಾಗ ।
ಲವ ಮಾತ್ರ ಪ್ರತಿಕೂಲನಾಗಲಿಲ್ಲ ಶಂಕರನು ೧

ಹರಿಯೆಂದುದಕೆ ತಾಳದಲೆ ಬಾಧಿಸುತಲಿರೆ ।
ತರಳನ ಮೊರೆ ಕೇಳಿ ಕಂಭದಿಂದ ।।
ಉರಿಯುಗುಳುತ ಬಂದು ಖಳನುದರವ ಬಗೆದು ।
ಶರಣ ಪಾಲಕನೆಂಬ ಬಿರುದು ದಕ್ಕಿಸಿಕೊಂಡೆ ೨

ಸ್ಥಾಣುವಿನ ವರ ಬಲದಿಂದಮರರ ಕಾಡೆ ।
ದಾನವಾನ್ವಯ ಕೊಂದೆ ಭಸ್ಮಾಸು– ।।
ರನು ಪಾಣಿಯ ತಲೆಯೊಳಿಡುವೆನೆಂಬೊ ಭರದಿ ಬರಲು ।
ಪ್ರಾಣೇಶ ವಿಠಲ ನೀ ಶಂಕರನನುಳುಹಿದಿ ೩

## ೨೬

ಮಂಡೆ ಬಾಗಿ ಕರವ ಮುಗಿವೆ ಕಾಯೊ ಹರಿಹರಿ ।
ಪುಂಡರೀಕ ನಯನ ಮರೆಯಬೇಡವೊ ಹರಿಹರಿ ಪ

ಕರಿ ವರದನೆ ಸರ್ವಾಂತರ್ಯಾಮಿ ಹರಿಹರಿ ।
ಕರುಣಾಸಾಂದ್ರ ತರುಣಿ ಮಾನಕಾಯ್ದ ಹರಿಹರಿ ॥
ಶರಧಿಸುತೆಯ ರಮಣ ದೀನಬಂಧು ಹರಿಹರಿ ।
ಅರಿಯೆ ನಿನ್ನನುಳಿದು ಕಾಯ್ವರನ್ನು ಹರಿಹರಿ ೧

ಮೀನನಾಗಿ ವೇದಗಳನು ತಂದೆ ಹರಿ ಹರಿ ।
ಆ ನಗವನು ಪೊತ್ತು ಅಮೃತವೆರೆದೆ ಹರಿ ಹರಿ ॥
ನೀನೇ ವರಾಹನಾಗಿಯವನಿಯ ತಂದೆ ಹರಿ ಹರಿ ।
ದಾನವನುದರವ ಬಗೆದು ಅಂದು ಹರಿ ಹರಿ ೨

ಚಿಕ್ಕ ರೂಪದಿಂದ ಬಲಿಯ ತುಳಿದೆ ಹರಿ ಹರಿ ।
ಸೊಕ್ಕಿದರಸುಗಳನು ಸವರಿಬಿಟ್ಟೆ ಹರಿ ಹರಿ ॥
ರಕ್ಕಸರನು ಕೊಂದು ಸತಿಯ ತಂದೆ ಹರಿ ಹರಿ ।
ಅಕ್ಕರದಲಿ ಪಾರಿಜಾತ ತಂದೆ ಹರಿ ಹರಿ ೩

ಅಂಬರವನು ತೊರೆದೆ ಬೌದ್ಧನಾಗಿ ಹರಿಹರಿ ।
ಕುಂಭಿಣಿಯೊಳು ಕುದುರೆಯೇರಿ ಮೆರೆದೆ ಹರಿ ಹರಿ ॥
ಶಂಬರಾಂ ಜನಕ ಧರ್ಮತನಯ ಹರಿ ಹರಿ ।
ಅಂಬುಜಾಸನಾದಿ ದಿವಿಜವಂದ್ಯ ಹರಿ ಹರಿ ೪

ಶೌರಿ ರಘುಜ ಮುನಿಜ ಪ್ರಾಣೇಶ ವಿಠಲ ಹರಿ ಹರಿ ।
ಸಾರಿದ ಶರಣರಿಗೆ ಕಲ್ಪತರುವೆ ಹರಿ ಹರಿ ॥
ಘೋರ ದುರಿತವನಕೆ ಧನಂಜಯನೆ ಹರಿಹರಿ ।
ಭಾರ ನಿನ್ನದೆವೆ ಹೇಳಲ್ಯಾಕೆ ಹರಿ ಹರಿ ೫

## ೨೭

ಕಾಯೋ ಕೃಷ್ಣ ಭವ ತೋಯದಿ ಮುಳುಗಿ ಉ– ।
ಪಾಯವ ಕಾಣದೆ ಬಾಯ ಬಿಡುವೆನೋ ಕಾಯೋ ಕಾಯೋ ಪ

ಭಾಗವತರ ಪ್ರಿಯ ನಾಗಭೂಷಣ ಸಖ ।
ನೀಗಿ ಭಯುವ ಕರ ಬೇಗನೆ ಪಿಡಿಯೊ ೧

ಇಂದಿರೆಯರಸ ಮುಕುಂದ ಯಶೋದೆಯ ।
ನಂದನ ಕರುಣಿಸೊ ಇಂದೀವರಾಕ್ಷ ೨

ಸಿಂಧುಶಯನ ಪೊರೆಯೆಂದು ಕರೆಯ ಕರಿ ।
ಬಂದು ಸಲಹಿದೆಯೋ ಮಂದ ದಯಾಳು ೩

ಕುರುಪ ಪಿಡಿಯಲುದ್ಧರಿಸಿದೆ ತರುಣಿಯ ।
ನರಕಹ ನಿನಗೆ ನಾ ಪರಕೀಯನಲ್ಲೋ ೪

ಜಾನಕೀ ವಲ್ಲಭ ನೀನೇ ಮರೆದುಬಿಡೆ ।
ಕಾಣೆನೊ ಒಬ್ಬರ ನಾನವನಿಯೊಳು ೫

ಭಕುತರಿಗೋಸುಗ ಹತ್ತವತಾರವ ।
ಅರ್ತಿಂದಲಿ ಕೊಂಡುತ್ತಮ ಶ್ಲೋಕ ೬

ದ್ವೇಷಿಗಳೆನ್ನನು ಘಾಸಿಸದಂದದಿ ।
ಪೋಷಿಸುವುದು ಪ್ರಾಣೇಶ ವಿಠ್ಠಲನೇ ೭

## ೨೮

ಪಾಹಿಮಾಂ ಪಾಹಿಮಾಂ ಕುಜ–
ನಾಹಿ ವಿಹಂಗ ಶ್ರೀರಂಗ ಕೃಪಾಂಗ ಪ

ಪಂಕಜೋದ್ಭವನಯ್ಯ ಸಂಕರುಷಣ ಚಕ್ರ ।
ಶಂಖವ ಧರಿಸಿದ ಪಂಕಜನಾಭ ೧

ನರಕ ವತ್ಸ ಬಕಾಹ ಜರಿಜಾಹ ಮನೋವಾಸ ।
ನರಸಖ ಪರಮಾತ್ಮ ಗರುಡವಾಹನನೇ ೨

ಪನ್ನಗ ತಲ್ಪ ಪ್ರಪನ್ನ ಪೋಷಕ ಹರಿ ।
ಅನ್ನಾದ ಪ್ರಾಣೇಶ ವಿಠಲ ನಿಷ್ಕುಟಿಲ ೩



೨೯

ವಾವಿಯೀ ಪರಮಾತ್ಮಗೊಂದೂ ಇಲ್ಲ ।
ಶ್ರೀ ವರನೆ ಇದು ಅಲ್ಲವೆಂಬರಿಲ್ಲ ಪ

ಮೊಮ್ಮಕ್ಕಳನ್ನು ವಂಚಿಸಿ ತಾನೆ ಕೊಲ್ಲಿಸಿದ ।
ಮೊಮ್ಮಗಗೆ ತನ್ನ ತಂಗಿಯನು ಕೊಟ್ಟ ॥
ಮೊಮ್ಮಗನ ನಾದಿನಿಯರಲ್ಲಿ ಮಕ್ಕಳ ಪಡೆದ ।
ಮೊಮ್ಮಗನ ವಹಿಸಿ ಪುತ್ರನ್ನ ಅಳಿದ ೧

ಒಬ್ಬ ಮಾವನ ನೋಡ ನೋಡ ಪ್ರಾಣವ ಕೊಂಡ ।
ಒಬ್ಬ ಮಾವನ ಕೂಡ ಕಡಿದಾಡಿದ ॥
ಒಬ್ಬ ಮಾವನ ಮೇಲೆ ಬಾಣವನ್ನೇರಿಸಿದ ।
ಒಬ್ಬ ಮಾವನ ಮಗನ ಮಾನ ಕಳೆದ ೨

ಒಬ್ಬ ಅತ್ತೆಗೆ ತಾನೆ ತಂದೆಯನ್ನಿಸಿಕೊಂಬ ।
ಒಬ್ಬ ಅತ್ತೆಗೆ ಗಂಡನಾದನಿವನು ।
ಒಬ್ಬ ಅತ್ತೆಗೆ ಮಾವನಾದನೀ ಕೇಶವನು ।
ಒಬ್ಬ ಅತ್ತೆಯ ಬಹಳ ಶ್ರಮ ಬಡಿಸಿದ ೩

ಒಬ್ಬ ಮಗಳನು ತನ್ನ ಹಿರಿಯ ಮಗನಿಗೆ ಕೊಟ್ಟ ।
ಒಬ್ಬ ಮಗಳನು ತಾನೇ ಮದುವೆಯಾದ ॥

ಒಬ್ಬ ಮಗಳಿಗೆ ಒಂದು ರೀತಿಯಲಿ ಮಗನಾದ ।
ಒಬ್ಬ ಮಗಳನು ಹಲವರಲ್ಲಿರಿಸುವ ೪

ಇವನ ನಿಜ ಭಕ್ತನೆಂಬವನು ತನ್ನ ಸತಿಯನು ।
ಸವಿಯಾಗಿ ನಾಲ್ವರಿಗೆ ಹಂಚಿ ಕೊಟ್ಟ ॥
ಭುವನದೊಳಗೆ ಪ್ರಾಣೇಶ ವಿಠಲನ ಮನೆ ನಡತೆಯಿದು ।
ಕವಿಗಳೆಲ್ಲರು ತಿಳಿದು ಪೂಜಿಸುತಿಹರು ಮುದದೀ ೫

## ೩೦

ತ್ವರಿತಾ ಬಾರಯ್ಯ ಹೇ ಶ್ರೀಯರಸ ವೆಂಕಟ ದೀನ ।
ಸುರತರುವೆ ದೇವೇಶ ವರಾಹ ಭೂಧರ ಧಾಮ ।
ಕರುಣಾ ಪಯೋದಧೆ ಸರ್ವ ರಕ್ಷಿ ಕಂಧರದೊಳ– ।
ಗಿರುತಿಹ ನರಗಜ ವದನನೇ ಪ

ಇಳಿಪತಿಗಳ ಕೂಡ ಕಲಹ ಮಾಡಿ ತೋರೆಂದು
ಅಂಗಲಾಚಲಾ ಕುಂತೀದೇವಿ ।
ಗೊಲಿದಾಸೆ ಪೂರ್ತಿಸಿ ಅನಿಲಜನಾಗ ನಿನ್ನ ತೇರೊ–
ತ್ತಲು ಹಿಂದಕ್ಕೆ ನೀ ನಗು– ।
ತ್ತಲೆ ಮುಂದಕ್ಕೆ ಬಂದಿ ದೂರಲಾಘವವಾದಿಂದಂದೀಗ
ಹಲವು ಜನರು ಬಹು ।
ಬಲುವಿಂದ ರಥವನೆಳೆದರೂ ಬಾರದಿದು
ಖಲು ಸೋಜಿಗವೆಲೆ ।
ಹಲಧರನನುಜ ಕಡಲ ಮನೆ ಕಾರವಡಲ ರವಿದಶ ಧರ
ಖಳ ವಿಪಿನ ದ್ವಿದಲ ೧

ಬರಬೇಡವೆಲವೊ ನಮ್ಮ ಮಂದಿರಾಕೆಂದು ಬಹಳಾ ಜೈ–
ದರೂ ಮುದದಿಂದ ಗೋಪಿ– ।

ಯರ ಸದ್ಮಕೆ ಪೋಗುವೆ ಜರಿದು ನಿನ್ನನು ತಾನಾ
ತರಳನ ಕಾಯ್ವೆನೆಂದಾ ।
ನರನ ತಪ್ಪೆಣಿಸದೆ ಕರೆಯದಲೆ ಪೋದೆ ನಿ–
ನ್ನರಮನೆಯ ತನಕಲಿ ।
ಎರಡೇ ಘಳಿಗೆಯೊಳು ಪರಿಪರಿ ಭಕುತ ಜನರುಗಳು ಬಿನ್ನೈ–
ಪರು ಬೀದಿಗಳೊಳು ।
ಮೆರೆಯುತಲೀಗಲೆ ಸರಸರ ಬರುವದು
ಪರಮಾಯಾಸವೇ ೨

ಮೀನಾಕ್ಷಿ ಯಶೋದೆ ನಿನ್ನನು ಪೊತಾನೆಂದು
ನುಣ್ಣನೆ ತೊಟ್ಟಿಲೊಳಿಟ್ಟು ।
ತಾ ನುಡಿಯಲು ಜೋಗುಳಾನು ಕೇಳ್ವೆ ಕಿವಿಗೊಟ್ಟು
ನಾನಾಗಮ ಸಮ್ಮತ ।
ಗಾನ ಮಾಳ್ಪುದು ವಿದ್ವಾಂಸಾನೀಕವೀಗ ನಿನ್ನ
ಧ್ಯಾನಕೆ ಬಾರದೆಯೇನು ।
ನಿನ್ನ ಬಗೆ ತಾನರಿಯಳು ಶ್ರೀ ಮಾನಿನಿ ಖಗವಹ
ಶ್ರೀನಿಧೆ ಮೂರೊಂದು ।
ಹಾನಿರಹಿತ ಗದಾಪಾಣಿ ಹರಿಯೇ ಶ್ರೀ–
ಪ್ರಾಣೇಶ ವಿಠಲನೆ ೩

## ೩೧

ಎಲೊ ರಮಾಪತಿ ಹಕ್ಕಿಗಳು ಬಾಯಿ ಬಿಡುವಂತೆ
ಬಳಲುವೆವೊ ಈಗ ನಾವೆಲ್ಲ । (ನಾವೆಲ್ಲ) ಈ ಬ್ರಹ್ಮ
ಕುಲದ ಅಭಿಮಾನ ನಿನದಲ್ಲೆ ಪ

ಗೌಡ ಪ್ರಬಲಾಗೆ ತಲೆಗೂಡೆನಿಸಿತೆನಗೆ ನೋಡ ಮನೆ
ಕಡೆಗೆ ಮಡಿವಾಳ । (ಮಡಿವಾಳ) ಮರ ಹಾಳು
ಮಾಡುವರು ದ್ವಿಜರೆಂಬನು ಜೀಯ ೧

ಗಡಿಗೆಗಳು ಒಂದನ್ನ ಕೊಡನು ಗ್ರಹಣಗಳು ಹನ್ನೆ-
ರಡೂ ಆದರನ್ನಾ ಕುಂಬಾರ । (ಕುಂಬಾರ)ನಿದ ಸ್ಮರಿಸಿ
ಅಡವಿಯೊಳು ಕುಳಿತು ಆ(ಅ ?)ಳಬೇಕು ೨

ಭಕ್ರಿಯೆಂಬುದು ತುಪ್ಪ ಸಕ್ರಿ ಮಾಡಿದ ಬಡಿಗ
ಅಕ್ರೂರ ವರದ ದಯಾಸಿಂಧು । (ದಯಾಸಿಂಧು) ಎಂದು ಈ
ಅಕ್ರಮವ ನಿನಗೇ ಉಸಿರುವೆ ೩

ಕಾಲರಕ್ಷೆಯ ಹೊಲಿಯ ಧಾಳಾಯ ಕೊಡುಯೆಂದು
ಗೋಳಾಡಿಸುವನು ಅತಿಶೂದ್ರ । (ಅತಿಶೂದ್ರ) ಈ ದುಃಖ
ಕೇಳುವರೇ ಇಲ್ಲೋ ಪರಮಾತ್ಮ ೪

ಯರಿಬೀಳು ಅದಕೂ ಮತ್ತೇರಿಸುವನೋ ಎಲ್ಲೋ ಎಂ-
ದಿರುಳೆಲ್ಲ ನಿದ್ರಿಲ್ಲೋ ಮೇಲ್ಪತ್ತಿ । (ಮೇಲ್ಪತ್ತಿ)ಯೆಂಬುವದು
ಗುರುತಿಲ್ಲಧೋಯ್ತೋ ಗುರುವರ್ಯ ೫

ಇದ್ದ ಜ್ಞಾತಿಗಳಿಂದೆ ಮುದ್ದಾಗಬೇಕೆಂಬ
ಶ್ರದ್ಧೆಯನೇ ಬಿಟ್ಟು ಅವನನ್ನೇ । (ಅವನನ್ನೇ) ಕೊಂಡಾಡಿ
ಹೊದ್ದಿ ದಿನಗಳದೂ ಬದುಕುವರು ೬

ಈ ರೀತಿ ನೋಡಲ್ಕೆ ಮೂರನೆ ಕಾಲವೇಂ
ತೋರುವದೊ ಯಮಗೆ ಪ್ರಾಣೇಶ । (ಪ್ರಾಣೇಶ) ವಿಠಲ ಉ-
ದ್ಧಾರ ಮಾಡುವದು ನೀ ಬಲ್ಲೆ ೭

## ೩೨

ವೆಂಕಟ ವಿಠಲ ನಿಸ್ಸಂಕಿತದವನ ಕ-
ಳಂಕ ನೋಡದೆ ಪಾಲಿಸೋ ॥

ಶಂಖಾರಿ ಗದಾ ಪದ್ಮ ಅಂಕ ವಿಪಾಹಿಪ
ಶಂಕರ ವಿನುತ ಪಾದ ಹೇ ಶ್ರೀದ ಪ

ಜ್ಞೇಯ ಜ್ಞಾನಗಮ್ಯ ಧ್ಯೇಯ ನೀಲಾಂಬುದ
ಕಾಯ ಗರುತ್ಮಾಂಸಗಾ ॥
ಆಯುರಾರೋಗ್ಯ ವಿದ್ಯಾ ಯಮ ನಿಯಮವಿ–
ತ್ತೀಯವನಿಯೊಳ್ ಯಶಸ್ಸು– ಪಸರಿಸು ೧

ಮರೆ ಹೊಕ್ಕವರ ಮನದರಿಕೆ ಪೂರೈಸುವನೆಂಬ
ಬಿರಿದೊಂದೆರಡೆನ್ನಲೇ ॥
ಕರಿ, ನಾರಿ, ನೃಪ ಪ್ರಮುಖರಗಣಿತರನು ನೀ
ಪೊರೆದುದು ಸ್ವಲ್ಪವೇನು – ಮಹಾಣು ೨

ಕಿಟಿ ನೀನೇ ಒಲಿದರೆ ಘಟಣವೇ ಘಟಣವೋ
ವಟಪತ್ರ ಪರ್ಯಂಕನೆ ॥
ತಟಿದಾನಂತಾಭ ನಿಷ್ಕುಟಿಲ ಶ್ರೀ ಪ್ರಾಣೇಶ
ವಿಠಲ ಭವಾಬ್ಧಿ ಪೋತ–ಸುಚರಿತ ೩

## ೩೩

ಕಾಯಯ್ಯ ರೋಗ ನಿಕಾಯ ಕಳೆದು ನಿನ್ನ
ಕಾಯಿಕೊಂಡವರ ಕೂಡ ॥
ಈ ಯಣಕವೇ ಮೆಚ್ಚರೋ ಯತಿಗಳು ಆದ–
ದ್ದಾಯಿತೋ ಶ್ರೀಶ ಗುಣಿ ಹೇ ಕರುಣೀ ಪ

ಮೃತ್ಯುಂಜಯಾರಾಧ್ಯ ಮೃತ್ಯುವಿಗೆ ಮೃತ್ಯು
ಸತ್ಯ ನೃಸಿಂಹನೆಂದು ॥
ಸತ್ಯವತಿಯ ವರಪುತ್ರ ಪೇಳಿರಲು ತಾ
ಮತ್ತೂ ಬರೆದಿಹ ಮಧ್ವ ಪ್ರಸಿದ್ಧ ೧

ಧನುವಂತ್ರಿ ಧನುವಂತ್ರಿಯೆನೆ ವ್ಯಾಧಿ ಪರಿಹಾರ-
ವೆನುತಿಹ ವಚನಗಳು ॥
ಗಣನೆಗೆ ಬಾರವೋ ಪ್ರಣತ ಜನರನಿಷ್ಟು
ದಣಿಸಲು ತಿಳಿದು ನೋಡು ದಯ ಮಾಡು ೨

ಪ್ರಾಣಮತದೊಳಿಪ್ಪ ಪ್ರಾಣಿಗಳಿಗೆ ಬಲ
ಜ್ಞಾನಾರೋಗ್ಯಪ್ರದರಾ ಕ್ಷೋಣಿಯೊಳಿನ್ನಾರಾ ॥
ಕಾಣೆ ನಿನ್ನುಳಿದು ಶ್ರೀ
ಪ್ರಾಣೇಶ ವಿಠಲರೇಯ ಸುಜ್ಞೇಯ ೩

## ೩೪

ವಿಠಲಯ್ಯ ವಿಠಲಯ್ಯ ।
ವಟಪತ್ರ ಶಯನ ವಟು ಶ್ರೀ ಪ್ರಾಣೇಶ ಪ

ಗಂಗಾಜನಕ ವಿಹಂಗವಾಹನ ವಿಧು-
ಪಿಂಗಳ ಕೋಟಿ ನಿಭಾಂಗನೆ ಪ್ರಾಣೇಶ ೧

ನಂದನವನದಿ ಸಂಕ್ರಂದನ ಮದಹರ
ಇಂದಿರಾ ದಶಮತಿ ಮಂದಿರ ಶ್ರೀ ಪ್ರಾಣೇಶ ೨

ಕಾದುಕೋ ಶರಣರ ವೇದ ವಿನುತ
ಮಧುಸೂದನ ನತಸುರ ಪಾದಪ ಪ್ರಾಣೇಶ ೩

## ೩೫

ಉದ್ಧಾರ ಮಾಡಿದ ಶ್ರೀರಾಮ ಅಹಲ್ಯಾ । ಉದ್ಧಾರ ಮಾಡಿದ ॥
ಪದ್ಮಜಾಂಡದೊಳು ಪ್ರಸಿದ್ಧವಾದ ಮಾತಿದು ಪ

ಮುನಿ ಶಾಪದಿಂದಲಿ ವನದಿ ಕಲ್ಲಾಗಿ ಬಲುದಿನ ಚಿಂತಿಸುತಲಿಹ ।
ವನಿತೆಯ ದಯೆಯಿಂದ ೧

ಮಂದಮತಿ ಮಾಟಕೀ ಇಂದುಮುಖಿಗೆ ಇಂಥ ಕುಂದು ಬಂತಲ್ಲಾ ।
ಎಂದು ಇಂದ್ರರ ಪ್ರಾರ್ಥಿಸುತಿರೆ ೨

ಮೌನಿ ಮಾತಿಗೆ ಪಾದರೇಣು ಸ್ಪರ್ಶವಿತ್ತು ಮಾನಿನಿಯ ಮಾಡಿದಾ ।
ಪ್ರಾಣೇಶ ವಿಠಲನು ೩

## ೩೬

ವ್ಯಾಸೋಕ್ತಿಯನುಸರಿಸಿ ಹತ್ತು ಅವತಾರವನು
ಶ್ರೀಶ ಮಾಡಿದ ದಿನದ ಕ್ಲಪ್ತಿಯಂ ಬರೆವೆ ಸಂ- ।
ತೋಷದಿಂ ಕೇಳ್ವುದೆಲ್ಲರು ಪೊರೆವ ಹರಿಯು ಅಭಿ-
ಲಾಷೆ ಪೂರೈಸಿ ಬಿಡದೇ ಪ

ಕೃತಯುಗ ಪ್ರಭವ ಮಧು ಶುದ್ಧ ಪ್ರತಿಪದ ಜಲಧಿ
ಸುತವಾರ ರೇವತೀ ವಿಷ್ಕಂಭ ಹಗಲು ಸಂ-
ಯುತ ಹನ್ನೆರಡು ಘಳಿಗೆಗವತರಿಸಿ
ಶ್ರೀ ಮತ್ಸ್ಯ ಹತಮಾಡಿ ತಮನೆಂಬನಾ ॥
ಚತುರಾಸ್ಯ ವೈವಸ್ವತರಿಗೊಲಿದು ಮೆರೆದ ನೀ
ಕ್ಷಿತಿಯೊಳಗೆ ಮತ್ತಾಯುಗದಿ ಕೂರ್ಮ ರೂಪದಿಂ
ಚ್ಯುತರಹಿತನವತಾರ ಮಾಡಿ ಮಾಡಿದ ಕಾರ್ಯ ಮತಿವಂತರಿಗೆ ಪೇಳೂವೆ ೧

ವಿಭವಾಬ್ದ ಜ್ಯೇಷ್ಠ ಶುಕ್ಲ ದ್ವಿತೀಯ ಬುಧವಾರ
ಶುಭದ ರೋಹಿಣಿ ಋಕ್ಷ ಧೃತಿ ಯೋಗ ದಿವದಲ್ಲಿ
ತ್ರಿಭುವನೇಶ್ವರ ನಾಲ್ಕು ಘಳಿಗೆಗುದಿಸಿಯಮೃತ
ಕ್ರತುಭುಜರಿಗುಣಿಸಿ ಕರುಣದಿಂ ॥
ಅಭಯವಿತ್ತನ್ಯರನು ದಣಿಸಿ ಧರಿಸಿದನು ಜಲ-

ಜಭವಾಂಡ ಮಂದರಾದ್ರಿಯ ಬೆನ್ನಮ್ಯಾಲಿಂದ
ಸುಭುಜಾಹ್ವಯನ ಚರಿತೆ ಸ್ಮರಿಸೆ ಕ್ಲೇಶಹ ಮತ್ತೆ ನಭಗವಹನಾ ಯುಗದಲಿ ೨

ಶುಕ್ಲ ಸಂವತ್ಸರದ ಶುಭ ಮಾಘ ಮಾಸದಲಿ
ಶುಕ್ಲ ಪಕ್ಷದ ಸಪ್ತಮೀ ಭಾನುವಾರದಲಿ
ಅಕ್ಲೇಶಪ್ರದ ಅಶ್ವಿನೀ ಸಾಧ್ಯಯೋಗದಲಿ ಶುಕ್ಲಶೋಣಿತ ವಿದೂರ ॥
ಶುಕ್ಲಾಂಬರಧರ ಕಿಟಿರೂಪದಿಂದವತರಿಸಿ
ಹಕ್ಲಾಸುರ ಹಿರಣ್ಯಶನ ತರಿದು ತ್ವರ ತನ್ನ
ಒಕ್ಲಾದವರ ಪೊರೆದ ಹಗಲೆಂಟು ಘಳಿಗೆಯೊಳು ಶುಕ್ಲಾಂಗ
ಆ ಯುಗದಲಿ ೩

ಆಂಗಿರಸವೆಂಬ ಸಂವತ್ಸರದ ವೈಶಾಖ
ತಿಂಗಳದಿ ಸಿತಪಕ್ಷ ಚತುರ್ದಶೀ ಶನಿವಾರ
ತುಂಗ ಸ್ವಾತಿ ಪರಿಘ ದಿವಾಷ್ಟ ವಿಂಶತಿ ಘಳಿಗೆ ಗಾಂಗೇಯ
ಗರ್ಭನೊರವು ॥
ಸಂಘಟನೆವಾಗಲಾ ಸಮಯದೊಳು ಸ್ತಂಭದಿಂ
ಸಂಗರಹಿತ ಹರಿ ಘುಡಿಘುಡಿಸುತಲಿ ಉದಿಸಿ ನರ
ಸಿಂಗಾಹ್ವಯದಿ ಹೇಮ ಕಶ್ಯಪನ ತರಿದು ತರಳಂಗೆ ಸನ್ಮುದ
ವಿತ್ತನೂ ೪

ತ್ರೇತಾಯುಗದಲದಿತಿ ದೇವಿ ಭಕುತಿಗೆ ಮೆಚ್ಚಿ
ಧಾತಾಬ್ದ ಭಾದ್ರಪದ ಸಿತಪಕ್ಷ ದ್ವಾದಶೀ
ಖ್ಯಾತಿ ವಿಷ್ಣುಭ ಶುಕ್ರ ಧೃತಿ ಹತ್ತೈದು ಘಟಗೆ ಪೋತ
ಭಾವದಿ ದಿವವಲಿ ॥
ತಾಂ ತಾಳಿ ಅವತಾರವಂ ತ್ರಿವಿಕ್ರಮನಾಗಿ
ಭೂತಲಾಗಸವಳೆದು ವೈರೋಚಿನಿಯ ತುಳಿದು
ಪ್ರೀತಿಪಡಿಸುತ ಶಕ್ರನಂ ಸ್ವರ್ನದಿಯ ಪಡೆದ ಈತಗೆಣೆ
ಯಾರೊ ಜಗದಿ ೫

ಅದೆ ಯುಗದಲಿ ಪ್ರಮಾಥಿಯೆಂಬ ಸಂವತ್ಸ–

ರದಲಿ ವೈಶಾಖ ಶುದ್ಧ ತೃತೀಯೆ ಸುಕರ್ಮ ಯೋ-
ಗದಲಿ ರೋಹಿಣಿ ಮಂದ ಹನ್ನೊಂದು ಘಟರಾತ್ರಿಯೊದಗುತಿರೆ
ಭೂಪತಿಗಳಾ ॥
ವಧೆಗೆ ವಿಪ್ರರ ವೃಂದವನು ಪೋಷಣೆಯ ಮಾಡು-
ವದಕೆ, ಜಮದಗ್ನಿಯಿಂದವತರಿಸಿ ರಾಮ ನಾ-
ಮದಲಿ ಪರಶುವ ಧರಿಸಿ ಈ ಧಾತ್ರಿಯೊಳು ಬಹು ಮೆರೆದ
ಮತ್ತು ಆ ಯುಗದಲಿ ೬



ತಾರಣೆಂಬಬ್ಧ ಮಧುಮಾಸ ಶುಕ್ಲ ನವಮಿಯ
ಆರನೇ ತಾಸು ದಿವದಲಿ ಪುನರ್ವಸು ಚಂದ್ರ
ವಾರ ಶೂಲೆಂಬ ಯೋಗದಲಿ ದಶರಥ ನೃಪತಿ ಹಾರೈಸಿದುದಕೆ ಒಲಿದು ॥
ಶ್ರೀರಾಮನಾಮದಿಂದವತರಿಸಿ ದೈತ್ಯ ಪರಿವಾ-
ರ ರಾವಣನ ಸಂಹರಿಸಿ ವಿಭೀಷಣಗೊಲಿದು
ವಾರಿಜೋದ್ಭವ ಮುಖ ದಿವೌಕಸರಿಗಾನಂದ ತೋರಿಸಿದ ಸೀತಾಪತಿ ೭

ಮೂರನೇ ಯುಗ ವಿರೋಧೀ ಶ್ರಾವಣವದಿ ಅ-
ರ್ಧರಾತ್ರಿಯೊಳಷ್ಟಮೀ ರೋಹಿಣೀ ವಜ್ರ ಬುಧ
ವಾರದಲಿ ಅಜನ ಬಿನ್ನಹಕೊಪ್ಪಿ ಕೃಷ್ಣಾವತಾರವನು ತಾಳಿ ಧರೆಗೆ ॥
ಭಾರವಾಗಿದ್ದ ಕಂಸಾದಿ ಖಲವೃಂದ ಸಂ-
ಹಾರಮಂ ಗೈದು ಪಾಂಡವರ ಪೋಷಿಸಿ ವಿಪ್ರ
ಗೋ ರಕ್ಷಣೆಯ ಮಾಡಿ ಧರ್ಮವಂ ಸ್ಥಾಪಿಸಿದ ಶ್ರೀರಮಣ ಮಧ್ವಸದನ ೮

ಕಲಿಖರಾಬ್ಧಾಷಾಢ ಶುದ್ಧ ದಶಮಿ ವಿಶಾಖ
ನಳಿನ ಸಖವಾರ ಶುಕ್ಲಾಹ ಯೋಗ ದಿವಾಷ್ಟ
ಘಳಿಗೆಯೊಳು ಜನನೆಂಬ ದೈತ್ಯನಲ್ಲವತರಿಸಿ ಬಲು
ದುರ್ಮತಿಯ ಪ್ರೇರಿಸಿ ॥
ಕಳೆಗೆಡಿಸಿ ಬುದ್ಧಾವತಾರವೆಂದೆನಿಸಿ ಶಿವ-
ಗೊಲಿದು ತ್ರಿಪುರವ ಕೆಡಿಸಿ ಸಜ್ಜನರ ಸಂಶಯವ
ಕಳದು, ಕರುಣಾಂಬುಧಿಯ ಮಹಿಮೆಯಂತಿಳಿಯಲಸದಳಮಾ
ವಿಧಿಗೆ ಎಂದಿಗೂ ೯

ದನುಜಪತಿ ಯುಗ ದುರ್ಮುಖಾ ಮಾರ್ಗಶಿರ ಶುದ್ಧ
ಶನಿವಾರ ದ್ವಿತೀಯೆ ಪೂರ್ವಾಷಾಢ ವೃದ್ಧಿ ಮೂ-
ರನೆ ಘಳಿಗೆ ದಿವದ ಕಲ್ಯವತಾರದಿಂ
ವ್ಲೇಂಭರನು ಸದೆದು ಭೂ ದಿವಿಜರಾ ॥
ಘನಮೋದ ಪಡಿಸಿ ವಾಜಿಯನೇರಿ ಮೆರೆದಾಡಿ
ಅನಿಮಿಷರ ಕೈಯ್ಯ ಪೂ ಮಳೆಯಂಗರಿಸಿಕೊಂ-
ಡನಘ ಬಲ್ಲವರಿಗಲ್ಲಲ್ಲೆ ಇರುತಿಹನು ಪ್ರಣತಜನ ಕಾಮಧೇನೂ ೧೦

ಈ ಪರಿಯಲಚ್ಯುತನ ಅವತಾರ ಚರಿತೆ ಸಂ-
ಕ್ಷೇಪದಿಂ ವಿರಚಿಸಿದೆ ಸದ್ಭಕ್ತಿಯಿಂದಿದನು
ಪಾಪಿಗಳಿಘೇಳದಲೆ ಕಾಲತ್ರಯದಿ ಪಠಿಸೆ ತಾಪತ್ರಗಳ ಕಳೆದು ॥
ಈ ಪೊಡವಿಯೊಳಗೆ ಬಹುಮಾನ ಮಾಡಿಸಿ, ತಂದೆ-
ಯೋಪಾದಿ ಕ್ಷಣ ಬಿಡದೆ ಸಲಹಿ ಪ್ರಾಂತಕೆ ತನ್ನ
ಆ ಪರಂಧಾಮ ವೈದಿಸುವನತಿ ಕರುಣಾಳು ಶ್ರೀಪ ಪ್ರಾಣೇಶ ವಿಠಲಾ ೧೧

## ೩೭

ಬಲ್ಲವರಿಗರಿದಲ್ಲ ಪ್ರಮೇಯವಲ್ಲ
ಬೆಳ್ಳಿ-ಭಂಗಾರಲ್ಲ ಮೆಲುವದಲ್ಲ ಪ

ಕಣ್ಣೆವೆಯನಿಕ್ಕದು ಮತ್ಸ್ಯಾವತಾರನಲ್ಲ ।
ಘನ್ನ ಕಠಿಣವು ಕೂರ್ಮ ರೂಪಿಯಲ್ಲ ॥
ಮಣ್ಣು ತಿಂಬುವದು ಇಟ್ಟಲ್ಲೆ ವರಹನೂ ಅಲ್ಲ ।
ಇನ್ನು ಬಾಯ್ದೆರೆದಿಹುದು ನರಸಿಂಹನಲ್ಲ ೧

ಮದುವೆಯಾಗಿಲ್ಲವು ವಾಮನಾವತಾರಲ್ಲ ।
ವದಗಿ ಛೇದಿಸುವದು ಭಾರ್ಗವಲ್ಲ ॥
ಮುದದಿಂದ ಅನ್ನವುಣ್ಣದು ದಾಶರಥಿಯಲ್ಲ ।
ತುದಿ ಮೊದಲು ಕಪ್ಪು ಶ್ರೀ ಕೃಷ್ಣನಲ್ಲ ೨

ಬತ್ತಲೆ ಇರುವದು ಬುದ್ಧಾವತಾರಲ್ಲ ।
ಕತ್ತರಿಸುವುದು ಬಿಡದೆ ಕಲ್ಕಿಯಲ್ಲ ॥
ಸತ್ಯಸಂಕಲ್ಪ ಶ್ರೀ ಪ್ರಾಣೇಶ ವಿಠಲನ ।
ಭೃತ್ಯರೇ ಬಲ್ಲರೀ ಗೋಪ್ಯ ಸೊಲ್ಲ ೩

## ಶ್ರೀಕೃಷ್ಣಲೀಲಾ ಕೀರ್ತನೆಗಳು

### ೩೮

ಯಶೋದೆ ಮಜ್ಜಿಗೆ ಮಾಡುತ ಮುದದಿಂ–
ದಶೋಕನಮಲ ಸುಲೀಲೆಯನು ॥
ವಿಶೇಷ ಭಕ್ತಿಂಧಾಡುವಳಾ ಕಥಾ–
ರಸ ಯಥಾಮತಿ ರಚಿಸುವೆನು ಪ

ಹತ್ತವತಾರದಿ ಮತ್ತರ ಶಿಕ್ಷಿಸಿ
ಉತ್ತಮರನು ಸಂತೈಸಿದನು ॥
ಭೃತ್ಯ ಭವಾರ್ಣವ ಬತ್ತಿಸುವಿವನನು
ಎತ್ತುವೆನತಿ ಧನ್ಯಳು ನಾನು ೧

ನದಿಜನಕನ ಕೊಡದುದ ಕದೊಳೆರೆವೆನು
ಮದನಪಿತನ ಸಿಂಗರಿಸುವೆನು ॥
ವದನ ತೆರದೆನ್ನ ಬೆದರಿಸಿದನ ಬಲು
ಹದದಿಂದಿರು ಎಂದಾಡುವೆನು ೨

ಅಣು ಮಹತ್ತೇ ಕಾಲಕೆ ತಿಳಿಯದೆ
ದಣಿದೆನು ಪಾದಗಳನು ಕಟ್ಟಿ ॥
ಜನನಿಗೆ ಸಿಕ್ಕದನೆಂಬರ ತೋರಿಸಿ
ಧನಪಜರ ಪೊರೆದ ಮರಕುಟ್ಟಿ ೩

ಅಗಣಿತ ರೂಪಿವನಂಗದಿ ಕಂಡಳು
ಜಗದಂಬೆಂಬರು ಸಜ್ಜನರು ॥
ಮಗುವೆಂದನುದಿನ ಮುದ್ದಿಸಿ ಕೊಂಕಳೊ–
ಳಗಿಡುವೆ ಯನಗೇನೆಂಬುವರೊ ೪

ಮೀನಾಂಬರೆ ಈ ಪರಿಯಿಂದಲಿ ಶ್ರೀ
ಪ್ರಾಣೇಶ ವಿಠಲನ ಪಾಡುವಳು ॥
ಈ ನುಡಿಯಾದರದಿಂ ಕೇಳಲು ಭವ
ಕಾಣರು ಪರದಲಿ ಸುಖ ಬಹಳ ೫

೩೯

ಕಣ್ಣು ಮುಚ್ಚೆನ್ನಾ ಆಡಿಸೆ
ಸಣ್ಣವರನ್ನು ಹೊರಗಡಗಿಸೆ ಪ

ಗಟ್ಟಿ ಹುಡುಗರು ಅವರೆಲ್ಲ
ಮಟ್ಟ ಮಾಯಾಗಿ ಹೋದರು ॥
ಥಟ್ಟನೆದ್ದು ಯನ್ನ ಕೈಯವರ
ಮುಟ್ಟಿಸದಿರೆ ಬಿಡೆ ನಿನ್ನ ೧

ಪಾಯಿಸ ಹೋಳಿಗೆ ಮಾಡಿ
ಬಾಯಿಗೆ ಕೈದೋರೆ ಗೋಪಿ ॥
ನಾಯೆರುವಿನೆ ನಿನ್ನ ತಲೆಗೆ
ನೀ ಯೆರಕೊಳ್ಳ ಒಲ್ಲೆನೆನ್ನೆ ೨

ಅಣ್ಣನ ರಂಬಿಸಿ ಕರೆದು
ಹಣ್ಣುಗಳವಗೆ ಕೊಡಬೇಡೆ ॥
ಚಿನ್ನದ ಗೊಂಬೆ ಬಾ ಎಂದು
ಬಣ್ಣ ಬಣ್ಣದಲೆನ್ನ ಕರೆಯ ೩

ನೀ ಹಾರ ಮಗನೆಂದು ಕೇಳಿ
ಮೇದಿನಿಯೊಳು ನಾ ಹೆಚ್ಚೆನ್ನೆ ॥
ಹೋದ ಬಾರಿ ಹೊಟ್ಟೆಗೆ ಮಾರಿ
ಹೋದಳೂ ನಿಮ್ಮಮ್ಮನೆನೆ ೪

ಯನಗೆ ಪಾಪ ನೀನಾಗಿ
ತಿನಲಿಕ್ಕಪ್ಪಚ್ಚಿ ಬೇಡೇ ॥
ಮಣಿಗುಂಡೆನಗೆ ಕೊಡುಯೆಂದು
ಮುನಸುಗುಟ್ಟೆನ್ನನು ಕಾಡೇ ೫

ದೃಷ್ಟಿ ತಾಕಿತು ಮಗಗೆಂದು
ಕಟ್ಟಿಸೆ ಯಂತ್ರ ಇನ್ನೊಮ್ಮೆ ॥
ಕೊಟ್ಟು ಅಮ್ಮಿಯ ರಂಬಿಸಿ
ತೊಟ್ಟಿಲೊಳಗಿಟ್ಟು ತೂಗೇ ೬

ಏನು ಪುಣ್ಯ ಮಾಡಿದೆನೋ
ಕ್ಷೋಣಿಗೆ ಹತಾರ್ಥವಾಗಿ ॥
ಪ್ರಾಣೇಶ ವಿಠಲನು ನಿನ್ನ
ತಾನೇ ಕೊಟ್ಟನು ಯನಗೆನ್ನೆ ೭

## ೪೦

ಯಶೋದೆ ನಿನ್ನ ಮಗಗಿದು ಥರವೇ
ವಸುಧೆಯೊಳಗಿಂಥ ಶಿಶುವಿಲ್ಲವೇ ಪ

ಪೆಟ್ಟಿಗೆಯೊಳು ತುಂಬಿ ರೊಟ್ಟಿಯ ದೇವರು ।
ಇಟ್ಟನೆ ಕಜ್ಜಿನ ಚಟ್ಟಿಗೆಯೊಳು ೧

ಸಡಗರದಿಂದ ಬೆಣ್ಣೆ ಗಡಿಗೆ ಕಾಯಲಿಟ್ಟರೆ ।
ಬಡಧಾನ ಕೇದಿಗೆ ಪಡಿಯೊಳಗೆ ೨

ಆ ಸಣ್ಣ ಕರು ತೊಟ್ಟಿಲ ಹಾಸಿಕೆಯೊಳಗಿಟ್ಟು ।
ಕೂಸು ಸೋರಿಯೊಳಿಟ್ಟು ಘಾಸಿ ಮಾಳ್ಪ ೩

ಚಿನ್ನಗುಣಲಿಟ್ಟರೆ ಅನ್ನದೊಳಗಿಟ್ಟನೆ ।
ಸುಣ್ಣದಕಲ್ಲು ಏನ್ಮಣ್ಣು ಹೇಳಲಿ ೪

ನಿದ್ರೆಯೊಳಿರೆ ಸೀರೆ ಒದ್ದಲ್ಲಿ ಬೆಣ್ಣೆಯ ।
ಮುದ್ದೀನಿಡುವನಿದು ಮುದ್ದುಯೇನೆ. ೫

ಬೆಕ್ಕಾನಲ್ಲಿಗೆ ಹಚ್ಚಿ ಇಕ್ಕಿಸಿ ಚಪ್ಪಾಳೆ ।
ಇಕ್ಕಿಸುವನೆ ಹಿಂಡು ಚಿಕ್ಕವರನ್ನಾ ೬

ನನ್ನ ಪ್ರಾಣೇಶ ವಿಠಲನ್ನಾಟ ಈ ಊರೊಳು ।
ಘನ್ನವಾಯಿತು ಬಿಡಿಸಿನ್ನು ಮಾತ್ರ ೭

## ೪೧

ಗೋಪಿ ಹೇಳೆ ರಂಗಗೆ ಬುದ್ಧಿ ಪ

ಗೋಪಿ ಹೇಳೆ ರಂಗಯ್ಯಗೆ ಬುದ್ಧಿ ಪುರದೊಳು ।
ರಾಪು ಮಾಡುವದು ವೆಗ್ಗಳವಮ್ಮ ಅ.ಪ.

ಪೋರರ ಒಡಗೂಡಿ ಬಂದು ಎಲ್ಲರು ನೋಡ
ಸೀರೆಯ ಸೆರಗು ಪಿಡಿವರೇನೇ ॥
ಜಾರೆ ಪೆಂಗಳೆರಾದರೊಳ್ಳಿತು ತಾಂ ತಡವಲು
ಈ ರೀತಿಯೆ ಪತಿಯಿದ್ದವರ ಕೂಡ ೧

ಹಿರಿಯಣ್ಣಗಿಟ್ಟಿದ್ದ ಮೀಸಲ ತುಪ್ಪವ
ಸುರಿದು ಗಡಿಗೆ ವಡದೋಡಿದ । ಗೋಪಿ ॥
ಥರವೆ ನಿಮ್ಮಮ್ಮನಲ್ಲಿಗೆ ಬಾರೋ ಎಂದರೆ
ಸೆರಗ ಕೊಸರಿ ಮಾನ ಕೊಂಬನೆ । ಗೋಪಿ ೨

ಕತ್ತಲೊಳಗೆ ಮಕ್ಕಳಂತೆ ಸಣ್ಣವನಾಗಿ
ಹತ್ತಿಲಿ ಬಂದೊರಗುವನಮ್ಮ । ಗೋಪಿ ॥
ಇತ್ತತ್ತ ಬಾ ಕಂದಯೆಂದಪ್ಪಿಕೊಳಲವ
ಕೃತ್ಯವ ಮಾಡಿ ಓಡುವನಮ್ಮ । ಗೋಪಿ ೩

ಆಕಳ ಮೊಲೆಯುಂಡು ತರುವಾಯ ಕರುಬಿಟ್ಟು
ತಾ ಕೂಗುವನೆ ಕರಕೊಳಿರೆಂದು । ಗೋಪಿ ॥
ಗೋಕುಲದೊಳು ಬಹು ದಿವಸವಾಯಿತು ದುಡ್ಡು
ತೂಕ ಕ್ಷೀರವ ಮಾರ ಕಾಣೆವೇ । ಗೋಪಿ ೪

ಬಚ್ಚಲೊಳಗೆ ಪ್ರಾಯದವಳು ಕುಳಿತು ಎಣ್ಣೆ
ಹಚ್ಚಿಕೊಂಡೆರಕೊಳ್ಳುತಿದ್ದೆವೆ । ಗೋಪಿ ॥
ಎಚ್ಚರಿಸದೆ ಬಂದು ಎದುರಿಗೆ ನಿಲ್ಲುವ
ಹುಚ್ಚನೆ ಬಹು ಜಾಲಗಾರನು । ಗೋಪಿ ೫

ಪುರುಷಗೆ ಸಂಶಯ ನಮ್ಮ ಮನೆಗೆ ಕೃಷ್ಣ
ಬರುವನೆಂಬು ಮಜ್ಜನಕೆ ಜಲ । ಗೋಪಿ ॥
ಬೆರಸಿಟ್ಟರೆಲ್ಲವು ಚೆಲ್ಲಿ ಪೋಗುವ ಗಂಡ
ಕರೆಕರೆ ಮಾಡುವ ಪರಿಪರಿ । ಗೋಪಿ ೬

ಪೋಗಲಿನಿತೂ ಮುಂದೆ ಪ್ರಾಣೇಶ ವಿಠಲಗೆ
ಹೀಗಿರುಯೆಂದು ನೀ ಪೇಳಮ್ಮಾ । ಗೋಪಿ ॥
ಈಗುಸುರಿದ ಮಾತು ಸರಿಬಾರದಿದ್ದರೆ
ಸಾಗಿರೆಂದಪ್ಪಣೆ ಕೊಡಿರೆಮ್ಮ । ಗೋಪಿ ೭

## ೪೨

ಇಂಥ ಬುದ್ಧಿಯಲ್ಲಿ ಸೇರಿತೊ ಕೃಷ್ಣ ಗೋಕುಲದೊಳು
ಎಂಥವರೂ ನಿನ್ನ ದೂರು ಹೇಳುತಿಪ್ಪರೊ ಹೀಗಾದರೆ ನಿಲ್ಲರೋ ಪ

ಗಂಡನುಳ್ಳ ನಾರಿಯರಾ ಮಂದಿಯೆಲ್ಲ ನೋಡ ಬಲು ಉ-
ದ್ದಂಡತನದಲ್ಲಿ ಸೀರೆ ಸೆರಗ ಪಿಡಿವರೇ ಇಂಥ ದುಡುಕು ಮಾಡುವರೇ ॥
ಚಂಡಾಡುವಾಗೆನ್ನವಸನ ಮರೆತೆ ಕೊಂಡು ಪೋಗಲವಳು ।
ಕಂಡು ಕೊಸರಿಕೊಂಡರಿಂಥ ಸುದ್ದಿ ಪುಟ್ಟಿಸಿ ಪೇಳುವಳಮ್ಮ ಹೊಂದಿಸಿ ೧

ಹಿರಿಯರುಳ್ಳಾ ಸೊಸೆಯ ಕೂಡ ಒಗೆತನವ ಕೆಡಿಸುವಂತೆ ।
ಸರಸವಾಡುವದು ನಿನಗೆ ಸಲ್ಲುವದೇನೋ ಯನಗೆ ಭೂಷಣವೇನೋ ॥
ನಿರುತ ಅವಳ ತಾಯಿ ನಂದಗೋಪಗಣ್ಣಾಯೆಂದು ಕರೆಯ- ।
ಲರಿತೆನತ್ತೆ ದುಗಳು ನಾದಿನಿಯೆಂದು ಮನಸಿಗೆ ಚರ್ಚೆ ಮಾಡಿದೇನೀ ಬಗೆ ೨

ಕುಲದೇವತೆಯ ಮೀಸಲು ತುಪ್ಪ ನೆಲವಿನ ಮೇಲಿಟ್ಟಿರಲು ಮದ್ದು ।
ಕಲಶವ ಒಡೆದು ಬಾಹುವದೆಲ್ಲ ಚಿನ್ನಾಟವೇನೋ, ಅವರು ಮುದ್ದಿಸುವರೇನೋ ॥
ತಿಳಿಯದೆ ನೆಳಲಿದುಯೆಂದು ಕಳ್ಳನ ಒಳಗಿರಿಸಿವಳೇಕೆಂದು ವಡದೆ ।
ನೆಲಖರಿಥೋಗುವ ಘೃತ ನೋಡಲೆ ತಿಂದೆನಮ್ಮಯ್ಯ ತಪ್ಪಿರೆ ಕಟ್ಟಾಕು ಕಯ್ಯ ೩

ಚಿನ್ನನಂತೆಯಾಗಿಯವರ ಮಗ್ಗುಲೊಳು ಮಲಗಿಯೆಂಥ ।
ಸಣ್ಣ ಕೃತ್ಯ ಮಾಡಿ ಬಾಹುವೆಂತಲ್ಲೋ ಕಂದ ಕೇಳುವರಿಗೇನು ಛಂದ ॥
ನಿನ್ನ ಸಲಿಗೆ ಬಹಳ ಕಂಡು ಇಲ್ಲದ್ದೊಂದೆ ಹುಟ್ಟಿಸುವರು ।
ಯನ್ನ ದಿಸವಕ್ಕೀ ಜಾರತ್ವ ಕಲಿತಿದ್ದೇನೇನೇ ನಿನಗೇನೂ ತಿಳಿಯದೇನೇ ೪

ಕದ್ದು ಮೊಲೆಯುಂಡು ಕರು ಬಿಟ್ಟು ಪರಕೊಂಡಿತು ನೋಡಿರಿ ಎಂಬೆಯಂತೆ ।
ದುಗ್ಧವೆ ಮಾರಿ ಬಾಳಿವೆ ಮಾಡುವರೆಂತು ತಾಳುವರೋ ಹೀಗಾದರೆ ನಿಲ್ಲರೋ ॥
ಇದ್ದಾ ಮನೆಯವರಿಗೆ ನಂಬವು ಅಂಥಾಲಾಳ ಮೊಲೆಯ ನಾನುಂಡರೆ ಮೊರೆಗೆ ।
ಒದ್ದರೆ ರೋದನ ಮಾಡುತ ನಿನ್ನ ಬಳಿಗೊಂದಿನ ಬಾರನೇ ಹುಡುಗರಿಗಂಬುವ ಮಾತೇನೇ ೫

ಇಡಲುದಕವ ಬೆರಸಿ ಮಜ್ಜನಕೆ ಛಲದಿಂದಲಿ ಚಲ್ಲಿ ಬಾಹುವರೇ ।
ಬಡಿವೆನೊ ನಾ ತಾಳದೆ, ಮುದ್ದಾದರೆ ಮತ್ತೊಮ್ಮೆಯುಣಬೇಕು ಆಡುತ ಮನೆಯೊಳಗಿರಬೇಕು ॥
ಹುಡುಗರ ಸಂಗಡ ಅಣ್ಣನೂ ನಾನೂ ಇದ್ದೆವೆ, ಅಲ್ಲಾಕೆಯ ಮೊಮ್ಮಗನು ।
ಗಡಿಗೆಯ ಉರುಳಿಸೆ ನಾ ಕಂಡವರಿಗೆ ಹೇಳಿದೆನೆ ಇಷ್ಟಾ ಯನ್ನನು ಕಾಡುವದದೃಷ್ಟಾ ೬

ಎದೆಗಳ ಮುಟ್ಟುವದೇಕೋ ಎರಕೊಂಬುವರಲ್ಲಿಗೆ ಪೋಗಿಯಿನ್ನನ್ನಾ ।
ಹದದಿಂದಲೆ ಯಿರು ಶಿಕ್ಷೆಯ ಮಾಳ್ಪೆ ಎಚ್ಚರಿಕೆಯಿರಲಿ ಕಾಲ್ಪಿಡಿದರೆ ಬಿಡೆನೋ ಮರಳಿ ॥
ಮುದದಿಂದಲಿ ಚಂಡೊಗೆಯಲು ಅವಳಾ ಬಚ್ಚಲಿಯೊಳು ಬಿತ್ತು ತಕ್ಕೊಂಡೇ ।
ಹದ ತಪ್ಪಿದರೀ ಹೆಂಗಸರೆಲ್ಲಾ ಪ್ರಾಣೇಶ ವಿಠಲನಾಣೇ ಸುಳ್ಳಲ್ಲವು ಕಾಣೇ ೭

## ೪೩

ವನಜನಾಭನ ಧಾಳಿ ಘನವಾಯಿತಿಂದಿಲಿಂದ
ಮನೆಯೊಳು ನಿಲ್ಲಲಾರೆವಮ್ಮ ಪ

ಚಿನ್ನನ ಸುದ್ದಿ ನಿತ್ಯ ಹೇಳುವರು ಹತ್ತರಗೂಡಾ ।
ಹನ್ನೊಂದೆನ್ನ ಬೇಡವಮ್ಮ ॥
ಅನ್ಯಾಯದ ಮಾತು ಹುಸಿ ಹುಟ್ಟಿಸಿಯಾಡಿದರೆ ನಮ್ಮ ।
ಸಣ್ಣವರಾಣೆ ಗೋಪೆಮ್ಮ ೧

ಪೋರರಾಟಿಕೆಯಾದರೆ ಜನನೋಡೆ ನಿರ್ಭಯದಿ ।
ಕ್ಷೀರವ ಕುಡಿಯಬೇಕಮ್ಮ ॥
ಆರೂ ಮನೆಯೊಳಿಲ್ಲದ ಸಮಯದಲ್ಲಿ ಪಾಲು ।
ಸೋರೆ ಕದ್ದೊಯ್ಯುತಿದ್ದನಮ್ಮ ೨

ಚಿಕ್ಕವರನ್ನು ರಂಬಿಸಿ ಸಕ್ಕರೆ ಕೊಟ್ಟು ಕದ್ದು ।
ರೊಕ್ಕವ ತನ್ನಿರೆಂಬುವನಮ್ಮ ॥
ಮಕ್ಕಳಾಟಿಕೆ ಆದರಾಯಿತೆ ನಿನ್ನ ಕಂದ ।
ರೊಕ್ಕವನೇನು ಮಾಡ್ಯಾನಮ್ಮ ೩

ಏಕಾಂತ ಮನೆಯೊಳು ಸರು ಹೊತ್ತಿನಲ್ಲಿ ಬಂದು ।
ಶ್ರೀಕಾಂತನಡಗಿದ್ದನಮ್ಮ ॥
ಹೇ ಕಾಂತೆ ನಿನ್ನ ಸಲಿಗಿಲ್ಲದೆಂತು ಬಂದನೆಂದು ।
ಆ ಕಾಂತ ಸಂಗ ಬಿಟ್ಟನಮ್ಮ ೪

ನೀರೊಳು ನೆರಳೆಂದು ತಿಳಿಯದ ಮಗುವಿಗೆ ।
ಪೋರನೆಳೆದು ತಾಯಂಬೊನಮ್ಮ ॥
ಹಾರುತಿರಲು ಸ್ವಾಮಿಯ ದಯೆಯಿಂದ ಕಂಡು ಒಬ್ಬ ।
ನಾರಿ ಕರಕೊಂಡು ಬಂದಳಮ್ಮ ೫

ತರಳರಿಗೆಲ್ಲ ಇದರಂತೆ ಹತ್ತಿರೆಂದು ಹೇಳಿ ।
ಹರಿವಂದು ಹತ್ತಿಕೊಂಬೊನಮ್ಮ ॥
ಕರುಗಳೆಲ್ಲವು ಹೀಗೆ ಹತವಾಗಿ ಪೋಪವು ।
ತುರುಗಳ ಗಡಹವಮ್ಮ ೬

ಬಾಲನ ಮನೆಯೊಳಗಿರ ಹೇಳಿ ಉದಕವ ।
ವಾಲಯಕೆ ತರಹೋದೆನಮ್ಮ ॥
ಮೂಲೇಶ ಹುಡುಗನ ಕೈಯ ಕಟ್ಟಿ ಮನೆಯೆಲ್ಲ ।
ಹಾಳು ಮಾಡಿಯೇನೋ ತಂದನಮ್ಮ ೭

ಹುಡುಗರ ಅಂಬೆಯಾಗಿಯೇರಿಸಿಕೊಂಡಾಡಿಸಿ ।
ಕೆಡಹಿ ಕೈಕಾಲು ಮುರಿದನಮ್ಮ ॥
ಬಡವರೆಂದರೆ ಪುನಃ ಬಿಡದಲೆ ತಾ ಹತ್ತಿ ।
ನಡುವ ನೋಯಿಸೀಹ ನೋಡಮ್ಮ ೮

ಬಾಲೆ ಅದೇನು ಕಾರಣವೋ ತಿಳಿಯದು ನಮ್ಮ ।
ಮೂಲೆಯಲಡಗಿದ್ದನಮ್ಮ ॥
ಛೀ ಲಕುಮೀಶ ನಡೆಯೆಂದೆ ಕೈ ಸಂಧಿಸದಾಕಳ ।
ಮೊಲೆ ಉಂಡಿದ್ದನಮ್ಮ ೯

ಗಂಡ ಅತ್ತೆಯ ಮನೆಘೋಗಿ ನಡುವ ಹೆಣ್ಣಾ ।
ಮುಂಡ ಬಂದಪ್ಪಿಕೊಂಡನಮ್ಮ ॥
ಕಂಡು ನಾನಿದು ತರವೇನೆಲೆ ರಂಗಾಯೆನ್ನಲು ।
ಭಂಡು ಮಾಡಿದನು ನೋಡಮ್ಮ ೧೦

ಭ್ರಷ್ಟ ಮಾತಲ್ಲವೆ ಬಾಣಂತಿ ಮಂಚದಡಿ ಕೆಂಡ- ।
ವಿಟ್ಟರೆ ಕಾಸಿಕೊಂಡನಮ್ಮ ॥
ಥಟ್ಟನೆ ಕಂಡಂಜಿ ಪ್ರಾಣಾಂತಿಕ ಆಯಿತು ಪ್ರಾಣೇಶ ।
ವಿಠಲನಿಂಥವ ಕಾಣಿರಮ್ಮ ೧೧

## ೪೪

ಇಂಥಾ ದೂರುವುದೊಳಿತಲ್ಲವರೆಮ್ಮ ರಂಗಯ್ಯನು, ಹಾವಳಿ ।
ಅಂಥಾದು ಏನು ಮಾಡಿದನಮ್ಮ ಎಂದೆಂದಿಗು ನಮ್ಮ ॥
ಸಂತತಿಯೊಳು ಗುಣವಂತರೇ ಕೃಷ್ಣ ನಿ-
ರಂತರ ಬಡವರನೆಂತು ದಣಿಸುವ ಪ

ಕಣ್ಣೇ ಬಿಡುವನು ಬೆದರಿಸೆ ಮಾತರಿಯ ವನದೊಳಗಡಗಿಹ ।
ಮಣ್ಣು ತಿಂಬುವ ಬಾಯ್ದೆರೆವನಾರ್ಯ ಹಿತಕರ್ಮಗಳರಿಯ ॥
ಅನ್ನ ತಿನ್ನಲರಿಯ ಬೆಣ್ಣೆ ಮೆಲುವ ಬಲು ।
ಹೆಣ್ಣು ನೆರೆದು ಮತ್ತನ್ಯರೊಳು ಕಲಹೆ ೧

ಎಲ್ಲಾಡೊದು ದುರ್ಗಂಧವು ಕಠಿಣಾಂಗ ನೆಲಗೆದರುವ ಶ್ರಿಂಗ ।
ರಿಲ್ಲದೆ ರಹದೆರೆವರ್ಭಕ ರಂಗ ಪಾಪವರಿಯ, ಮಂಗ- ॥
ರೊಲ್ಲಭ ಅಹಿಫಣೆಯಲ್ಲಿ ಕುಣಿದು ವಸ- ।
ನಿಲ್ಲದೆ ತಿರುಗುವಗೆಲ್ಲಿದೊ ವಾಚಿ ೨

ಮೀನ ಕೂರ್ಮದಂತ್ಯುದಕದೊಳಗೆ ಆಡುವ ಕೆಸರೊಳಗೆ ।
ಶ್ರೀನಾರಸಿಂಹ ಸಣ್ಣವರೊಳಗೆ ಆಡುವ ತನ್ನೊಳಗೆ ॥

ತಾನೇ ಅಗ್ನಿಯ ನುಂಗಿ ನಭಕೇಶಗೆ
ಮಾನವ ಕೊಟ್ಟಾನೆ ಪ್ರಾಣೇಶ ವಿಠಲನ ೩

## ೪೫

ಮಧ್ಯರಾತ್ರಿಯೊಳೀಗ ನಾ ನಿದ್ದೆಯೊಳಿರೆ ಬಾಗಿಲು ।
ಸದ್ದು ಮಾಡಿ ಪೊತ್ತಿದವರಾರ್ಯೆ । ಬಾಳ್ವರಿಗಿದು
ಬುದ್ಧೆ ಹೆಣ್ಣೋ ಗಂಡೋ ಪೇಳಿರೈ ಪ

ಮೇದಿನಿಯೊಳು ಪ್ರಸಿದ್ಧವಾದ ತುಂಗಮಹಿಮ ಶ್ರೀ ।
ಮಾಧವ ಬಂದಿಹೆ ಕೇಳೆಲೆ । ಆದರೊಳ್ಳಿತು
ಮದನನೊಳಾಡಲಿ ಹೋಗೆ ೧

ಹೇ ಸಖಿ ವಿಚಾರ ಮಾಡೆ ವಸಂತನಲ್ಲವೆ । ಸರ್ವ
ದೇಶ ಬಲ್ಲದು ನಾಚಕ್ರಿಯೆ । ಇಲ್ಲಿ ಬೇಕಿಲ್ಲ
ಆ ಸಂತಿಯೊಳಿಟ್ಟು ಮಾರೊದ್ಯೆ ೨

ಉತ್ತಮಗಂಬುವದಲ್ಲೆ ವೃತ್ತಿಕೆ ತುಳಿವನೆಂದು ಧರೆ ।
ಹೊತ್ತವ ಕೇಳೆಲೆ ಸುಂದರಿ । ಒಳ್ಳೆದು ನಿನ್ನ
ಹುತ್ತಿನೊಳು ವಾಸ ಮಾಡೊದ್ಯೆ ೩

ಸರ್ಪನಲ್ಲವೆ ಅಖಂಡಲ ದರ್ಪ ತಗ್ಗಿಸಿದವ ಸ- ।
ಮರ್ಪಕವಾಯಿತೇನೆ ಮನಕೆ । ಮರದ ಗೂಡೊಳು
ತೆಪ್ಪನೆ ಸೇರುವುದೇ ಬಹು ಲೇಸ್ಯೆ ೪

ಸೂರಿಗಳೆಲ್ಲರು ಯನ್ನ ಕೀರುತಿ ಬಲ್ಲರುಹುದಲ್ಲ ।
ನಾರೀಮಣಿ ಹರಿ ಬಂಧಿನಿ ಕೇಳೆ । ಮನಗಳಲ್ಲಿ ವಿ-
ಹಾರ ಮಾಡುವುದೇ ಲೇಸ್ಯೆ ೫

ತರುಗಳಲ್ಲಿಹೊದಕ್ಕೆ ವಾನರನಲ್ಲೆ ಜನನಾದಿ ದೋಷ ।
ವಿರಹಿತ ನಾರಾಯಣ ಬಂಧಿನೆ । ಈ ನಾಮಕ್ಕಿನ್ನು-
ತ್ತರವೇನು ಇದ್ದರೆ ಪೇಳೆ ಗುಣಧೀ ೬

ನಾನರಿತೆನೀಗ ದೇವ ಪ್ರಾಣೇಶ ವಿಠಲನೆಂಬೊದು ।
ಏನಾಡಿದಾಪದ್ಧವನು ಕ್ಷಮಿಸೈ । ತನುವೆ ನಿನ್ನದು
ಮಾನದಿಂದೆನ್ನನು ರಕ್ಷಿಸೈ ೭

## ೪೬

ಹರಿ ನಮ್ಮೊಗತನ ಮಾಡಲೀಸನೆ ಕೇಳಮ್ಮ ಇವನ
ಚರಿಯವಾರ ಮುಂಧೇಳುವನೆ ಗೋಪ್ಯಮ್ಮ ಪ

ತನ್ನೊಳು ತಾನೇ ರುದಿಸುತ ಬಂದ ಕಾಣಮ್ಮ । ಯಾಕೆನೆ
ಕಣ್ಣಿನ ಬೇನೆ ಅತಿ ಕಠಿಣೆಂದಾ ಅವನಮ್ಮ ।
ಸಣ್ಣನಳುವಳೆ ಮೊಲೆ ಹಾಲ್ತಾ ಎಂದನಮ್ಮ । ನಿನ ಕ-
ಯ್ಯನ್ನು ಮುಟ್ಟಿದಿರೆಂದು ಮಾನ ಕೊಂಡನಮ್ಮ ೧

ತರುಗಳ ಬಾಲಕೆ ತರಳರ ಕೈ ಕಟ್ಟುವನಮ್ಮ । ಯನ್ನ
ಕರದಲ್ಲಿ ಹಿಡಿ ಹಿಡಿಯೆಂದು ತೇಳಿಕ್ಕುವನಮ್ಮ ॥
ವರಗುವುದೆಲ್ಲಿ ನೀವೆಂದು ಕೇಳುವನಮ್ಮ । ನಿಮ್ಮ
ಪುರುಷರು ಕಾಂಬುವಯಿಲ್ಲ ಎಲ್ಲೆಂಬುವನಮ್ಮ ೨

ಜೋಗೀ ರೂಪವ ತಾಳಿ ಮನೆಗೆ ಬಂದನಮ್ಮ । ನಾನು
ಬಾಗಿ ಸುತರಿಲ್ಲೆಂದವನ ಕೇಳಿದೆನಮ್ಮ ॥
ಹೋಗಲಿ ಎಲ್ಲರೂ ಮಂತ್ರವ ಕೊಡುವೆನೆಂದಮ್ಮಾ । ಕೃಷ್ಣ
ನಾಗಿ ಇದುರಿಗೆ ನಿಂತ ಭಂಡು ಕೇಳಮ್ಮ ೩

ನಾಕು ಬೆರಳ ತೋರಿ ತಲೆದೂಗುವನಮ್ಮ । ಇಂಥ–
ದ್ಯಾಕೊ ಎಂದರೆ ಯೀಸೆ ಹಾಲ್ಕೊಡೆಂದನಮ್ಮ ॥
ಕಾಕು ಬುದ್ಧಿಯೊಂದೆರಡೆ ಮೂರೇನಮ್ಮ । ಶ್ರೀ ಪಿ–
ನಾಕಿಯಾಣೆ ಕರೆದು ಕೇಳೆ ಗೋಪ್ಯಮ್ಮ ೪

ಮತಿಗೆಠ್ಠೆಣ್ಬುಡುಗರ ಕರೆದೊಯ್ದೋಣ್ಯೊಳಗಮ್ಮಾ । ನಾವು
ಸತಿ ಪುರುಷಾಗ್ಯಾಡುವ ಬಾ ಎಂಬೊನಲ್ಲಮ್ಮ ॥
ಪೃಥಿವಿಯ ಹುಡುಗರ ತೆರದರೆ ಚಿಂತಿಲ್ಲಮ್ಮ । ಇವನು
ಸುತರನು ಪಡೆವದು ಬಲ್ಲನೇ ಸುಳ್ಳಮ್ಮ ೫

ನವನೀತವ ಕೊಳ್ಳೆಂದೊದರುತ ಬಂದನಮ್ಮ । ನಾನು
ಹವರನ ಕಾಶಿಗೆ ಎಷ್ಟೆಂದು ಕೇಳಿದೆನೆಮ್ಮ ॥
ಖವ ಖವ ನಗುತಲಿ ಬದಿಬದಿಗೆ ಬಂದನಮ್ಮ । ತಕ್ಕೊ
ಯುವತಿ ಇದರಷ್ಟೆಂದು ಕುಚ ಮುಟ್ಟುವನಮ್ಮ ೬

ಹಿತ್ತಲ ಕದಕೆ ಶೀ(ಕೀ)ಲ್ಯುಂಟೋ ಇಲ್ಲೆಂಬುವನಮ್ಮ । ನಮ್ಮ–
ಅತ್ತೆಯ ಕಣ್ಣು ಹೋಗಲಿ ಎನಬೇಕೇನಮ್ಮ ॥
ಉತ್ತರ ಕೊಡದಿರೆ ಒಪ್ಪಿದೆ ಇದಕೆಂಬುವನಮ್ಮ । ಇಷ್ಟೊಂ–
ದರ್ಥೆ ಪ್ರಾಣೇಶ ವಿಠಲಗೆ ಯಶೋದೆಯಮ್ಮ ೭

## ೪೭

ಕೇಳೆ ಯಶೋದೆ ನಿನ್ನ ಬಾಲಕನಾಟಗಳೂ ।
ಹೇಳಿಕೊಂಡರೆ ಸುಳ್ಳೇ ಕಾಣಿಸಿತಮ್ಮ ಪ

ನೀರೊಳಾಡುವನಲ್ಲೆ, ಪೋರರ ಕೂಡಿಕೊಂಡು ।
ಮಾರಿಯೆಂಬೊದೇನು ಸಾರಿ ಬಾಹೊದೆ ೧

ಎಲ್ಲರಂತುಂಡು ಮನೆಯಲ್ಲಾಡಬಾರದೆ ।
ಕಲ್ಲೆತ್ತುವನೆ ಯಂಥ ಬಲ್ಲಿದನಂತೆ ೨

ನಿಮ್ಮ ಹಿತಾರ್ಥನಾಗಿ ಸಮ್ಮೀಸಿ ಪೇಳಿದರೆ ।
ಬೊಮ್ಮನ ಮಗನಂತೆ ನಮ್ಮನ್ನೇ ಬೈವ ೩

ಮೂರು ಕಣ್ಣವ ಪರ ನಾರೇರ ಮುಟ್ಟಲಾರ ।
ಊರೊಳಗಿವ ಬಲು ಮೀರಿದನಮ್ಮ ೪

ಸಣ್ಣವನೆನಬೇಡ ನಿನ್ನ ಮಗನ ಗೋಪಿ ।
ಅನ್ನಿಥವಾಡೆವೆಮ್ಮ ಚಿನ್ನಗಳಾಣೆ ೫

ಬೆಂಕಿಗಂಜದೆ ನಿರಾತಂಕದರೊಳಗಿಹ ।
ಮಂಕುತನವ ನೋಡೆ ಪಂಕಜನೇತ್ರೆ ೬

ಇನ್ನೊಂದು ಮಾತು ಕೇಳೆ ಮೊನ್ನೆ ಮೊನ್ನೆ ಒಬ್ಬ ।
ಹೆಣ್ಣಿನ ಕೊಂದನಲ್ಲೆ ಅನ್ಯಾಯ ನೋಡೆ ೭

ಕಿತ್ತಿದನೊಂದು ಮರ ಮತ್ತೆರಡು ಮೂರೀದ ।
ಮತ್ತಗಜವ ಕೊಂದುನ್ಮತ್ತನ ನೋಡೆ ೮

ಸದ್ಯ ಹೋಗಲೀನಿತು ಇದ್ದೊಬ್ಬವನು । ಅಪ್ರ–
ಬುದ್ಧನಾಗಬಾರದು ಬುದ್ಧಿಯ ಹೇಳೇ ೯

ಅಧಮರೊಡನೆ ನಿತ್ಯ ಕದನ ಮಾಡುವದೇಕೆ ।
ಮಧುಸೂದನನ್ನು ಒಳ್ಳೆ ಹದನದಲ್ಲೀಡೆ ೧೦

ಕಾಣ ಬಂದದ್ದಾಡಲು ಪ್ರಾಣೇಶ ವಿಠಲಗೆ ।
ಹೀನ ತೋರುವದಮ್ಮಾ ಏನನ್ನಬೇಕೆ ೧೧

## ೪೮

ಇಕ್ಕೊಳ್ಳಕ್ಕೊ ಸಿಕ್ಕ ರಂಗ ನೋಡು ಈ
ಠಕ್ಕ ಮಾಡಿಹ ಬಹು ಕೇಡು ಪ

ಪೆಟ್ಟಿಗೆಯೊಳು ದೇವರುಗಳು ಗಂಡಸ- ।
ರಿಟ್ಟಿರಲವ ಅಂಜದಾಲೆ ॥
ಮುಟ್ಟಿ ಮನೆಗೊಂದೊಂದೊಗೆದು ಮುರು-
ಬಟ್ಟೆ ಮಾಡಿಬಿಟ್ಟನಲ್ಲೆ ೧

ತಾ ಕೆಡಿಸಿ ಒಡೆದಡಕಲಿ ಗಡಿಗೆಗಳನು ।
ಆಕಳ ಒಳಘೊಗಿಸಿಹ್ಯನೂ ॥
ಈ ಕರಕರೆಯರಿಯಳು ನಮ್ಮತೆಯೆಂ-
ಬಾಕೆನ್ನನು ಕೊಲ್ಲುವಳಲ್ಲೆ ೨

ಅಡಕಲಿಯೊಳು ದೇವರ ತಾಳಿಯ ಸರ ।
ತುಡುಗು ಮಾಡಿ ತಕ್ಕೊಂಡು ॥
ಗಡಬಿಡಿ ಮಾಡೆಲ್ಲೊಗೆದನೊ ನಾ ಎ- ।
ಷ್ಟುಡುಕಿದರೂ ಸಿಗವಲ್ಲೆ ೩

ನೆಲವಿಗೇರಿಸಿದ ಚಟ್ಟಿಗಿಗಳು ಒಂ- ।
ದಳುಕದೆ ಮೊದಲಂತಿಹವೆ ॥
ಇಳುಕಲು ಒಂದಕ್ಕೊಂದಕೆ ತೂತು ।
ಪಾಲ್ಗಳು ಈಸನಿಲ್ಲವಲ್ಲೆ ೪

ಅಡವಿಯ ದೇವರ ಹೆಸರಿಲಿ ತುಪ್ಪವ ।
ಮಡಿಯ ಮಾಡಿ ತುಂಬಿರಲು ॥
ಕುಡಿದು ಮುಚ್ಚಿ ಮೊದಲಪ್ಪಂದಿಟ್ಟಿಹ ।
ಕೊಡದೊಳು ಬರಿ ನೀರಲ್ಲೇ ೫

ಅಂಡಜವಾಹನ ಓಕಳಿ ಚಲ್ಲಿಹ ।
ಪುಂಡತನದಿ ಮಂಚದ ಮೇಲೆ ॥
ಭಂಡಿದು ಏನೆಂಧೇಳಲಿ ಮನೆಯೊಳು ।
ಗಂಡನ ಸಿಟ್ಟು ನೀ ಬಲ್ಲೆಲ್ಲೆ ೬

ಏನೆನರಿಯದವಳಿಗಿದು ಬಂದಿತು ।
ಕ್ಷೋಣಿಯೊಳಗೆ ಒಣಹರಲೆ ॥
ಮಾನನೀಯಳೆ ಈ ಪರಿ ಮಾಡಿ- ।
ದನಿಕೋ ಪ್ರಾಣೇಶ ವಿಠಲನೀಗ ೭

## ೪೯

ಕೊಡು ಸೀರಿ ಸೀರಿ ಹರಿ ।
ಕೊಡು ಸೀರಿ ಸೀರಿ ಹರಿ ಪ

ಮಾಧವ ನೀ ನಮ್ಮ ।
ಹಾದಿ ಹೋಗಲು ವಾರಿಗ್ಯಾದರೆ ಈಗ ಸರಿ ೧

ಅಕ್ಕರವಲ್ಲಿದು ಫಕ್ಕನೆ ಕಂಡರು ।
ಚಿಕ್ಕವ ನೀನು ಅರಿ ೨

ಬೇಡಲು ಪಾಲು ನೀಡದೆ ನಾವು ।
ಆಡಿದ್ದದೆಲ್ಲ ಮರಿ ೩

ನಲ್ಲರು ಹುಡುಕುತ ಇಲ್ಲಿಗೆ ಬಂದರೆ ।
ಕೊಲ್ಲರೇ ಕಂಡ ಪರಿ ೪

ಪ್ರಾಣೇಶ ವಿಠಲ ನಮ್ಮಾನವ ಕಾಯ್ವರ ।
ಕಾಣೆವೋ ಹತ್ತಿಗರಿ ೫

## ೫೦

ಕೊಡುವೆನು ಕೊಡುವೆನು ।
ಕಡೆಗೆ ಬಂದು ಕೈ ಮುಗಿದರೆ ಸೀರೆಯ ಪ

ಒಂದೇ ಮಾತು ಇನ್ನೊಂದನಾಡೆನಾ ।
ಮಂದಗಮನೆಯರೆ ಬಂದು ನಿಲ್ಲುವುದು ೧

ವತ್ಸರವಾದರು ಮಚ್ಚಲ ಗೆಲಿಸುವೆ ।
ತುಚ್ಛವ ಮಾಡೆನು ಮತ್ಸಾಂಬಿಕಿಯರೇ ೨

ನಾ ಸರ್ವೋತ್ತಮನೇ ಸುಳ್ಳಾಡಿದರೇ ।
ಸಖಿಯರೆ ಪ್ರಾಣೇಶ ವಿಠಲನೇ ೩

## ೫೧

ಬೇಡಬೇಡೆಲಾ ಕೊಡಬೇಡೆಲಾ ಸೀರೆ
ಬೇಡಿದರೆ ದೇವರಾಣೆಲಾ ಪ

ಇನ್ನೆರಡು ಗಳಿಗೆಗೆ ನಿನ್ನ ಉಂಬುವ ಹೊತ್ತು ।
ಅನ್ನದಕಾಂಕ್ಷೆ ಹುಟ್ಟದೇನಲಾ ॥
ಮನ್ನಿಸಿ ಬೇಡಿದರೆ ಉನ್ನತಾಪಂಕಾರ- ।
ವನ್ನು ತೋರುವೆ ಇಟ್ಟುಕೊಳ್ಳೆಲಾ ೧

ವ್ಯಾಳೆವಾಗಲು ಯಮ್ಮನ್ನಾಳುವವರೇ ಬಹರು ।
ಹೇಳಿ ನಿನ್ನನೇ ಕೊಲ್ಲಿಸುವೆವೇವಲಾ ॥
ಖೂಳ ಪೂತನಿ ಕೊಂದ ಧಾಳಿ ಬಲ್ಲರವರು ।
ಬಾಲಕನೆನ್ನರು ನಿನ್ನಗೆಲಾ ೨

ಬತ್ತಲರಾಗಿ ಜಲ ವ್ಯರ್ಥ ಸೇರಿದಿರೆಂದು ।
ವತ್ತಿ ನಮ್ಮನು ಕೊಲ್ಲರವರೆಲಾ ॥
ಹತ್ತೆಂಟು ತಲೆಯಿಂದ ವಸ್ತ್ರರಹಿತ ಸ್ನಾನ ।
ನಿತ್ಯ ನಮ್ಮೊಳು ನಡತೆಲಾ ೩

ಕರಕರಿಗಾರದೆ ಮೈಮರೆದು ಊರಿಗೆ ಹೋಗಿ ।
ಭರದಿಂದೆಶೋದೆಗೆ ದೂರೆವೆಲಾ ॥
ತರುಣಿಯರೆಲ್ಲ ಒಂದ ಮೊರೆಯಿಡೆ ಲಾಲಿಸಿ ।
ಒರಳಿಗೆ ಕಟ್ಟಿಸಿದ್ದೆವೆಲಾ ೪




ಲಲನೆಯರೆಲ್ಲ ಕೂಡಿ ಜಲಬಿಟ್ಟು ಬಂದರೆ ।
ಕೊಳುವೆ ನಿನ್ನಯ ಪ್ರಾಣಾ । ತಿಳಿಯಲೊ
ಗಳಿಸಿ ಸಂಸಾರವ ಸಲುಹುತಿಹರು ನಾವೇ ।
ಕಳವೇನೊ ಪ್ರಾಣೇಶ ವಿಠಲ ೫

೫೨

ಆರ ಮುಂಧೇಳಲಿ ಕರಕರಿಯ ಈ ।
ಪೋರನು ಕೊಡವಲ್ಲನಲ್ಲೇ ಸೀರೆಯ ಪ

ದಾರಿಯೊಳ್ಹೋಗಿ ಬಹರ್‍ಯಾರೆನ್ನ ಕಂಡರೆ ।
ಊರೆಲ್ಲ ಹೋಗಿ ದೂರರೇನೆ ೧

ಸಂತಿಗೆ ಹೋಗ್ಯಾಕೆ ನಿಂತರೆಂದುಡುಕುತ ।
ಕಾಂತನೇ ಬಂದರೇನಂತ ಹೇಳುವಾ ೨

ಬತ್ತಲಾರಾಗಿ ಜಲ ಮತ್ತೀಗ ಸೇರುವಾಗಿ ।
ಮೃತ್ಯು ಬಂದನಂಬುದರ್ತಿವೇನೆ ೩

ನೀರ ಹಾವುಗಳೆಲ್ಲ ಶರೀರವ ಸುತ್ತುತಿವೆ ।
ಗಾರಾದೆವಲ್ಲೆ ವಾರಿಜಾಸ್ಯೆ ೪

ಮುಳ್ಳು ತೆಪ್ಪವು ಮೋರೆಗೆಲ್ಲ ಮುಚ್ಚುತಲಿವೆ ।
ಖುಲ್ಲ ಪೋರಗೆ ದಯೆಯಿಲ್ಲವಲ್ಲೇ ೫

ಜಲ ಜಂತುಗಳೆಲ್ಲ ಗುಳು ಗುಳು ಮಾಡುತವೆ ।
ಜಲಜಾಕ್ಷಗ್ಯೇತಕೆ ತಿಳಿಯದಮ್ಮ ೬

ಮೀನಾಗಳಲ್ಲಿ ಹತ್ತಿ ಏನೇನೋ ಮಾಡುತವೆ ।
ಏಣಾಕ್ಷಿ ನಮಗೇ ಏನು ಬಂತೇ ೭

ಹಿಂದತ್ತ ಹೋದರೆ ಕಂಧರದುದ್ದ ನೀರು ।
ಮುಂದತ್ತ ಬರೆ ಎದೆಗಿಂದ ಕೆಳಗೆ ೮

ಏಡಿಗಳೆಲ್ಲ ಕಾಲು ನೋಡಿ ಕಚ್ಚುತಲಿವೆ ।
ಮಾಡಲಿನೆ ಮೋರೆ ಬಾಡಿತಲ್ಲೆ ೯

ಮೂಗುತಿ ಮಣಿಯೆಲ್ಲ ಹೇಗೋ ಎಲ್ಲೋ ಎನಲು ।
ಈ ಗತಿಯಾಗೆ ಮನೆಗೆ ಹೋಗೋದ್ಹ್ಯಾಂಗೆ ೧೦

ಏನಾದರಾಗಲಿ ಪ್ರಾಣೇಶ ವಿಠಲಗೆ ।
ನೀನೇ ಗತಿಯೋ ಕಾಯೊ ಎನ್ನಬೇಕೇ ೧೧

## ೫೩

ಸಿಕ್ಕಿರೆನ್ನ ಕೈಗೀಗ ಇನ್
ತಕ್ಕೊಳ್ಳಿ ಸೀರೆಯ ಬೇಗ । ಎಲೆ ಸಿಕ್ಕಿ ಪ

ಬೀದಿಯೊಳಗೆ ನಿಮ್ಮ ಮೈಗೆ ಸರಿಸಿ ನಾ ।
ಹೋದರೆ ಮುಟ್ಟಿದನೆಂದು ॥
ಬೈದು ಯಶೋದೆಗೆ ಪೇಳಿ ಕೊಲ್ಲಿಸಿದ್ದ- ।
ಕ್ಕಾದುದು ನೋಡಿರಿ ಇಂದು ೧

ಹುಡುಗರೊಡನೆ ನಾನಾಡುತ ಬಂದರೆ ।
ಬಡಿಯಲಿ ಹವಣಿಸಲಿಲ್ಲೇ ॥
ಕುಡಿಯಲು ಪಾಲ್ ಬಾಯ್ತೆರೆದು ಬೇಡಿದರೆ ।
ಕೊಡದಲೆ ನೂಕಿಸಲಿಲ್ಲೆ ೨

ಬಚ್ಚಲೊಳಗೆ ಮೈದೊಳೆವಲ್ಲಿಗೆ ಬಂದ ।
ನಚ್ಚುತನೆಂಬುವಿರಲ್ಲೇ ॥
ಬಚ್ಚದೆ ಬತ್ತಲೆ ಅಡವಿಯೊಳಿರುವದು ।
ಹೆಚ್ಚಿದು ಅಹ ಅಲ್ಲಲ್ಲೇ ೩

ಬೆಳ್ಳಕೆ ದಾರೋ ಕಾಣಿಸುತಿಹರು ।
ಇಲ್ಲಿಗೆ ಬಂದರೆ ಹೇಗೆ ॥
ಸುಳ್ಳಲ್ಲವೆ ನಿಮ್ಮಂಣರಾಣೆ ।
ಇನ್ನೆಲ್ಲಿಗೆ ಹೋಗುವಿರೀಗೆ ೪

ಒಂದೊಂದೇ ನಿಮ್ಮಾಟವು ಮನಸಿಗೆ ।
ತಂದರೆ ಕೋಪವು ಘನ್ನ ॥
ಇಂದಿರೇಶ ಪ್ರಾಣೇಶ ವಿಠಲ ಗತಿ- ।
ಯೆಂದಿರೆ ವಂದಿನಕನ್ನಾ ೫

## ೫೪

ಗೋಕುಲದೊಳಗೆಲ್ಲ ಕೊಳಲೂದಲು ।
ಬೇಕಾದ ಧ್ವನಿಗಳು ಕೂಡಿ ಕೃಷ್ಣ-ಗೋ- ॥

ಪಿಕಾ ಸ್ತ್ರೀಯರು ತವಕದಿಂದ ನೋಡ- ।
ಬೇಕೆಂದು ನಡೆಯೆ ನೂಕ್ಯಾಡುತ ಪ

ಎಂತೆಂತು ಪೊರಟರಂತು ನಾರಿಯರು ।
ಇಂಥ ವಿಪರೀತ ಯಿಂತಿಲ್ಲ ಮುಂದಿಲ್ಲ ।
ಸಂತೋಷವಹದು ಚಿಂತೆ ಪೋಗುವುದು ।
ಸಂತರು ಕೇಳಲು ತಂತು ಮಾತ್ರಾ ॥
ಭ್ರಾಂತರಾಗಿ ಯೇನು-ಎಂತು ತಿಳಿಯದೆ ।
ನಿಂತು ನಿಲ್ಲಲಾರದಂತರದಲೆವೆ ।
ಧ್ವಾಂತ ಕಿರಣನಂತಾನ ಮುತ್ತೂರು ।
ಅಂತರವಿಲ್ಲದ ಸಂತೆಯಂತೆ ೧

ಚಿಕ್ಕಟುಯೆಂದು ಒಬ್ಬಕ್ಕನು ಗಂಡನ ।
ತೆಕ್ಕೆಲಿ ಪಿಡಿದು ಕಕ್ಕಸ ಬಡುತ ।
ಪೊಕ್ಕಳಿಗೆ ಬಟ್ಟನಿಕ್ಕಿ ಒಬ್ಬವಳು ।
ಅಕ್ಕಿಯ ನುಚ್ಚನೆ ಸಕ್ಕರೆಂದು ॥
ಮಕ್ಕಳಿಗೀವುತ ಮಿಕ್ಕವರೆಲ್ಲರು ।
ನಕ್ಕು ತಂತಮ್ಮೊಳಗೆ ಗುಕ್ಕುತ ತಲೆಯ ।
ಹಿಕ್ಕುತ ಬಂದರು ಫಕ್ಕನೆ ಈಕ್ಷಿಸ-
ರಕ್ಕಸ ದಲ್ಲಣನಕ್ಕರದಿ ೨

ತತ್ತರಿಸಿ ಕರವೆತ್ತಿಗೆ ಬಿಟ್ಟರು ।
ಮುತ್ತಿನ ಕಟ್ಟಾಣಿವೊತ್ತಿ ಮುಡಿಗಿಟ್ಟು ।
ನೆತ್ತಿಗೆ ಸೀರೆಯ ಸುತ್ತಿಕೊಂಡು ಬರೆ ।
ಸುತ್ತಲಂಗನೆರು ಬತ್ತಲಾಗಿ ॥
ತುತ್ತು ಮಾಡಿ ಮಾಡಿ ಹತ್ತಿಸೆ ಎದೆಗೆ ।
ಹೊಸ್ತಲಿ ದಾಟಲಿ ಗತ್ತಿಡಲಾರದೆ ।
ಹತ್ತೆಂಟು ಮಂದಿಯು ಚಿತ್ತಪಲ್ಲಟಾಗಿ ।
ಉತ್ತಮಾಂಗನಿಗೆ ಸುತ್ತಿದರೊ ೩

ಹಾಲಿಗೆ ಪಿಲ್ಲೆಯು ಫಾಲವಿದೇಯೆಂದು ।
ಕಾಲಿಗೆ ಕುಂಕುಮ ವಾಲಿಟ್ಟು ಮೂಗಿಗೆ ।
ಮೇಲಾದ ಹೂವಿನ ಮಾಲಿಕೆ ಕಟಿಗೆ ।
ತೋಲಾದ ಸರಿಗೆ ಬಾಳಿಗಿಟ್ಟು ॥
ಹೇಳುವ ಮಾತನು ಕೇಳಿ ಕೇಳದಂತೆ ।
ಇಳೆಗೆ ಅಗಾಧ ಧೂಳಿಯ ಮುಚ್ಚುತ ।
ಜಾಲ ಸಂಭ್ರಮದಿ ವಾಲಯ ಬಂದರು ।
ಜಾಲಜಾನಾಭನ ವಾಲಗಕ್ಕೆ

ಭೋರೆಂಬ ಶಬ್ದವ ಮರೆತಳೆಮುನೆ ।
ಗಿರಿಯು ಬ್ಯಾವಿಯೆ ? ತುರುವು ಮೇವನು ।
ತೊರೆಯೆ, ಫಣಿಯು ಶಿರವ ತೂಗಿತು ।
ತೆರೆಯ ಕಟ್ಟಿತು ಶರಧಿಯು ॥
ಸುರರು ನಭದಿ ನೆರೆದು ಪೂಮಳೆ ।
ಗರೆಯೆ ದುಂದುಭಿ ಮೊರೆಯೆ ಸುಖವ ।
ಸುರಿಯೆ ಪ್ರಾಣೇಶ ವಿಠಲ ಕೊಳಲ ।
ತ್ವರ ನುಡಿಸುವ ಸ್ವರಗೇಳಿ ೫

## ೫೫

ರಂಗ ಕೊಳಲನೂದುವ ಮಂಗಳಸ್ವರಕೆ ಮೂಜ–
ಗಂಗಳೂ ಮೋಹಿಸುತಿಹವಲ್ಲೇ ನೋಡೆ ಏ ಸಖಿ ಪ

ಗೋಕುಲದಂಗನೆಯರು ಮೈಮರೆದು ತಮ್ಮ ಮನೆ ಕದ ।
ಹಾಕದೇ ಹರಿಯೆಲ್ಲಿಹನೆಂದರಸುತ ಬಂದರು ॥
ಗೋ ಕರುವೇನೆಂದೊಬ್ಬಳು ಹಾಕುವಳೆತ್ತಿಗೆ ದಾಳಿ ।
ನೂಕು ನೂಕಾಗುತ್ತ ಹಲವಂಗನೆರೋಡಿದರು ೧

ಕಣ್ಣಿಗೆ ಕುಂಕುಮ ಫಣೆಯಲ್ಲಿ ಕಾಡಿಗೆ ಕೆಲವರು ।
ಬಣ್ಣದ ಸೀರೆಯ ಮಂಡೆಗೆ ಸುತ್ತುತ್ತ ಕೆಲವರು ॥
ಚಿನ್ನಗೆ ಹಾಲೆರೆವೆವೆಂದು ಗಂಡರ ಪಿಡಿದು ಒಲ್ಲೆ- ।
ನೆನ್ನೆ ಕೇಳದಲೆ ನೆಲಕಿಕ್ಕುವರು ಕೆಲವರು ೨

ಹರಿಯ ನೋಡುವ ಭರದಿಂದ ಆಕಳಿವೇಯೆಂದು ।
ಹರದೇರು ಅತ್ತೇರಿಗೆ ಕುಟ್ಟಿ ಕಣ್ಣಿಯಿಕ್ಕೊರು ॥
ಒರಲಿದರೆ ನಾವಾಕಳಲ್ಲವೆಂದು ಕೇಳದಲೆ ।
ತ್ವರದಿ ಮಾಧವನ ನೋಡಬೇಕೆಂದೋಡಿದರು ೩

ಕಾಲಿಕೆ ಕಟ್ಟಾಣಿ ಆಣಿಮೆಂಟು ಪಿಲ್ಯಾ ಸರ ಮಾಡಿ ।
ಮಾಲೆಯೆಂದು ಹಾಕುವರು ಕೊರಳಿಗೆ ಕೆಲವರು ॥
ಹಾಲಿಗೆ ಮೂಗುತಿ ಕಾನ ಬಾವುಲಿ ಮೂಗಿಗೆ ತಮ್ಮ ।
ಬಾಲೆರೆಂದಾಕಳ ಕರುವೆತ್ತಿಕೊಂಡೋಡುವರು ೪

ಹೇಳಿದರೆ ಮಾತು ಕೇಳಿ ಕಳ್ಳ ಕೃಷ್ಣಾ ಸಿಕ್ಕೆಂದು ಮೈ ।
ಫಾಳಿಗೊಂಡಾಳುವರಾ ಕೈ ಕಂಭಕೆ ಕಟ್ಟುವರು ॥
ಕೀಲ ಕಂಕಣ ಬಾಗಿಲ ಬೀಗವೆಂಜೋಡಿಸಿ ಲಕ್ಷ್ಮೀ ।
ಲೋಲನಂಘ್ರಿಯ ಕಾಣಬೇಕೆಂದೆಲ್ಲರು ಓಡಿದರು ೫

ಎಲೆ ಯಶೋದೆಯಮ್ಮ ನಿನ್ನ ಮಗ ಮೊನ್ನೆ ನಿಶಿಯಲ್ಲಿ ।
ಮಲಗಂಟು ಬಿಚ್ಚಿ ಒಲ್ಲೆನೆನ್ನೆ ಕೇಳಾ ಥರವೆ ॥
ಬಲು ಶಬ್ದೆಂದು ಕೇಳಲತ್ತೆಗೊಂದು ಪರಿಯಿಂದ ।
ತಿಳಿಸಿದೆನೆಂದೊಬ್ಬಳು ಅತ್ತೆಯ ಮುಂದೆ ಹೇಳುವಳು ೬

ಬೀದಿಯೊಳ್ ಹೇಳಿದಂತೆ ನಮ್ಮನಿಗೆ ಬಾಯೆಂದೊಬ್ಬಳು ।
ಮಾಧವನಿವನೆಂದು ತನ್ನ ಪುರುಷಘೇಳುವಳು ॥
ಆ ದಿನ ನಾವೇಕತ್ರದಲ್ಲಿರೆ ಗಂಡ ಬರಲು ಸ್ತ್ರೀ ।
-ಯಾದಿ ಸೈ ಸೈಯೆಂದೊಬ್ಬಳು ಪತಿಗೇ ಪೇಳುವಳು ೭

ಬತ್ತಲೆ ಕೆಲವರು ಸೀರ್ಯುಟ್ಟವರ್ಕೆಲವರು ಉ- ।
ನ್ಮತ್ತರು ಕೆಲವರು ಪಾಡುತ್ತಲಿ ಕೆಲವರು ॥
ನೆತ್ತಿ ಹಿಕ್ಕುವರು ಕೆಲವರು ಹೂಸಿಕೊಂಡವರು ।
ತುತ್ತು ಬಾಯೊಳಿಟ್ಟವರೂ ತ್ವರದಿ ಓಡಿದರು ೮

ಒಂದಾಡುತೊಂದಾಡುವರು ನಿಂದು ನಿಂದಾಲಿಸುವರು ।
ಮಂದಿಗಂಜದಲೆ ಹರಿದು ಹರಿದು ಹೋಗುವರು ॥
ಕಂದಗಳೆತ್ತಿದವರು ಕರುಗಳೆತ್ತಿದವರು ।
ಚಂದಿರ ವದನೆಯರು ತವಕದಿ ಓಡುವರು ೯

ಹೆಂಬುಗಳಾ ಆವಾವ ಕೆಲಸದೊಳಿದ್ದಿರ್‍ರ್ಯಾ ಹ್ಯಾಂಗೆ ।
ಬನ್ನಿರೆನ್ನ ಬಳಿಗೆಂಬಂತೆ ವೇಣು ಕೇಳಿಸುವುದು ॥
ಪನ್ನಗ ಶಯನನಾಜ್ಞೆಯಂತೆ ಪ್ರವರ್ತಿಸಿದ ಮೇಲೆ ।
ಅನ್ಯಾಯವೇ ಸತಿಯರದು ಕೇಳಿರಿ ಕವಿಗಳು ೧೦

ಕರಿ ಸಿಂಹಗಳು ಹುಲಿ ತುರು ತುರುಗ ಮಹಿಷಿ ।
ಮರೆದು ವೈರತ್ವ ಹರಿಸ್ವರ ಕೇಳುತಿಹವು ॥
ಕರಗುತಿಹವು ಕಲ್ಲು, ಸುರರಾಕಾಶದಿ ಪುಷ್ಪ ।
ಸುರಿಸುತಿಹರು, ಗಂಧರ್ವರು ಪಾಡುತಿಹರು ೧೧

ಅಂಬುಜಾಕ್ಷಗೆ ಕೆಲವಂಗನೆರು ಆಲಿಂಗಿಸುವರು ।
ಚುಂಬಿಸುವರು ಕೆಲವರು ನಿಂದು ಪ್ರಾರ್ಥಿಸುವರು ॥
ಶಂಬುಪಾಣಿ ಕರುಣಿಸಿ ಇಬ್ಬರಿಗೊಬ್ಬೊಬ್ಬನಾಗಿ ।
ಹಂಬಲ ಪೂರೈಸುವಂತೆ ರಾಸಕ್ರೀಡೆಯಾಡಲು ೧೨

ಕಾಮನಾ ಪೂರ್ತಿ ಮಾಡುತಿರೆ ಹೆಂಗಳೆರು ಇಂಥ ।
ಸ್ವಾಮಿಯಮ್ಮ ಕೈ ಸೇರಿದ ನೋಡಿರೆಂದ್ಯೋಚಿಸಲು ॥
ಭಾಮಿನಿಯರಹಂಕಾರ ತಿಳಿದಾಕ್ಷಣವೊಬ್ಬಳ ।
ಪ್ರೇಮದಿ ಕೊಂಡೊಯ್ದು ಎಲ್ಲರಿಗೆ ಮಾಯವಾದನು ೧೩

ಬಹುರೂಪದೊಳೊಮ್ಮಿಂದ ಒಮ್ಮೆ ಬಂದೂ ರೂಪವಿಲ್ಲ ।
ಮಹೀಪಾಲನೇನಾದನೋ ಆವಳನ ಕೊಂಡೊಯ್ದನು ॥
ಅಹಿವೇಣಿಯರೇ ನಿಮ್ಮ ನಿಮ್ಮ ಗುಂಪಿನೊಳಗೆ ಎ- ।
ಷ್ಟಿಹಿರೊ ನಾರೆರು ಎಣಿಸಿರೆ ಯಂದಾಳೊಬ್ಬಳು ೧೪

ಒಂದೆರಡು ನೂರಿನ್ನೂರೈನೂರು ಸಾವಿರೆಂದೆಣಿಸಿ ।
ಮಂದಗಮನೆಯೊಬ್ಬಳಿಲ್ಲವಮ್ಮ ನಮ್ಮೊಳೆಂದರು ॥
ಇಂದ್ರಜಾಲದವಳೇ ಆವನು ಅಂಥ ವಂಚಕನೆ ।
ಸಂಧಿಸಿತಿಬ್ಬರಿಗೆ ಮುಂದೇನುಪಾಯವೆಂದರು ೧೫

ಹರಿ ಹೋದಕಷ್ಟೊಂದು ಅವಳ ನಾ ವೈದ ದುಃಖೊಂದು ।
ಸ್ಮರಣೆದಪ್ಪಿ ಗಂಡರೊಡನೆ ಆಡಿದ್ದೊಂದು ॥
ಸ್ಮರನ ಬಾಣ ಬಾಧೆಯೊಂದು ಬೆರದಿತಿನಿತು ಕ್ಲೇಶ ।
ಹರದೆರಚ್ಯುತನರಸುತ ವನ ಹೊಕ್ಕರು ೧೬

ಹರಿ ಒಬ್ಬಳ ಒಯ್ದನು ಕಂಡಿರಾ ಯಿದ್ದಿರ್‍ಯಾ ಎಂದು ।
ನರರೆಂಬೊ ಭ್ರಾಂತಿಯಿಂದ ಮರನ ಕೇಳುವರು ॥
ಸ್ಮರಣೆ ಬಂದಾಗ ವಮ್ಮೆ ಗಿಡ ಕೇಳುತಿಹವೆಲ್ಲೆ ।
ಹರಿ ಹರಿ ! ಜೀವಿಸುವದೆಂತು ಹೇಳಿರೆಂಬೊರು ೧೭

ಅತ್ತ ಎಲ್ಲರ ವಂಚಿಸಿ ಯನ್ನ ರೂಪಾಧಿಕ ನೋಡಿ ।
ಎತ್ತಿಕೊಂಡು ಬಂದ ರಂಗನೆಂಬೊಳಾಕಿ ಮುದದಿ ॥
ಸತ್ಯ ಸಂಕಲ್ಪವಳ ಮನತಿಳಿದು ತಿಳಿಯದಂತೆ ।
ತೊತ್ತಿಗ ನಂದದಿ ಹೆಗಲೊಳಗಿಟ್ಟು ಪೋಗಲು ೧೮

ದಣಿದೆ ಹಸಿದೆ ನೀರಡಸಿದೆನೆಂದರವಳ ।
ಅಣುಗನಂದದಿಂದಿಳಿಸೇರಿಸಿ ಕೊಂಬುವನು ॥
ಗೊನೆ ಹಣ್ಣು ನಿಲಕದೆಂದರೆ ನೀಡಿ ಕೊಡುತಲಿ ।
ಘನ ಸುಖ ಬಡಿಸುತ ದಕ್ಕಿದಂತಿರುವನು ೧೯

ಸಾವಿರ ಪ್ರಕಾರಾ ಘೋರಿಸಿದರೂ ನಗುತಲೆ ಇಹ ।
ಕೇವಲ ದಕ್ಕಿದನೆಂದು ನಿಶ್ಚಯ ತಿಳಿದಳು ॥
ಮಾ ವಿರಿಂಚೇಶ ಜಂಭಾರಿಗಳನು ವಂಚಿಸುವಂಥ ।
ದೇವನು ಈ ನಾರಿ ಅಹಂಕಾರವ ತಾಳುವನೆ ೨೦

ಸೊಕ್ಕು ಬಂತಿವಳಿಗಿನ್ನು ಶೀಘ್ರ ತಗ್ಗಿಸಬೇಕೆಂದು ।
ಚೊಕ್ಕ ಮಾವು ಪಿಡಿಸಿ ಅಪ್ರತ್ಯಕ್ಷವಾಗಲಿತ್ತಲು ॥
ತುಕ್ಕಿ ತುಕ್ಕಾರಂಣ್ಯಾ ಹೆಜ್ಜೆ ಪಿಡಿದಿಲ್ಲಿಹ ಅಲ್ಲಿಹ ।
ರಕ್ಕಸಾರೆನುತ ಬಂದೆಲ್ಲರವಳನು ಕಂಡರು ೨೧

ಜಾರೆ ಚೋರೆ ಕುಲ್ಲೆ ಖೂಳೆ ಕುಲಕಂಟಿಕೆ ನವನೀತ ।
ಚೋರನೆಲ್ಲಡಗಿಸಿದ್ದೆ ತೋರೆಲೆ ತೋರೆಂದರು ॥
ಘೋರ ಪಾತಕಿಯ ಕುಟ್ಟಿರೆಂದು ಕೆನ್ನಿ ಕುಟ್ಟುವರು ।
ಗಾರು ಮಾಡಿದರೆ ಬಟ್ಟ ಬವಣೆ ಹೇಳಿದಳು ೨೨

ಸಮದುಃಖಿಗಳಾಗಿ ಹರಿ ಹರಿಯೆಂದೊದರಲು ಈ ।
ಶ್ರಮ ನೋಡಿ ಪ್ರಾಣೇಶ ವಿಠಲ ಬಂದಾಲಿಂಗಿಸಿ ॥
ಸುಮನಗಂಧಿಯರೆ ನಿಮ್ಮಹಂಕಾರ ಬಿಡಿರೆಂದು ।
ಅಮರೇಶ ಮುಂಚಿನಂತೆಲ್ಲರೊಳಾಡಿದನು ೨೩

## ೫೬

ಸಂಜೆಯೊಳಿಂತು ಬರುವರೆ । ಶಬ್ದ ಹೊರುವರೆ । ಜನಕಂಜದಲಿಹರೆ ಪ

ಸಂಧ್ಯಾಕಾಲವು ಗೋವು ಬಾರವೆ, ವತ್ಸ ಬಳಲವೆ, ಹೀಗೆ ಬರುವುದು ಥರವೆ ।
ಅಂದಾರು ಅತ್ತಿ ಅತ್ತಿಗೆಯರು, ಇಷ್ಟು ಸಹಿಸಾರು, ಪತಿಗಳು ಸುಮ್ಮನಿರರು ॥
ಕಂದಗಳೆರೆವ ಸಮಯವಿದು, ಬಿಟ್ಟು ಬರುವುದು, ಚರ್ಯೆ ನೋಡಲ್ಕರಿದು ।
ಬಂದೊಂಥೆಳಲೆ ಮನೆಯೊಳು ದೀಪ, ಹಚ್ಚದಿರೆ ಪಾಪ, ಮಾಡಬೇಡಿರಿ ಕೋಪ ೧

ಗಂಡನೇ ದೈವ ಹೆಂಗಸರಿಗೆ, ತಿಳಿಯದೆ, ಹೀಗೆ ಬರುವರೆ ಯನ್ನ ಬಳಿಗೆ ।
ಬಂದು ಇದೇನಿರೆ ಬತ್ತಲೆ, ಬಂದಿರೆಲ್ಲೆಲೆ, ಆಭರಣವೆಲ್ಲಿವಲ್ಲೆ ॥
ಕಂಡ ಕಂಡಲ್ಲೆ ಹುಡುಕುವರು, ನಿಮ್ಮನ್ನಾಳ್ವರು, ಕಾಣದಲೆ ಮಿಡುಕುವರು ।
ತುಂಟಾಟ ಕಲಿಯಬಾರದು ಇಷ್ಟು, ಪೇಳುವಿನೆ ಒಟ್ಟು, ಕೇಳಿರೆ ಮನವಿಟ್ಟು ೨

ಆಯಿತು ನಾ ಗಂಡನಾದೇನೆ, ತಿಳಿಯದರೇನೆ, ಕಂಡವರು ನಗರೇನೆ ।
ಕಾಯೋ ಪ್ರಾಣೇಶ ವಿಠಲ ಎಂದು, ಯನ್ನ ಪದರೆಂದು, ನಮಸ್ಕರಿಸಿರೆ ಬಂದು ॥
ಈಯಾಟ ಸಲ್ಲ, ನಿಮ್ಮನೆಗೀಗ, ಸಾಗಿರೆ ಬೇಗ, ಪತಿಗಳ ಕೂಡ ಭೋಗ ।
ಆಯಾಸವಿಲ್ಲದೆ ಮಾಡಿರೆ, ಮಾತು ಕೇಳಿರೆ, ಭ್ರಾಂತರಾಗಬೇಡಿರೆ ೩

## ೫೭

ಪದುಮನಾಭನೆ ಏನೆಂತಾಡಿದ್ಯೊ ।
ವದಗಿ ಬಂದವರಿಗೆ ಎದೆಗಲ್ಲಿನಂತೆ ಪ

ಸ್ವರ ಕೇಳಿದಾಕ್ಷಣ ಸ್ಮರ ಬಾಧೆ ಹೆಚ್ಚಿ ಜ– ।
ರ್ಝರಿತರಾದೆವೊ ಕೇಳೊ ತರುಣಿಯರೆಲ್ಲ ೧

ಯೋಗೇಶ ನಿನ ನೋಡ ವೇಗದಿಂ ಬಂದೆವೊ ।
ಹೋಗೆಂದು ನಿನ್ನ ನಾಲಿಗೀಗೆಂತು ಬಂತೋ ೨

ನಾರೆರಲಂಕಾರ ಸೀರಿ ಹಂಬಲ ಬಿಟ್ಟು ।
ಸಾರಿದರೆಂದು ವಿಚಾರಿಸಲಿಲ್ಲೆ ೩

ಪತಿಗಳು ಹುಡುಕೊರೆಂದತಿ ಕರುಣವರಲ್ಲೆ ।
ಚ್ಯುತನಾವೆ ನಿನಗೆ ಅಹಿತರಾದೆವೇನೋ ೪

ಆಗಾರ ತೊರೆದು ಸುಭೋಗವಿತ್ತೆವೋ ನಿ– ।
ನಗೀಗ ಮರದಿ ನಮ್ಮ ಕೈಗುಣವೇನೋ ೫

ವಾರಿಜ ಬಾಣಕ್ಕೆ ಆರಲಾರಿವೊ ದಯಾ ।
ವಾರಿಧಿ ಕಾಮನಾ ಪೂರತಿ ಮಾಡೋ ೬

ಪ್ರಾಣೇಶ ವಿಠಲ ನೀ ಮಾನವರಂತಲ್ಲ ।
ಪ್ರಾಣದ ಪದಕ ಈಗೇನು ಕಲ್ಲಾದ್ಯೊ ೭

## ೫೮

ಎಂದಿಗೆ ಬಹನೆ ಕೃಷ್ಣ ಮಂದಸ್ಮಿತಾನನೆ ।
ಅಂದದಿಂದಿರುವ ತನ್ನಯ ವೃಂದಾವನ ಬಿಟ್ಟಿಲ್ಲಿಗೆ ತವಕದಿ ಪ

ತರುಣೀ, ಗೋಕುಲದೊಳಗಿಹ ಸಖಿಯರು ಎಂಥಾ ಧನ್ಯರೆ ।
ಪರಮಾತ್ಮನ ಪೊಂದಿ ಇತರ ಕರಕರಿ ಅರಿಯಳೆ ॥
ಹರಿಯಿಂತೊಲಿದಿರಲವರೇನು ಸುರಲೋಕದ ಸ್ತ್ರೀಯರೇ ।
ಪರಿಪರಿ ಸುಖ ಸಾಗರದೊಳಗಿರುವರು ಜರಿದು ಮಧುರೆಯಲ್ಲಿಹದೆಂದು ೧

ಅಮ್ಮ ಏನೊಳ್ಳೆವರವರಾಳ್ವರು ಸಮ್ಮಾತಾಂತಲ್ಲವೆ ।
ನಮ್ಮನೆಯವರವರಂತೆ ಸುಮ್ಮನೆ ಇರುವರೆ ॥
ಬೊಮ್ಮನ ಜನಕಮೊಲಿಸಿದರೆ ಒಮ್ಮೆಗೆ ಪೇಳಿರೆ ।
ಸಮ್ಮಸಿ ಕೊಳ್ಳಲು ಮನದಿ ಸುಕರ್ಮದ ಪ್ರಬಲಿಗೆ ಘಮ್ಮನೆ ಬಹಸಖಿ ೨

ಅಲ್ಲೀ ಸ್ತ್ರೀಯರಕಿಂತಿತಿಶಯ ಚಲ್ವೆರ್ನಾವಲ್ಲವೆ ।
ಸುಳ್ಳಲ್ಲಿಂತಾಭರಣಾಂಬರವೆಲ್ಲಿ ಕಂಡಿಹರೆ ॥
ಗೊಲ್ಲಿತಿಯರು ನಮ್ಮಂದದಿ ಸೊಲ್ಲಿಸಬಲ್ಲರೆ ।
ಮಲ್ಲ ಮರ್ದನ ಪ್ರಾಣೇಶ ವಿಠಲೆಮ್ಮನು ಬಿಟ್ಟೆಲ್ಲಿ ಪೋಗನು ೩

## ೫೯

ಥಟ್ಟನೆ ನಡೆ ಗೋಕುಲಕಕ್ರೂರ
ಅಸುರಾವೇಶವ ತಾಳು ।
ಕೃಷ್ಣನ ಕರ ತಾ ಈ ಬಗೆಯಿಂದಲಿ
ಪೇಳ್ವೆ ಉಪಾಯವ ಕೇಳು ಪ

ಮಲ್ಲರ ಕುವಲಯ ಪೀಡಾ ಪಥದೊಳು ।
ನಿಲ್ಲಿಸಿಹನು ಎನಬೇಡ ॥
ಬಿಲ್ಲು ಹಬ್ಬಕೆ ಕರೆಸಿಹನೆನ್ನು ।
ಕೊಲ್ಲುವದುಸರಲಿ ಬೇಡ ೧

ನಿಮ್ಮಾವನು ನಿನ್ನ ಕಾಣದೆ ಬಳಲುವ- ।
ವಮ್ಮಿಮ್ಮೆಲ್ಲವು ಎನ್ನು ॥
ಸುಮ್ಮನೆ ಆಲಸ್ಯಾತಕೆ ಹೋಗುವ ।
ಘಮ್ಮನೆ ಬಾ ಬಾ ಎನ್ನು ೨

ಪುಷ್ಟಿ ಮಾಡಿ ಮಾತುಗಳಿಂ ಮೆಚ್ಚಿಸಿ ।
ನೆಟ್ಟನೆ ಬಹ ಪರಿ ಮಾಡು ।
ಬಿಟ್ಟರೆ ನಿನ್ನ ಶ್ರಮ ಬಲ್ಲನು ಪ್ರಾಣೇಶ ।
ವಿಠ್ಠಲನೆವೇ ನೋಡು ೩

## ೬೦

ಬಂದನಕ್ರೂರ ವ್ರಜಕೆ ಗೋಪೀ ಕಂದನ ಚರಣಾರ ।
ವಿಂದ ಕಾಂಬುವೆ ನಿಂದಿನ ದಿನ ಸುದಿನೆಂದು ಪ

ಎಷ್ಟು ಜನ್ಮದ ಸುಕೃತ ಒದಗೀತೋ ಈ ।
ದುಷ್ಟನ ಸಂಗದಿಂದ ॥

ಬಿಟ್ಟು ಇಚ್ಛಾನುಸಾರದಿ ಗೋಕುಲದ ಮಾರ್ಗ ।
ಮೆಟ್ಟಿದೆ ಹರಿ ದಯೆಯಾದದ್ದು ನೋಡೆಂದು ೧

ಒಂದೊಂದು ಹೆಜ್ಜೆಗಳ ಬರುತ ಕ್ರಮ– ।
ದಿಂದ ಯಮುನೆಯ ದಾಟಿ ॥
ವೃಂದಾವನದ ಭೂಮಿ ಕಾಣುತ ಬಹು ಮುದ– ।
ದಿಂಧರಿ ಹರಿಯೆಂದು ನಯನೋದ (ಕ)ಸುರಿಸುತ್ತ ೨

ಇಲ್ಲೆಲ್ಲ ಸಂಚಾರವ ಮಾಡಿಹ ಖಳ– ।
ದಲ್ಲಣನೆಂದು ಧೂಳೀ– ।
ಯಲ್ಲುರುಳುತ ಪೊಗಳುತ ಶ್ರೀ ಪ್ರಾಣೇಶ ವಿ– ।
ಠಲಗೆರಗಿ ಕೈ ಮುಗಿದು ನಿಂದ ತುತಿಸುತ ೩

## ೬೧

ವೃಂದಾವನಕೆ ಹೋದಕ್ರೂರ ।
ನಂದಜನ ಕರತಾರದೆ ಬಾರ ॥
ಇಂದಿರೇಶನ ಕಾಣುತಿವೆಲ್ಲಾ ।
ಇಂದಿನಾ ದಿನ ಶುಭದಿನವಮ್ಮ ಪ

ಹುಟ್ಟಿದಾರಭ್ಯ ಗೋಕುಲದಲ್ಲಾ ।
ಗುಪ್ಟ ಗೊಲ್ಲಿತಿಯರ ನೋಡಿ ಬಲ್ಲ ॥
ಪಟ್ಟಣದ ಹೆಂಗಳೆರು ನಮ್ಮನ್ನೆಲ್ಲಾ ।
ಬಿಟ್ಟು ಹೋಗ ಶ್ರೀಹರಿ ಪುಸಿಯಲ್ಲ ೧

ಬಾಚಿ ಬೈತಲೆ ಸೂರುತಿ ಉಡರಿ ।
ಊಚು ಕುಪ್ಪಸ ಬಿಗಿಮಾಡಿ ತೊಡಿರಿ ॥
ಸುಚಾಮೀ ಕರದೊಸ್ತಗಳಿಡಿರಿ ।
ನಾಚದಲೆ ಬಹಗೆದುರಿಗೆ ನಿಲಿರಿ ೨

ತನ್ನವರೆಂದೆಮ್ಮಿಂಗಿತವರಿವ ।
ಘನ್ನ ಪ್ರಾಣೇಶ ವಿಠಲಾನು ಕರೆವ ॥
ಚೆನ್ನಾಗಿ ಪಿಡಿದು ಉದ್ಧರಿಸುವ ।
ಅನ್ಯಾಲೋಚನೆಗಳನು ಮರಸುವ ೩

## ೬೨

ಬರಬೇಡ ಬರಬೇಡ ।
ದುರುಮತಿಯೊಳಗಿಹ ಕಂಸನು, ಶ್ರೀಹರಿ ಪ

ಮದಗಜವಿರಿಸಿಹನಂತೆ ಕೃಷ್ಣನ ।
ಎದುರಿಗೆ ಬಿಡಬೇಕಂತೆ । ಕೆಡಹಿ
ಎದೆಯಲಿ ತುಳಿಸುವನಂತೆ । ಖಳ ತಾ
ಮುದದಿಂದಿರು ಬೇಕಂತೆ ಶ್ರೀಹರಿ ೧

ಹೀನ ಕೆಲಸ ಬಹಳಂತೆ । ಕೇಳಿದೆ
ಕಾಣದ ಮಾತುಗಳಂತೇ । ದುರ್ಜನ
ಚಾಣೂರ ಮುಷ್ಟಿಕರಂತೆ । ಯುದ್ಧದಿ
ಪ್ರಾಣವ ಕೊಳಬೇಕಂತೆ ಶ್ರೀಹರಿ ೨

ಕಟ್ಟಲಿಗಳು ಹೀಗಂತೆ । ಪಾಳತಿ–
ಯಿಟ್ಟಹನಲ್ಲೆಲ್ಲಂತೆ । ಈ ಪರಿ
ಗುಟ್ಟಿನ ಕಾರ್ಯಗಳಂತೆ । ಪ್ರಾಣೇಶ
ವಿಠ್ಠಲಗಿದು ಹಬ್ಬವಂತೆ ಶ್ರೀಹರಿ ೩

## ೬೩

ಎಲ್ಲಿ ಈ ಹಬ್ಬ ಬಂತಮ್ಮಗಳಿರಾ ಲಕ್ಷ್ಮೀ ।
ನಲ್ಲ ಹೋಗುವ ನೀವು ಕೇಳಿದಿರಾ ಪ

ತಂಗಿ ಒಬ್ಬ ಅಕ್ರೂರನೆಂಬುವನೆ ನಮ್ಮ ।
ರಂಗಯ್ಯನ ಕೂಡಿಕೊಂಡು ಪೋಪನೆ ॥
ಬಂಗಾರ ಬೆಳ್ಳಿಯಾಸೆ ನಮಗಿತ್ತೇನೆ ದೇವೋ- ।
ತ್ತುಂಗನೇ ಸಾಕೆಂದಿದ್ದೆವೆ ಸುಮ್ಮನೆ ೧

ಅಕ್ಕ ಆರು ಹೇಳಿದರೀ ಮಾತನು ನಮ್ಮ ।
ಅಕ್ಕರ ಬರಿದಾಯಿತು ಇನ್ನೇನು ॥
ಮಿಕ್ಕ ನಾರೀಯರೂ ಕೇಳಿರಿದನು ಪೋಗಿ ।
ತೆಕ್ಕಿಲಿ ಪಿಡಿದು ನಿಲ್ಲಿಸುವನು ೨

ಅಂದೇ ಹೇಳಿದ್ದೆನವ್ವ ನಾ ಇವನಾ ಗುಣ ।
ಇಂದಿರೇಶ ವಂಚಕನೆಂಬುದನಾ ॥
ಮಂದಿಯೊಳು ನಗಿ ಮಾಡಿ ಈಗೆಮ್ಮನಾ ಬಿಟ್ಟಾ ।
ನಂದದಿಂ ಹೋಗುವ ನೋಡೀ ಮಾತನ್ನಾ ೩

ನಾವೇನು ಬಲ್ಲೆವಮ್ಮಾ ಈ ಗತಿಯೂ ಆಗಿ ।
ನೋವು ತೋರುವದು ನಮ್ಮ ವಿಧಿಯೂ ॥
ಶ್ರೀ ವಲ್ಲಭನ ಕಾಣದೇಯೆದೆಯು ನಿಲ್ಲ- ।
ದೀವೂರೊಳು ಬೀಳುವೊನೆಂತುರಿಯೂ ೪

ನದಿಯೊಳು ಮಳಲಲಿ ಕೆರೆಯ ಕಟ್ಟಿ ।
ಚದುರ ಕೃಷ್ಣನು ನಮ್ಮ ತ್ವರಿಯಾ ॥
ಉದಕದೊಳದ್ದಿ ಅಪ್ಪಿಯೆದೆಯಾ ಪಿಡಿ- ।
ವುದು ಎಂತು ಮರೆವೆನೀ ನುಡಿಯ ೫

ಒಂದು ಮಾತು ಹೇಳಲೇನೆ ಜಲದಾ ಮಧ್ಯೆ ।
ನಿಂದು ಆಡುತೀರೆ ಭಕ್ತಾವರದ ॥
ಬಂದು ಸೀರೆ ಕೊಂಡು ಮರ ಚೆಗಿದ ಇದು ।
ಎಂದೆಂದಿಗೆರವಾಯಿತು ನೋಡಿದ್ಯಾ ೬

ತಾ ಕೊಳಲು ಸೊಗಸಿಲಿಂದೂದುವ ಧ್ವನಿಯಾ ।
ಕೇಳಿ ತತ್ತರಿಸಿ ಹೋದೆವವ್ವ ॥
ಯಾಕೆಂದು ನಮ್ಮವರೆಲ್ಲ ಕೇಳುವ ದಾನು ।
ನೂಕಿ ಘಾಸಣಿಗೆ ತಾರಲಿಲ್ಲವ್ವ ೭

ಎಲ್ಲಿಗಿಕ್ಕಿವಾಲಂಕಾರವೆಲ್ಲಿಗೆ ಯಿಕ್ಕಿ ।
ಪಿಲ್ಲಿವಣುಮೆಂಟುಗಳು ಹಾಲಿಗೆ ॥
ಮಲ್ಲಿಗೆ ಮಾಲಿಕೆಗಳು ಕಟಿಗೆ ಸುತ್ತಿ ।
ವಲ್ಲಭರೆಳ ತಂದೆವೇ ಬೀದಿಗೆ ೮

ಸುಳ್ಳೋ ಸತ್ಯವೋ ಕೃಷ್ಣ ಪೋಗುವುದು ನೀವು ।
ಇಲ್ಲದ ಮಾತ್ಯಾಕೆ ಕಲ್ಪಿಸುವದು ॥
ಬಲ್ಲವಳೊಬ್ಬಳು ಹೋಗಿ ಕೇಳುವದು ಬೇಡ ।
ನಿಲ್ಲೆಂದು ಬಿನ್ನಹವ ಮಾಡುವದು ೯

ಹೋದರೇನು ಚಿಂತೆ ಮತ್ತೆ ಬಾಹುವ ಸ್ವಲ್ಪ ।
ಶೋಧಿಸಿ ಒಂದೆಂಟು ದಿನ ನೋಡುವ ॥
ಮಾಧವನು ನಮ್ಮನೆಲ್ಲಿ ಮರೆವ ಬಾರ- ।
ದಾದ ಕಾಲಕ್ಕೆ ನಾವೇವೆ ಹೋಗುವ ೧೦

ಹುಚ್ಚಿ ಈ ಮಾತು ನೀ ಏನು ಆಡಿದೆ ನಮ್ಮ ।
ಅಚ್ಯುತನ ಕಾಣಲಲ್ಲಿ ಬಿಡದೆ ॥
ಮೆಚ್ಚಿಸುವರು ನಾರೇರು ಕೊಡದೆ ಹೇಳ- ।
ಲಿಚ್ಛೆಯೊಳಾದ ಮೇಲೆ ಇಲ್ಲೇನದೆ ೧೧

ಅಂಥಾ ನೀತಿವಂತ ಬಿಟ್ಟ ಬಾಹೊನೆ ಇವ ।
ಎಂಥವನೆಂಬುವದ ಅರಿವೇನೆ ॥
ಸಂತತ ಮನಸ್ಯಾರಡುಳ್ಳವನೇ ಅವ- ।
ನಂತೆ ಇದ್ದೀವೆಂತೆ ಎಮ್ಮೊಳಿಹನೆ ೧೨

ಈಸೊಂದು ಮಾತುಗಳ್ಯೆತಕ್ಕಾಡುವ ಕೃಷ್ಣ ।
ಘಾಸಿ ಮಾಡಬೇಡವೆಂದು ಸಾರುವ ॥
ಮೀಸಲ ಪಾದಕಂಜಕೆರಗುವ ಶ್ರೀ ಪ್ರಾ- ।
ಣೇಶ ವಿಠಲ ಹೋಗದೆಯಿರುವ ೧೩

## ೬೪




ಚಿತ್ತಜನಪಿತನೆ ಯಮ್ಮ ಬಿಟ್ಟು ನೀ ।
ಎತ್ತ ಹೋಗಲಿ ಬೇಡವೋ ಪ

ಬಾಲತನದಿಂದೇ ನಾವು ಶ್ರೀಶ ಗೋ- ।
ಪಾಲ ನಿನ್ನ ಹೊಂದಿದವರೋ ॥
ನೀಲವರ್ಣನೆ ನಿನ್ನೊಳು ಒಂದಿನಕೆ ।
ಕೀಳು ನುಡಿಯಾಡಿದ್ದವೇ ೧

ಯಾಕೆ ಒಮ್ಮಿಂದವಮ್ಮೆ ಶ್ರೀ ಕೃಷ್ಣ ।
ಗೋಕುಲವ ಬಿಡುವೆ ಹೇಳೋ ॥
ಶೋಕ ರಹಿತನೆ ಮುರಾರೆ ಇಂದಿಗೆ ।
ಸಾಕಲಾರಿಯ ನಮ್ಮನು ೨

ಗಂಡರುಳ್ಳವರೆಲ್ಲರೂ ಮನಸು ಎಳ- ।
ಕೊಂಡಾಗ ಮೈ ಮರಸಿದೀ ॥
ಭಂಡೀಗ ಮಾಡಿ ನೀನು ಪೋಗೆ ಜನ ।
ಕಂಡು ನಗರೇನೋ ನಮಗೆ ೩

ನಿನ್ನ ಸ್ನೇಹ ಬೇಕು ಎಂದು ಅತ್ತೆ ಗಂ- ।
ಡನ್ನ ಬಹಳ ವಂಚಿಸಿದೆವ್ಯೊ ॥
ಮನಸಿಗರಿಕಿಲ್ಲವೇನೋ ಬಹು ಉತ್ತ- ।
ಮನೊ ನೀನು ಸೈಸೈಯೆಲಾ ೪

ತುಪ್ಪವನು ನೆಲವಿಲಿಂದ ಇಳಿಸುವಾ- ।
ಗಪ್ಪಿ ನೀ ಒದೆಯ ಹರಿವಿ ॥
ಸಪ್ಪಳ ಕೇಳಿ ಅತ್ತಿ ಘೂಗಲು ।
ತಪ್ಪಿ ಕೈ ಜಾರಿತಂದೇ ೫

ಹಾಲ ಹರಿವೆಯನು ಎತ್ತಿ ಅಟ್ಟದ ।
ಮೇಲೆ ನಾ ಇಡಲು ನೀನು ॥
ಶಾಲಿ ಹಾರಿಸಿ ಕೆಡಹಿದೀ ಬೇಡೆಂದು ಬ- ।
ಹಳ ಗುಲ್ಲೆಬ್ಬಿಸಿದೆನೇ ೬

ಸರುಹೊತ್ತಿನೊಳು ವಂದಿನ ನೀ ಬಂದು ।
ಸೆರಗ ಪಿಡಿದೆಳೆಯ ಯನ್ನ ॥
ಹಿರಿಯರಿದು ಏನು ಎನಲು ಆಕಳಾಕಳಾ- ।
ಕರುವೆಂದು ಮಾಜಲಿಲ್ಲೇ ೭

ಈಸೊಂದು ಮಾತ್ಯಾತಕೆ ಆಡುವಿರಿ ।
ಬೇಸರವೆ ನಮ್ಮ ನಿಮ್ಮೊಳು ॥
ಕಂಸ ಕರಸಿಹ ಹಬ್ಬಕೆ ಪೋಗದಿರೆ ।
ಹಿಂಸಿ ಮಾಳ್ಪನು ನಮ್ಮನು ೮

ನಾ ಹೋಗಿ ತಡಮಾಡದೇ ಸಂಗಡಲೇ ।
ಬಾಹುದಿನ್ಯು ನಿಮ್ಮನಗಲಿ ॥
ಇಹೆನೇನಾವೂರೊಳು ತಿಳಿಯದೇ- ।
ನು ಹಲವು ಚಿಂತೆ ಬ್ಯಾಡೀ ೯

ನಾರಿಯರು ಇವರಿಗೇನೂ ತಿಳಿಯದೆಂ-
ತೋರಿಸುವೆಯುಪಚಾರವ ॥
ಜಾರೆಯರು ಬಹಳವಲ್ಲಿ ನಿನ ಕಂಡು ।
ದಾರಿ ಕೊಡುವರೇ ಇತ್ತಲಿ ೧೦

ಜನನೀ ಜನಕನು ಮಾತುಳ ಮಗುವೆಂದು ।
ಘನ ಸುಖ ಬಡಿಪರಲ್ಲಿ ॥
ಇನಿತಾದ ಮೇಲೆ ಬರುವ್ಯಾ ಸುರವಂದ್ಯ ।
ಇನ ಕೋಟಿ ಸುಪ್ರಕಾಶ ೧೧

ಇಲ್ಲಿ ನಿನ್ನ ಬಿಟ್ಟು ನಾವು ಅರಗಳಿಗೆ ।
ನಿಲ್ಲಲಾರೆವ್ಯೋ ಅಚ್ಯುತ ॥
ಅಲ್ಲಿಗೆಲ್ಲರು ಬರುವೆವೋ ಬಿಡುವುದು ।
ಚಿತಲ್ಲವೊಂದಾಣೆ ನಿನಗೆ ೧೨

ಯನ ಕೂಡ ಬರಲು ನಿಮ್ಮ ಗಂಡ ಮೈ- ।
ದುನರು ಸುಮ್ಮನೆ ಇರುವರೇ ॥
ನಿನ್ನ ಸಂಗವಾದಾರಭ್ಯ ಅವರು ನ- ।
ಮ್ಮನು ಹೆಸರುಗೊಳದಲಿಹರೋ ೧೩

ಈ ಮಾತುಗಳು ಸಲ್ಲವು ಇನಿತ್ಯಾಕೆ ।
ಕಾಮ ಕಮಲಜರ ಆಣೆ ॥
ನಾ ಮರಳಿ ಬಾರದಿರಲು ಅತ್ಯಂತ ।
ಪ್ರೇಮ ನಿಮ್ಮೊಳು ನಿಲ್ವೆನೇ ೧೪

ಸೃಷ್ಟಿಸಿ ಪೊರೆದು ಜಗವನು ಮರಳೆ ಅದ- ।
ನಷ್ಟೂ ಸಂಹರ ಮಾಡುತ ॥
ತುಷ್ಟಿ ಬಡುವೆಲೊ ಬಕಾರಿ ಈಗ ನೀ- ।
ನಿಟ್ಟುಕೊಂಡಾಣೆ ನಿಜವೋ ೧೫

ಪಾದಸೇವಕರೋ ನಾವು ಇನ್ನೊಂದು ।
ಭೇದ ಬೆರಸಲಿ ಬೇಡವೋ ।
ಶ್ರೀದ ಪ್ರಾಣೇಶ ವಿಠಲ ಕೈಯ ಬಿಡ- ।
ದಾದರದಿ ಎಮ್ಮ ಸಲಹೋ ೧೬

## ೬೫

ಹೀಗೇವೇ ಪ್ರೀತಿ ಹೀಗೇವೇ ॥
ಆಗ ಬಹು ಬಗೆಯಲಿ ಒಲಿಸಿ ।
ಈಗೆಲ್ಲರನು ಜರಿದು ಪೋಪೆ ಪ

ಚಕ್ರಿಯಮ್ಮ ಕೂಡಿಹ್ಯದಕೆ ।
ವಕ್ರನಾಗಿ ಅಗಲಿಸಿವೊಯ್ವ ॥
ಶುಕ್ರ ಶಿಷ್ಯ ದಿಟವೋ ಇವನ ।
ಅಕ್ರೂರನೆಂದು ನಂಬಿದಲ್ಲೋ ೧

ಧನ, ಮನೆ, ಪತಿ, ಸುತರ ಬಿಟ್ಟು ।
ಮನಸು ನಿನ್ನ ಪದದಲಿಟ್ಟು ॥
ಕ್ಷಣವಗಲದ ಸುದತಿಯರೊಳು ।
ಘನತೆ ಬಹಳ ಕಂಡಿ ಕಂಡಿ ೨

ಒಲ್ಲೆನೆಂದರೆ ಪೋಪನವನು ।
ಸೊಲ್ಲಿಸದಲೆ ನಡೆದೆಯಲ್ಲೊ ॥
ಅಲ್ಲಿಹ ಸ್ತ್ರೀಯರ ಮಾಟವೇನೋ ।
ಬಲ್ಲೆವೆ ಇದು ಪ್ರಾಣೇಶ ವಿಠಲ ೩

## ೬೬

ಪಾಹಿ ಕೃಷ್ಣಾ ನಮ್ಮನ್ನೀವೂರೊಳಗೆ ಬಿಟ್ಟು ।
ನೀ ಹೋಗದಿರು ಕಂಡ್ಯಾ ಮಧುರೆಗೆ । ಪಾಹಿ ಕೃಷ್ಣ ರಮಾಪತಿ ಪ

ಬಾಲತನದಲಿಂದ ನಿನ್ನ ಹೊಂದಿದ್ದೆವೊ ।
ಕೀಳ ನುಡಿಗಳೊಂದಾಡಿದ್ದೇವೇ । ಪಾಹಿ ॥

ತಾಳಲಾರೆವೋ ಕಾಮನಟ್ಟುಳಿ ನೀ ಹೋದ ।
ಮೇಲೆ ದಯವ ಮಾಡಿ ನಿಲ್ಪದೊ । ಪಾಹಿ ೧

ಏನು ಕಾರಣವುಂಟು ಪೋಗಲಿಕ್ಕಲ್ಲಿಗೆ ।
ಶ್ರೀನಿವಾಸನೆ ಹೇಳೋ ಮಾಜದೇ । ಪಾಹಿ ॥
ದಾನವಾಂತಕ ನಿಮ್ಮ ತಂದೆ ತಾಯಿಯಣ್ಣ ।
ಹೀನ ಮಾತುಗಳು ಆಡಿದರೇನೋ । ಪಾಹಿ ೨

ಆಕಳ ಕಾಯ್ವದು ಬೇಸರವಾಯಿತೊ ।
ಸಾಕಲಾರೆಯೋ ನಮ್ಮನೆಲ್ಲರೊ । ಪಾಹಿ ॥
ಗೋಕುಲದೊಳು ಪರ ರಾಯರಂಜಿಕೆಯಿಲ್ಲ ।
ಯಾಕೆ ಇಲ್ಲಿಂದ ನೀ ತೆರಳುವೀ । ಪಾಹಿ ೩

ಜಾರತನವ ಮಾಡುತಿಹನು ಕೇಶವನೆಂದು ।
ದೂರುವರಾರೋ ಈ ಪುರದೊಳು । ಪಾಹಿ ॥
ತೋರು ಅವರ ಈ ಕ್ಷಣಕೆ ಪೋಗಿ ಗಂಟಲಿ– ।
ಗ್ಹಾಂ ಕಲಹ ಮಾಡಿ ಬರುವೆವೋ ೪

ನಮ್ಮ ಮನೆಯೊಳು ಪಾಲು ಬೆಣ್ಣೆಯ ಕದಿಯಲು ।
ನಮ್ಮೊಮ್ಮನಲ್ಲಿ ದೂರಿದೆವೇನೋ । ಪಾಹಿ ॥
ಸುಮ್ಮನೊಂದಿವಸ ಪೇಳಿದ್ದೆವೊ ಇಲ್ಲವೋ ।
ಯಮ್ಮಪರಾಧ ಕ್ಷಮೆಯ ಮಾಡೊ । ಪಾಹಿ ೫

ನಿನ್ನ ಸಂಗವ ಮಾಡಿ ದಿವ್ಯ ವಸನ ವಸ್ತ– ।
ವನ್ನು ಅಪೇಕ್ಷ ಮಾಡಿದೆವೇನೋ । ಪಾಹಿ ॥
ಹೆಣ್ಣು ಕುಲವು ಪುರುಷರ ಕಾಡುತಿಹರಂತೆ ।
ಅನಂತ ನಾವು ಅಂಥವರಲ್ಲೋ । ಪಾಹಿ ೬

ಜಗದೀಶ ನಿನ್ನಲ್ಲಿ ಮನವಿಟ್ಟು ಮನೆಯಲ್ಲಿ ।
ಮಗುವುಗಳಳುತಿರೆ ಕರೆಯೆವೊ । ಪಾಹಿ ॥

ಒಗತನವನು ಬಿಟ್ಟು ಗಂಡರಿಗಂಜದೆ ।
ನಗಲು ಜನರು ನಾಚದಿದ್ದೆವೊ । ಪಾಹಿ ೭

ಚಿತ್ತಜ ಜನಕನ ಸಂಪಾದಿಸಿದರೆಂದು ।
ಅತ್ತೆ ಅತ್ತಿಗೆ ಯಮ್ಮ ಬೈಯ್ಯರೋ । ಪಾಹಿ ॥
ಹೆತ್ತವರೂರಿಗೆ ಹೋದವೀ ಸುದ್ದಿಯು ।
ಉತ್ತಮತನೆ ಹೀಗೆ ಕೆಡಿಸೋದು । ಪಾಹಿ ೮

ಆರಂದು ಏನು ಮಾಡುವರು ಎಮಗೆ ಬಲ- ।
ಮಾರಮಣನೆ ಹಾನೆ ಎಂಬುವ್ಯೊ । ಪಾಹಿ ॥
ನೀರಜಾಂಬಕ ಈಗ ನೀ ಬಿಟ್ಟು ಪೋಗಲು ।
ಮೋರೆದೋರುವದ್ಯಾಂಗ ಜನರಿಗೆ । ಪಾಹಿ ೯

ಆಳುವ ಪುರುಷರು ಯಮ್ಮ ಗುಣವ ಕಂಡು ।
ಕಾಲಿಗೆ ನೀರನೇ ಕೊಳ್ಳರೋ । ಪಾಹಿ ॥
ನೀಲ ಮೇಘಶ್ಯಾಮನ ಕರುಣವೇ ಸಾಕು ।
ಕೇಳೆವು ನಿಮ್ಮ ಸಿಟ್ಟು ಎಂಬೆವೊ । ಪಾಹಿ ೧೦

ಹಾಸಿಕಿಯಲಿ ಮಲಗಲು ನಿದ್ರಿ ಬಾರದು ।
ಶ್ರೀಶ ನಿನ್ನನ್ನೇ ನೆನೆಸುತಿಹೆವೊ । ಪಾಹಿ ॥
ವಾಸುಕಿಶಯನ ಹೋಗಬೇಕಾದರೆ ನಮ್ಮ ।
ದೋಷವುಡಿಗೇಗಟ್ಟಿ ನೀ ನಡಿ । ಪಾಹಿ ೧೧

ವನದೊಳಗಂದು ನೀ ಕೊಳಲನೂದಲು ಕೇಳಿ ।
ತನುವ ಮರೆದು ಓಡಿ ಬಂದೆವೋ । ಪಾಹಿ ॥
ವನಿತೆಯರೆಲ್ಲ ಸೀರೆಗಳ ತಲೆಗೆ ಸುತ್ತಿ ।
ಮಣಿ ಹಾರಾವಳಿಯ ಕಾಲಿಗೆ ಕಟ್ಟಿ । ಪಾಹಿ ೧೨

ಎಣ್ಣೆಯ ಹಚ್ಚಿಕೊಂಡವರು ಉಂಬುವರೆಲ್ಲ ।
ಉಣ್ಣದೆಂಜಲಗೈಲೆ ಎದ್ದೆವೋ । ಪಾಹಿ ॥

ಸಣ್ಣವರೆಂದು ವತ್ಸಗಳನೆತ್ತಿದೆವೋ ಪ್ರ- ।
ಪನ್ನವತ್ಸಲ ನಗೆಗೇಡಿದು । ಪಾಹಿ ೧೩

ಶೋಕನಾಶನ ಇಲ್ಲೇ ಇದ್ದರೆ ಈ ಮಾತು ।
ಯಾಕೆ ನೆನಿಸಿಕೊಂಡು ಬಳಲೆವೊ । ಪಾಹಿ ॥
ಬೇಕು ಇಂದಿರೆಯರಸನ ಸ್ನೇಹ ಯಮಗೆಂದು ।
ಕಾಕುಲಾತಿಯಲಿ ಮಾಡಿದೆವೆಲ್ಲೊ । ಪಾಹಿ ೧೪

ಎಂದಿಗಾದರು ನಮ್ಮ ಕರವ ಬಿಟ್ಟಗಲ ಗೋ- ।
ವಿಂದನೆಂದರಿದಿದ್ದೆವನಿರುದ್ಧಾ । ಪಾಹಿ ॥
ಸಿಂಧು ಬತ್ತಲು ಜಲ ಜಂತು ಬಳಲುವಂತೆ ।
ಇಂದಿಗೆಮಗೆ ತೋರುತಿಹದೋ । ಪಾಹಿ ೧೫

ಎಲ್ಲಿಂದ ಬಂದನು ಅಕ್ರೂರನೆಂಬುವ ।
ಫುಲ್ಲನಾಭನೆ ನಿನ್ನ ಕರೆಯಲು । ಪಾಹಿ ॥
ಇಲ್ಲಿಂತು ಸ್ತ್ರೀಯರ ಬಿಟ್ಟು ಬಾಹುವದೆಂತು ।
ಅಲ್ಲಿಗೆಂದಿವನು ತಿಳಿಯಲಿಲ್ಲೇ । ಪಾಹಿ ೧೬

ಕ್ರೂರನೇ ಸರಿ ಈ ಮ್ಯಾಲಿನಾಮವಿವನಿಗೆ ।
ಆರು ಕೊಟ್ಟರೋ ಕಾಣ್ಯೊ ತಿಳಿಯದೂ । ಪಾಹಿ ॥
ನಾರಾಯಣನೆ ಅಪ್ಪಣೆಯ ಕೊಡು ಪೋಗಲಿ ।
ದಾರಿ ಹಿಡದು ತಮ್ಮ ಊರಿಗೆ । ಪಾಹಿ ೧೭

ಒಂದು ದಿವಸ ನಕ್ಕು ನಡಿದವರಿಳೆಯೊಳು ।
ಇಂದು ಮುಖಿಯರ ಜರಿವದಿಲ್ಲ । ಪಾಹಿ ॥
ಮಂದರಧರ ಬಹುಕಾಲ ನಿನ್ನಯ ಪಾದ ।
ಹೊಂದಿಕೊಂಡವರೋ ಮರೆಯಬೇಡೋ । ಪಾಹಿ ೧೮

ಮಧುರಾಪುರಕೆ ಹೋದ ಬಳಿಕ ಬಾಹುವದೆಂತು ।
ಚದುರ ಸ್ತ್ರೀಯರು ಅಲ್ಲಿ ಬಹುಮಂದಿ । ಪಾಹಿ ॥

ಮದನ ಬಾಣದಲಿ ಜರ್ಝರಿತರಾಗುತ ನಿನ್ನ ।
ಬದಿಯಲ್ಲಿ ಬಂದು ರಮಿಸುವರೋ । ಪಾಹಿ ೧೯

ಪರಿಮಳ ವಸ್ತ್ರವನೇಕ ಭೂಷಣದಿಂದ ।
ಪರಮಾತ್ಮ ನಿನ್ನಾರಾಧಿಸುವರೋ । ಪಾಹಿ ॥
ಸುರನದೀ ಪಿತನೆ ಆ ಸುಖದ ಸಾಗರದೊಳು ।
ಪರವೆ ಗೊಲ್ಲರ ಹೆಂಗಸರದೆಲ್ಲ । ಪಾಹಿ ೨೦

ಚಿಂತೆ ಬೇಡಿರಿ ಬರುತಿಹೆನೆಂದು ಹೇಳೆಯೊ ।
ಇಂತಿದ್ದ ಬಳಿಕ ನೀ ಬಾಹುವ್ಯಾ । ಪಾಹಿ ॥
ಎಂತೆಂತು ಶೃಂಗಾರ ಮಾಡಿ ತೋರಿಸುವರೊ ।
ಅಂಥ ಜಾಣೆಯರು ಇಲ್ಲಾರುಂಟು । ಪಾಹಿ ೨೧

ನಂಬಿದವರ ಭ್ರಷ್ಟ ಮಾಡುವುದುಚಿತವೆ ।
ಅಂಬುಧಿ ಶಯನ ಅಧೋಕ್ಷಜಾ । ಪಾಹಿ ॥
ಕಂಭದಿಂದುದ್ಭವಿಸಿದ ನರಹರಿ ನಿನ್ನ ।
ಹಂಬಲದಲಿ ಹೊತ್ತು ಹೋಗದೊ । ಪಾಹಿ ೨೨

ಧರೆಯೊಳು ಸಣ್ಣ ದೊರೆತನ ಮಾಡುವರು ದೀ- ।
ನರ ಪೋಷಣೆಯ ಮಾಡುತಿಹರಲ್ಲೊ । ಪಾಹಿ ॥
ಸುರವಂದ್ಯ ಈರೇಳು ಭುವನವಾಳುವುದ್ಯಾಕೊ ।
ಮೊರೆಯಿಡುವರನ ರಕ್ಷಿಸದಲೆ । ಪಾಹಿ ೨೩

ಬದುಕುವದೆಂತು ನೀ ಪೋದ ಬಳಿಕ ಇಲ್ಲೀ ।
ಸುದತಿಯರೆಂದು ತಿಳಿಯದೇನೋ । ಪಾಹಿ ॥
ಮಧುರಿಪು ಕರುಣಾಸಾಗರನೆಂದು ಬಹುವೇದ- ।
ವೊದರುತಿಹ್ಯವು ಸತ್ಯವಲ್ಲೇನೋ । ಪಾಹಿ ೨೪

ನೊಣವೊರಸಲು ಪಾಪ ಹೊಂದಿಕೊಂಡಗಣಿತಂ- ।
ಗನಿಯರ ಕೊಂದರೆ ಒಳಿತೇನೋ । ಪಾಹಿ ॥

ದಿನಕರ ಶತತೇಜ ನಿನ್ನಗಲಿದ ಮೇಲೆ ।
ಕ್ಷಣ ಜೀವಿಸರೆಂದು ತಿಳಿದಿದ್ದಾ । ಪಾಹಿ ೨೫

ಠಕ್ಕು ಭಕ್ತಿಯ ಮಾಡುತಿದ್ದವೆ ನಿನ್ನೊಳು ।
ರಕ್ಕಸ ರಿಪು ಮನಸರಿಯೆನೋ । ಪಾಹಿ ॥
ಇಕ್ಕೊಳ್ಳೊ ಈ ದೇಹ ನಿನಗೇ ಒಪ್ಪಿತೊ ದೇವ ।
ಮಕ್ಕಳಾಣೆಯಾ ಎರವಿಲ್ಲವೋ । ಪಾಹಿ ೨೬

ವಾಸುದೇವನೆ ಹೀಗೆ ಮುಖಭಂಗ ಮಾಡೊದು ।
ಏಸು ಜನ್ಮದ ಹರಕೆಯು ಯಿತ್ತೋ । ಪಾಹಿ ॥
ಲೇಸು ಮೊದಲಿಗೆ ಸ್ನೇಹವ ಮಾಡದಿದ್ದರಾ– ।
ಭಾಸಕಂಜೆಲೋ ನಂದನಂದನ । ಪಾಹಿ ೨೭

ಕೂಳು ಹುಟ್ಟದೆ ಹೋಗಿ ನಿನ್ನ ಸೇರಿದೆವೇ ಗೋ– ।
ಪಾಲ ಅಂದಿಷ್ಟು ಬೆಳ್ಳಿಸುವೆಲ್ಲೊ । ಪಾಹಿ ॥
ಆಲಯದೊಳಗಿರೆ ಬೀದಿಯಾಳ್ ಬರುತಿರೆ
ವಾಲಯ ಬೆನ್ ಬಿಡದಿರುವೆಲ್ಲೊ । ಪಾಹಿ ೨೮

ಈಸೊಂದು ಮಾತುಗಳ್ಯಾತಕಾಡುವ ಶ್ರೀಪ್ರಾ– ।
ಣೇಶ ವಿಠಲ ಕೃಪಾಸಾಗರ । ಪಾಹಿ ॥
ದಾಸರೊ ಎಮ್ಮನುದಾಸೀನ ಮಾಡದೆ ।
ದೋಷರಹಿತ ಪೈಣ ನಿಲ್ಲಿಸೋ । ಪಾಹಿ ೨೯

## ೬೭

ಇಲ್ಲೇ ಇದ್ದೇನೆಂದು ತಿಳದಿರಲಿ ನಾ ।
ಎಲ್ಲಿಗೆ ಹೋದರದಲ್ಲ ಬಯಲ ಮಾತೆ ಪ

ಸಿರಿಯಿಂದಲತಿಶಯ ಬೆರೆದಿಹೆ ನಿಮ್ಮೊಳು ।
ಎರವಿಲ್ಲ ಲೇಶ ತಸ್ಮರನಾಣೆ ನಾ ೧

ಮಧುರಾ ಪಟ್ಟಣದೊಳು ಚದುರೆರಿದ್ದರವರ ।
ಬದಿಯಲ್ಲಿ ಹೋದರೆ ವಿಧಿಯಾಣೆ ನಾ ೨

ಇಂದುಮುಖಿಯರೆ ನಿಮ್ಮಂದವ ಕೆಡಿಸಿ ನಾ ।
ತಂದೆ ತಾಯಿಗಳನು ಹೊಂದಿಹೆನೇ ನಾ ೩

ನಂಬಿದವರ ಮನದ ಹಂಬಲರಿಂಯೆ ದಯ ।
ಅಂಬುಧಿ ಹರಿ ಎನಗಂಬುವರೆ ನಾ ೪

ಕ್ರೂರನ ಕಾಟಕೆ ಆರಾದೆ ಪೋಗುವೆ ।
ಗಾರಾಗ ಬೇಡಿರೆ ನಾರಿಯರೇ ನಾ ೫

ಬಿಟ್ಟರೆ ನಿಮ್ಮನು ಹುಟ್ಟೊ ಜನ್ಮಕೆ ಗೇಣು ।
ಬಟ್ಟೆಯೆಂಬುದೆನಘುಟ್ಟಬೇಡ ನಾ ೬

ತನು ಮನಿ ಸುತ ಪತಿಯನು ಬಿಟ್ಟು ಯನ್ನಲ್ಲಿ ।
ಘನ ಸ್ನೇಹವೆಂಬದೀ ಮನಕಿಲ್ಲೇ ನಾ ೭

ತ್ವರಿತೆನ್ನ ನಿಮ್ಮಲ್ಲೆರ ಗಾದೆಯಿದ್ದರೆ ।
ತರುಣೆರೆ ನಿಮ್ಮನಸೆರಗುವದೆ ನಾ ೮

ಮಾನಿನೀಯರೆ ನಿಮ್ಮ ನಾನಗಲಿದರೆ ।
ಪ್ರಾಣೇಶ ವಿಠಲನೆಂಬೀ ನಾಮ್ಯಾಕೆ ನಾ ೯

## ೬೮

ಹೆಂಡತಿಕಿಂತೆಮ್ಮ ಹೆಚ್ಚು ನೋಡಿದೆನೆಂದು ।
ಕಂಡಂತೆಯಾಡಿದ್ದೆಲ್ಲೊ ॥

ಪುಂಡರೀಕಾಕ್ಷ ಒಂದಾಣೆಲ ನಿನಗೆ ಇ- ।
ತ್ತಂಡ ವಿಚಾರ ಮಾಡೋ ಮಾತಾಡೋ ಪ

ಅಧಮರು ಸೇವಿಸಿ ಬದುಕುವೆವೆಂದರೆ ಪಾದ ।
ಪದುಮವು ದೊರಕವಲ್ಲೊ ॥
ಉದಧಿಜೆ ಸ್ವಲ್ಪ ನಡೆದರೆ ಸೋಲುವಳೆಂದು ।
ಎದೆಯಲ್ಲಿ ಪೊತ್ತೆಯಲ್ಲೊ - ಒಂದಲ್ಲೋ ೧

ಕಳೆಯಗುಂದಿಸಿದ್ಯೊ ತೆರಳುವೆ ಮಧುರೆಗೆಂದು ।
ಜಲಪಾನ ತೋರಿಸಿದ್ಯೆಲ್ಲೋ ॥
ಚಲುವಿಕೆ ಪ್ರಾಯ ಶ್ರೀಲಲನೆಗಿಹ್ಯದಕೆ ಮ- ।
ಕ್ಕಳ ನೀನೇ ಪಡೆದೆಯಲ್ಲೊ - ಸುಳ್ಳಲ್ಲೋ ೨

ಗಂಡೊಲ್ಲದವಳನ ಗುಂಡೊಲ್ಲದಂತೆ ಭೂ ।
ಮಂಡಲದೊಳಗೀ ಪರಿ ॥
ಭಂಡು ನೀ ಮಾಡಲು ಕಂಡರೆ ನಮ್ಮನು ।
ಪಂಡಿತ ಪಾಮರರೂ ನಗುವರು ೩

ಹಲವು ಬಗೆಯಲಿ ನೀ ಒಲಿದ ಕಾರಣದಿಂದ ।
ಬಲು ಭಕುತಿಯಲಿ ನಿತ್ಯಾ ॥
ತಿಲಮಾತ್ರ ಬಿಡದೆ ಕಮಲೆಪಾದ ವಿಧಿ ಶಿವ ।
ಕುಲಿಶಧರಾಮರರೂ ಸೇವಿಪರು ೪

ನೀನಗಲಿದರೆ ಇನ್ನೇನು ನಿರ್ಭಾಗ್ಯರು ।
ದೀನಾರು ಎಮಗಾವೀಗೆ ॥
ಎಣಿಸೀ ನೋಡಲು ಕಾಣೆವ್ಯೋ ಸಮಸುಖ ।
ಪ್ರಾಣೇಶ ವಿಠಲ ಕೇಳು ದಯಾಳು ೫

೬೯

ಪಾಲಿಸಿರಪ್ಪಣೆ ಮಧುರಿಗೀಗಲು ।
ತಿಲಾಂಶ ಚಿಂತಿಸಬೇಡಿರೆಲೆ ಪ

ನಾರಿಯರೆ ನಾನೆಲ್ಲಿ ಪೋಗುವೆ ಕೋಮಲ ।
ಮೋರಿಯ ಬಾಡಿಸಬೇಡಿರೆಲೆ ೧

ಯಾತರಗೋಸುಗ ಖಿನ್ನರಾಗುವಿರೆನ್ನ ।
ಮಾತು ಮನಸೀಗೆ ತನ್ನಿರೆಲೆ ೨

ಕಂಧರ ಉಬ್ಬಿ ದ್ವಯ ಕಂಗಳುದಕವೊತ್ತಿ ।
ಮಂದಮತಿಗಳ್ಯಾಕಾದಿರೆಲೆ ೩

ದೊಡ್ಡ ಕಾರ್ಯಕ್ಕೆ ಹೋಗುವೆನೀಗ ಈ ಪರಿ ।
ಅಡ್ಡಾಗಬಾರದು ಕೇಳಿರೆಲೆ ೪

ಬಲುದೂರ ಬಂದರೆ ಜವ ಬಾಹೋಣಾಗದು ।
ತಿಳಿದು ಮನೆಗೆ ದಯ ಮಾಡಿರೆಲೆ ೫

ತ್ವರದಿಂದ ವೈರಿಯ ಗೆಲಿದಿಲ್ಲಿ ಬಹದೆಂದು ।
ತಿಳಿದು ಮನೆಗೆ ದಯ ಮಾಡಿರೆಲೆ ೬

ಪ್ರಾಣೇಶ ವಿಠಲನೆಂದಾಕ್ಷಣ ತಡಿಯದೆ ।
ನಾ ನಿಮ್ಮಲಿಹನೆಂದು ತಿಳಿಯಿರೆಲೆ ೭

## ೭೦

ಏನೂ ಧೇನಿಸಿದ್ದೇನಕ್ಕಾ । ನಾ ನನ್ನ ಮನದೊಳೀಗಾ ।
ಮಾನಿನಿ ತಿಳಿದು ಪೇಳೆಲೆ ಹೀಗಾದರೀಕೊ ।
ಜಾಣೇ ನೀನೆಯ ಅಹುದೆಲೆ ಪ

ಅಂಬುಜಾಕ್ಷಿ ಕೇಳಿದ್ಯಾ ಪೀ- ।
ತಾಂಬರಾ ಬಂದಾನೆ ಎಂಬೋ ॥
ಹಂಬಾಲಲ್ಲಾದೆ ಬ್ಯಾರ್‍ಯಂಟನೇ ತೋರುವದಿಂತು ।
ಜಂಭಾದ ಮಾತಲ್ಲೆ ಸುಳ್ಳೇನೇ ೧

ಸತ್ಯ ಹೇಳಿದ್ದಲ್ಲೆ ಎಂಥಾ ।
ಉತ್ತೂಮಳೆ ಬಂದಾನೇನೆ ॥
ಸತ್ಯಾಭಾಮಿರಮಣ ಇಲ್ಲಿಗೇ ನಿಮಿಷಾಯುಗ ।
ಹತ್ತಾಗಿ ತೋರುವದೆಮಗೆ ೨

ಎಲ್ಲಾರಾಪೇಕ್ಷವು ಆವಾ- ।
ನಲ್ಲೇ ಅಂಬೋದಕ್ಕೆ ಅಂದೀ ॥
ನಲ್ಲಾದೆ ನೋಟಾಗಾರ ತೇನೇ ಬಂದಾನೊ ಬರದೆ ।
ಅಲ್ಲೆ ಇಹನೊ ಬಲ್ಲೀನೇನೇ ೩

ಜೋಗಿಣಿ ಮನೆ ತನಕಾ ।
ಹೋಗಿ ಕೇಳುವ ಬಾರೆಲೇ ॥
ನಾಗಾರಿ ವಾಹನ ಬಾಹೋಮಾ ಲಕ್ಷ್ಮೀಶಾನ ವಿ- ।
ಯೋಗಾದಿ ಮನಸೂ ನಿಲ್ಲಾದೂ ೪

ಮಳೆ ನೀರೂ ಬಿಟ್ಟು ಮಂಜು- ।
ಗಳಿಗೆ ಕೈ ವಡ್ಡುವಂತೆ ॥
ನೀಲಾಂಗನ ಬಿಟ್ಟು ಯೋಚನೇ ಮಾಡುವೇನು ।
ಬಾಳೀವ್ಯಾಯಿತೇ ಶೀರವಾಣಿ ೫

ಹೋಗದಾ ಮುಂದೇಯೆ ಪ್ರೀತಿ ।
ನೀಗದ ಮುಂದೆಯೆ ಜೋಕಿ ॥
ಈಗಳಲೀದರೆನಾಪದೇ ತಕ್ಕ ಸಾಧನಾ ।
ನಾಗಗಮನೆವಂದೂ ತೋರದೇ ೬

ವಕ್ರನಾಗೀ ಬಂದೂ ನಮ್ಮಾ ।
ಚಕ್ರೀಯಗಲೀಸಿದನು ॥
ಶುಕ್ರ ಶಿಷ್ಯನೆ ದಿಟವಮ್ಮಾ ತಿಳಿಯದಲೆ ।
ಅಕ್ರೂರನೆಂಬೊರಲ್ಲೆ ಕರ್ಮಾ ೭

ಆನರೀಗಂಬೂವದ್ಯಾಕೆ ।
ಆ ನಾರಿಯರಾ ಮಾಡಿದ್ದೂ ॥
ಗೋಣೂ ಮುರಿದಾರೆ ನಮ್ಮನೂ ಸುಲಭದಿಂದೆ ।
ಶ್ರೀನಿವಾಸಾ ಕೈ ಸೇರಿದನೂ ೮

ತುಂಡಾಕಟ ವೇರಿಗೆ ತಮ್ಮಾ ।
ಗಂಡಸರಿದ್ದಿಲ್ಲವೇನೆ ॥
ಪುಂಡರೀಕಾಕ್ಷನಾ ಬಯಸಲೂ ಇವನು ಅಂಥಾ ।
ಭಂಡಾನೆ ಅಲ್ಲೀಗೆ ಹೋಗಲೂ ೯

ಅನ್ನಾಲಂಕಾರ ಅಂಬರ ।
ವನ್ನು ನಾವೆಂತೂ ಜರಿದೇವೊ ॥
ಘನ್ನ ಘಾತಕೇರು ನಮ್ಮಂತೆ ಆಗಲೇ ಸುಖ ।
ವನ್ನು ಕಾಣಬೇಡವೆ ಕಾಂತೇ ೧೦

ಮೀನಾಕ್ಷೇರಾ ಕೂಡದಂತೆ ।
ತಾನು ಭ್ರಾಂತನಾಗಿ ನಮ್ಮಾ ॥
ಧ್ಯಾನದಿಂಧೋಗಾದೆಯಲ್ಲೀಗೇ ಬಾರೆಲೆ ನಮ್ಮಾ ।
ಪ್ರಾಣೇಶ ವಿಠ್ಠಲನು ಇಲ್ಲಿಗೇ ೧೧

## ೭೧

ತಾಳಲಾರಿನೆ ನೀರೆ ಕರತಾರೆ ಹರಿಯಾ ।
ಕೇಳಿ ಯನ್ನಯ ಮಾತು ನಡಿ ಈಗ ತ್ವರಿಯಾ ॥
ನಾಳೆ ಬಾಹುವೆನೆಂದು ಬಹು ಬಹು ಪರಿಯಾ ।
ಹೇಳೂವ ಬಿಡದಿರು ಮೂಲೋಕ ಧೊರಿಯಾ ಪ

ನಾಕು ಮೊಗನ ಪಿತ ಶ್ರೀದೇವಿ ವರನಾ ।
ನಾಕಾರು ಕಂಧರದಸುರ ಸಂಹರನಾ ॥
ನಾಕು ಹತ್ತು ಭೂವನುಳ್ಳ ಉದರನಾ ।
ನಾಕು ವೇದವ ಮಂದರವನಿ ಉದ್ಧರನಾ ೧

ಕುಸುಮ ಬಾಣನ ವೈರಿ ಶುಕಮುನಿ ಪಿತನಾ ।
ಕುಸುಮ ತಂದವನ, ತಮ್ಮಗೆ ಬಲು ಹಿತನಾ ॥
ಕುಸುಮಲೋಚನ ನಂದಗೋಪನ ಸುತನಾ ।
ಕುಸುಮದ ತರು ಸತಿಗಿತ್ತ ಅಚ್ಯುತನಾ ೨

ನಗ ಮುರಿದೆಮಳರ ಶಾಪ ಕಳದನಾ ।
ನಗ ರಕ್ಷಿಸಿದವಗೆ ಬಹಳೊಲಿದವನಾ ॥
ನಗ ಪೊತ್ತು ಗೋಕುಲ ಉಳಸಿಕೊಂಡವನಾ ।
ನಗ ಶತೃ ಅನುಜ ಪ್ರಾಣೇಶ ವಿಠ್ಠಲನಾ ೩

## ೭೨

ಎಷ್ಟು ಹೇಳಿದರು ರಂಗಾ ।
ಬಿಟ್ಟು ಹೋದಾ ನೋಡಿರೆಮ್ಮಾ ॥
ಮೊಟ್ಟ ಮೊದಲಿಗೇ ತಿಳಿಯಾದೆ ।
ಕೃಷ್ಣನ ಸಂಗ ಮಾಡಿದೇವೆಮ್ಮಾ ಪ

ಅನ್ನಾ ಉದಕಾ ನಡಿಯಾವವ್ವಾ ।
ಕಣ್ಣು ಮುಚ್ಚಾವು ಶಯನಾದೀ ॥
ಬಣ್ಣಾದೊಸ್ತ್ರಾ ಭೂಷಣಗಾ- ।
ಳನ್ನು ದೇಹಾ ಬಯಸಾವವ್ವಾ ೧

ಗಂಧ ಲೇಪನ್ನಾತಕಮ್ಮಾ ।
ಮಂದರಧರನಗಲೀದಾ ॥
ಒಂದು ನಿಮಿಷವು ಯುಗದಂತೆ ।
ಇಂದಿಲಿಂದಾ ತೋರುವದೆಮಗೇ ೨

ಗಂಡರೂ ಬೈದಾರಲ್ಲವ್ವ ।
ಕಂಡವರೇ ನಂಬುವರೋ ॥
ಪುಂಡರೀಕಾಕ್ಷನಾ ನೆಚ್ಚೀ- ।
ಕೊಂಡು ಬೈಲಿಗೆ ಬಿದ್ದೆವಮ್ಮಾ ೩

ಆರೂ ಕಂಡಿದ್ದಾರೊ ಆವಾ ।
ದಾರಿಲೇ ಹೋದಾನೊ ಕೃಷ್ಣಾ ॥
ನಾರೇರು ನಾವೆಲ್ಲರು ಕೂಡೀ ।
ದೂರ ಹುಡುಕಿ ಬಾಹುವನಮ್ಮಾ ೪

ಶ್ರೀಶ ಪ್ರಾಣೇಶ ವಿಠ್ಠಲಾ ।
ಏಸೂ ಗಾವುದವೂ ಹೋದಾರೂ ॥
ಲೇಸೆ ಬೆನ್ನು ಹತ್ತಿ ಹೋಗುವ ।
ದೋಷಾರಹಿತಾ ತಾನೇ ದೊರೆವಾ ೫

## ೭೩

ರಂಗ ಹೋದಾನಲ್ಲೆ ನಮ್ಮ । ನೊಂಚಿಸೀ ಮಾರಗೊಪ್ಪಿಸೀ ।
ಅಂಗನೆ ನಾವೆಂತು ಬದುಕುವಾ ಪ

ಸಖಿ ನಮ್ಮಾ ಹಿರಿಯರೆಷ್ಟೊ ಪುಣ್ಯ ಸಂಪಾದಿಸಿದ್ದಾರೊ ।
ಸುಖಬಟ್ಟೇವೆ ಇಷ್ಟು ದಿಂವಸಾಗಿ ಹೋದನಲ್ಲೆ ॥
ಧಿಕು ನಮ್ಮ ಪಾಪದಿಂದಾ ಶೋಕಬಡುವದು ಸದ್ಯಾ ।
ಲಕುಮೀಶನಗಲಿ ಈಗಾ ೧

ಹಿಂದಿನ ಜನ್ಮದೊಳಾರಾ ಕ್ರೀಡಿ ನಿಗ್ರಹಿಸಿದ್ದೆವೊ ।
ಮಂದರಾದ್ರಿಧರ ಯರವಾದಾ ॥
ಮುಂದೆ ಒಂದುಪಾಯವಿಲ್ಲಾ ಹರಿಯೆಂದಾರನ ಕರವಾ ।
ಮಂದಿಗೆಂತು ಮೊಗದೋರುವಾ ೨

ಅಕ್ಕ ಕೇಳೆ ಅಚ್ಯುತಾನು ನಿಮ್ಮೊಳಗೆಂತು ಇದ್ದಾನೊ ।
ಮಕ್ಕಳಾಣೆನಲ್ಲಿ ಮಾತ್ರಾ ॥
ದಕ್ಕಿದಂತಿದ್ದಾ ನಾನೊಂದಪೇಕ್ಷೆ ಮಾಡಿದವಳಲ್ಲಾ ।
ಠಕ್ಕೂ ಮಾಡಬಹುದೇನೆ ಹೀಗೆ ೩

ತಂಗಿ ಕೇಳಿದ್ಯಾ ನಿನ್ನಂತೆಲ್ಲರಿಗೆ ವಿಶ್ವಾಸವಿತ್ತೂ ।
ಮಂಗಳೇಶಾನಲ್ಲಿ ಪ್ರತಿದಿನಾ ॥
ಲಿಂಗವಿಲ್ಲದಾ ಗುಡಿ ಎಂತಿಲ್ಲೀಹ್ಯದೇನೂ ಹೋಗುವಾ ಕು- ।
ರಂಗಾ ನೇತ್ರಿಯರ್‍ಯಾ ಹುಡುಕುತಾ ೪

ಅಮ್ಮಾ ನಾವು ಮೊದಲೀಗೆ ಅಬಲೀಯರು ।
ಒಮ್ಮಿಂದಾ ವಮ್ಮೆ ಅಲ್ಲಿಗೆಂತೂ ಪೋದೆವೇ ॥
ಸುಮ್ಮನೆ ಸಹವಾಸಕೊಬ್ಬಾ ಪುರುಷಾರಿಲ್ಲಾದೆ ಇದು ।
ಸಮ್ಮತಾವೆ ನಮ್ಮ ಸ್ತೋಮಕ್ಕೇ ೫

ಘಟ್ಟಿ ಎದೀ ನಿನ್ನದವ್ವಾ ಪ್ರಾಣದಾಸೀ ಮಾಡುವದೂ ।
ಕೃಷ್ಣ ಹೋದ ಮ್ಯಾಲೆ ಬಾಳೀವೆ ॥
ಮುಟ್ಟಲರೀಯವು ಹುಲಿ ಸಿಂಹಾಗಳರಣ್ಯದಿ ಪಾ- ।
ಪಿಷ್ಠ, ನಾರೆರಂದೂ ನಮ್ಮನೂ ೬

ಪುತ್ರಾಶೋಕ ತಾಳದೆ ವಶಿಷ್ಠ ಪಾವಕ ಜಲ ಪೊಕ್ಕೂ ।
ಗೋತ್ರದಿಂದ ಪತನವಾಗ್ಬುಳಿದಾ ॥
ಮಿತ್ರಿ ಆವಾವ ಕಾಲಕ್ಕೆ ಬಂದದ್ದನೂ ಭೋಗೀಸದೆ ।
ಗಾತ್ರ ನಾಶವಾಗುವದುಂಟೇ ೭

ಹೆಣ್ಣು ಸ್ತೋಮಗಳಿರ್‍ಯಾ ಕೇಳಿ ನಿಮ್ಮ ನಿಮ್ಮಾ ಗಂಡರೇನು ।
ಅನ್ನದೀರೆ ಮನಿಯಾ ಹೊಂದೀರಿ ॥
ಪನ್ನಗ ಶಯನನ ಪಾದ ಕಾಣದೀರೆ ನಮ್ಮ ಪ್ರಾಣ- ।
ವನ್ನು ತ್ಯಾಗ ಮಾಡೊದೆ ಸತ್ಯಾ ೮

ಎಂಥಾ ಮಾತಿದೂ ಪ್ರಾಣೇಶ ವಿಠಲನ ಕಾಣದಾಲೆ ।
ನಿಂತೆವೆಂಬೋರಾರೀ ಊರೊಳು ॥
ಕಂತು ಪಿತ ಹೋದ ದಾರಿ ಯಾವುದೊ ಹುಡುಕೂತ ಹೋಗು- ।
ವಂತೆ ಮಾಡಿರೆಮ್ಮ ಈ ಕ್ಷಣ ೯

## ೭೪

ಹ್ಯಾಂಗೆ ಮಾಡಲೆಮ್ಮಾ ರಂಗಾ ಹೋಗಿ ಬರಲಿಲ್ಲಾ ॥
ಈಗ ಬರುತೀನೆಂದು ಹೇಳಿ ಬ್ಯಾಗ ಹೋದಾ ಹೇಳೆ ಬುದ್ಧೀ ।ಪಲ್ಲ।

ಮಂದಿರವೆಂಬೊದು ಬ್ಯಾಸರಿಟ್ಟಿ ತನ್ನುದಕಾ- ।
ಒಂದರೊಲ್ಲಾದಮ್ಮ ಜೀವಾ ನಿನ್ನೆ ಬೆಳತನಕಾ ॥
ಇಂದಿರೇಶನ ಪಾದ ಧ್ಯಾನಾದಿಂದ ಮೊಗ್ಗಾಲೋಳು ಮೊಲಿಯಾ ।
ಕಂದನ್ನಂಬಲ ಜರಿದೇ ಆರೇನಂದರೂ ಅನವಲ್ಲರ್‍ಯಾಕೇ ೧

ಇದ್ದ ಕಾಲಕೆ ಅತ್ತಿ ಅತ್ತಿಗಿ ಗಂಡ ಮೈದುನರಾ ।
ಸದ್ದು ತಪ್ಪಿಸೋದರೊಳಗೆ ಬಟ್ಟಿವೇ ಘೋರಾ ॥
ಮಧ್ಯದಲ್ಲೊಮ್ಮಿಂದಲೊಮ್ಮೆ ಎದ್ದ ಮಧುರಾಪುರದ ಸ್ತ್ರೀಯರು ।
ಬುದ್ಧಿವಂತಾರಾದರು ನಾವೆ ಕದ್ದ ಕಳ್ಳೇರಾದಿವಲ್ಲೆ ೨

ಮಾರ ಬ್ರಹ್ಮಾ ರಾಣಿಯಿಟ್ಟದು ಜ್ಞಾಪಕಿರದೇನೇ ।
ಧೀರ ಶ್ರೀ ಪ್ರಾಣೇಶ ವಿಠಲಗೆ ದಾರಿ ಕೊಡರೇನೇ ॥
ನಾರಿಯರ ವಶವಾದನೇನೊ ತೋರದು ಮತಿ ಜಾಣೆ ಯಮುನಾ ।
ತೀರ ಕನ್ನಾ ಹೋಗುವನಲ್ಲಿಂ ದಾರಿಯಲಿ ಬಾಹೋರ ಕೇಳುವ ೩।

## ೭೫

ಕೃಷ್ಣ ಹೋಗಿಹ ದಾರಿದಾಧೀತೆ । ಹ್ಯಾಂಗೆ ಸಿಕ್ಕೀತೆ ।
ಮಧುರಿ ಎಷ್ಟು ಇದ್ದೀತೆ ಪ




**ಶ್ಲೋಕ :**

ದುಗ್ಧ ತರುವ ಗೋಪಾಲಕನೆ ಆವಲ್ಲಿ ಪೋಪ ।
ಕೃದ್ಧ ಖಳಹ ಶ್ರೀಪಾ ಕೇಳು ಎಮ್ಮಯ ಪ್ರಳಾಪಾ ॥
ಸದ್ಯ ಮದನ ಬನ್ನಾ ಬಡಿಸುವಾ ಸೆಳದು ಚಾಪಾ ।
ಮಧ್ವಪತಿಯು ಹೋದಾಕಾರಣ ವಿರಹ ತಾಪಾ ೧

**ಪದ :**

ತಂಗಿ ನೋಡಿರೆ ಮುಂದೆ ವಾಯಸಾ । ಎರಳಿಯು
ಯೇಸಾ । ಮಿಕ್ಕ ಶಕುನದ ಲೇಸಾ ।
ಹಂಗಗಳೆಡಬಲ ಪೋಪದೂ । ಜನ ಬಾಹದು ।
ಕರದಲಿ ಪಿಡಿದಿಹದೂ ॥
ರಂಗ ಹೋದನೆ ಎಂದು ಕೇಳೀರೆ । ನಾಚ ಬ್ಯಾಡೀರೆ ।
ನಗವೇರಿ ನೋಡಿರೆ ।
ಭಂಗವಾಯಿತು ನಮ್ಮ ಸುಖವೆಲ್ಲಾ । ಇಂದಿರಾ ನಲ್ಲಾ ।
ಘಾತ ಮಾಡೀದ ಕುಲ್ಲಾ ೨

**ಶ್ಲೋಕ :**

ಅಕ್ಕ ಹರಿಯ ಪಾದಾ ಅಹುದೆ ನೋಡಿವನು ಆದಾ– ।

ರಕ್ಕರವೆಮಗೀಗಾ ನಿಲ್ಲಧೋಗುವದು ಮೋದಾ ॥
ಫಕ್ಕನೆ ರಥದಿಂದಾ ಇಳದು ಇದ್ದಾನೆ ಮಾಧ- ।
ವಕ್ರೂರ ಸತಿಸೂದಾ ನನ್ನ ಪುಟ್ಟಿಸಿದ ವೇಧಾ ೩

**ಪದ :**

ಅವನ ಹೆಸರು ಮತ್ತೆ ಕೊಳಬೇಕೆ ।
ಪಾಪಿ ಯನಬೇಕೆ । ಹೆಣ್ಣು ಜನ್ಮವು ಸಾಕೇ ।
ತವಕದಿ ಅನಿರುದ್ಧನೊಳು ನಾವು । ಸ್ನೇಹ ಬೆರದೆವೂ ।
ಈಗ ಬಯಲ ಬಿದ್ದೇವೂ ॥
ಭುವನೇಶನಂಘ್ರಿ ಪ್ರಮಾಣವಾ । ಬಲ್ಲಿರೇನವ್ವಾ ।
ಈ ಮಾರ್ಗದೊಳಗೆ ಆವಾ ॥
ಕವಿ ಮೂಢಜನ ಪೋಗಿ ಬರುವದೋ ।
ಹೆಚ್ಚಿ ಆರದೋ । ದುರ್ಲಭವು ದೊರಕುವದೂ ೪

**ಶ್ಲೋಕ :**

ಮುಂದೆ ಕಾಣಿಸೊ ಬಿಳುಪು ಏನಾದಿತವ್ವಾ ।
ಇಂದಿರೇಶಾ ವಾಮನನೆ ಆದಾನೆ ಯವ್ವಾ ॥
ಚಂದ್ರಾವದನೆ ಒಬ್ಬವಳು ಪೋಗುವದು ದಾವಾ- ।
ತೆಂದು ಜರಿಯದೇ ಹಿಂದೆ ನಾವೆಲ್ಲ ಬರುವಾ ೫

**ಪದ :**

ಸ್ವಾಮೀಯ ತೇರಿನ ಕಲಸೀದೆ । ನಿಜವಾಗೀದೇ ।
ನಮ್ಮ ಸುದತಿಯು ಹೋದೆ- ।
ನೇ ಮುಂದಕ್ಕೆಂದರೆ ಬಿಡಳಲ್ಲಾ । ನಿಂತಿದ್ದಾನಲ್ಲಾ ।
ಈ ಕ್ಷಣಕೆ ಕಂಡೆವಲ್ಲಾ ॥
ಭಾಮಿನಿಯರೆ ನಾವು ಒಂದಾಗೀ । ಆ ಪಾಪಿಯ ನೀಗಿ ।
ನಾವು ಅಚ್ಯುತ ಸಾಗೀ ।
ಶ್ರೀಮದ ಗೋಕುಲರೆಂದು ಪೋಗೋಣಾ । ಕ್ರೀಡಿ
ಮಾಡೋಣಾ । ಆನಂದಾಬ್ಧಿ ಈಸೋಣಾ ೬

**ಶ್ಲೋಕ :**

ಧರಿ ಯಾಕೆ ಕ್ಷೀಣಿಸಿಹದು ವೆಗ್ಗಳವಾಗೀ ಸ್ಥಳದಲೀ ।
ಸುರಪತಿ ಕುಳಿತಿದ್ದಾಶಂದನಾ ಹೋದಗಾಲೀ ॥
ಭರವಿದು ನಿಜವಮ್ಮಾ ಈಗ ರವಿಜಾ ತಟಿಯಲೀ ।
ಯರಕೊಳುಹ ಬ್ಯಾಗಾ ಕಾಲು ಮಾಡೊನೆ ಕೇಳಿ ೭

**ಪದ :**

ಭೂತ ವೃಕ್ಷವೆ ಸಂಕರಕ್ಷಣನ್ನಾ । ಕಂಡ್ಯಾ ಪೋಪನ್ನಾ ।
ಹೇಳಿಕೊಟ್ಟಾರೆ ನಿನ್ನಾ ।
ಖ್ಯಾತಿಯಾಗುವದೆಮಗನುಗಾಲಾ ।
ಅಶ್ವತ್ಥ ತಾಳಾ । ವಟುರಂಭ ಗೋಪಾಲಾ ॥
ನಾಥನ ಪಥದೊಳು ಕಂಡೀರ್ಯಾ । ಆಗ ಯಿದ್ದಿರ್ಯಾ ।
ನಮ್ಮ ಕುರುಹು ಬಲ್ಲೀರ್ಯಾ ।
ವಾತೇಶ ನಂಗಾ ಸಂಗದವರೂ । ನಾವು ಹದಿನಾರು ।
ಹತ್ತುನೂರು ನಾರಿಯರೂ ೮

**ಶ್ಲೋಕ :**

ಎಲ ಮರುಳೆ ಅಬಲಿಗಳಿರ್ಯಾ ಮರಗಳಾಡುವವೆ ಮಾತಾ ।
ನಳಿನ ನಯುನ ಇಂಥಾ ಹುಚ್ಚು ಹಿಡಿಸಿದನೆ ಧಾತಾ ॥
ತಿಳಿದು ಬರಿಯಾಲಿಲ್ಲಾವೇನು ಫಣಿಯಲ್ಲಿ ಲಿಖಿತಾ ।
ಘಳಿಗೆ ಅಗಲದಂಥಾ ರಮಣ ಆರಲ್ಲಿ ಬೆರತಾ ೯

**ಪದ :**

ಲೋಕದೊಳಗೆ ಜಾರತನವನ್ನೂ । ಮಾಡಧಾರೇನೂ ।
ಬಿಡುವರೆ ವಲ್ಲಭರನೂ ।
ಕೂಕ ಬುದ್ಧಿಯವರು ನಾವೆಲ್ಲಾ । ಇದು ಥರವಲ್ಲಾ ।
ವಗತನ ಬಿಟ್ಟು ನಲ್ಲಾ ॥

ರ್‍ಯಾಕೆ ಕೋಪಿಸುವಂತೆ ಈ ಪರೀ । ಮಾಡಿದಿವೆ ನಾರೀ ।
ಈಗ ಬಂತಲ್ಲೆ ಸೂರೀ ।
ಮಾಕಾಂತ ಹೋದಲ್ಲಿ ಜಲ ಹುಟ್ಟಾ । ಬ್ಯಾಡವಕ್ಕಾಟಾ ।
ಮಾಡಿದನಮ್ಮ ಭ್ರಷ್ಟಾ ೧೦

**ಶ್ಲೋಕ :**

ಈಗಿನ ಬುದ್ಧಿ ಮುಂಚೆ ಒಬ್ಬಳೀಘುಟ್ಟಲಿಲ್ಲಾ ।
ಆಗ ಪಾಲಾಜ್ಯ ದಧಿಯೂ ಕದ್ದರೂ ಕದಿಯಲಿಲ್ಲಾ ॥
ನಾಗವರದನೆಂದೂ ಮುಚ್ಚಿಕೊಂಬುವಿರಿ ಎಲ್ಲಾ ।
ಭಾಗೀರಥಿ ಪಿತಾ ಎಲ್ಲಿ ಹಾನೀಗ ಕಳ್ಳಾ ೧೧

**ಪದ :**

ತಿಳಿದು ತಿಳಿದಾರಣ್ಯ ಬಿದ್ದೀವೆ । ಹ್ಯಾಗೆ ಹೋದೆವೆ ।
ಮೊಗವೆಂತು ತೋರೆವೇ । ಬಲು ಮಂದಿ ಮುಂದೆ
ಬಾಳಿವಿಗೇಡೂ । ನಮ್ಮನು ಕಾಡೂ– । ತಿಹ
ರವಿಜಾನು ನೋಡೂ ॥ ಬಲಿಧ್ವಂಸಿ ಹೋದರೆ
ತುಚ್ಛವಾ । ಮಾಡಿ ಸ್ನೇಹವಾ । ಸಂಪಾದಿಸಲಿಲ್ಲೆ
ಧಾವಾ । ರೊಳಗೆ ಇಲ್ಲೀಗ ಬರಬಹುದೇ । ಕೇಡು
ಒಂದೊಂದೇ । ಪರಿಪರಿ ಉಂಟು ಬಾಧೇ ೧೨

**ಶ್ಲೋಕ :**

ಬೊಮ್ಮಾ ಕಾಮನ ಆಣೆ ಕೊಟ್ಟದ್ದ ಮಾತ್ರಾ ।
ಅಮ್ಮಾ ಬಾರದೆ ನಿಲ್ಲನೆ ಪಾರ್ಥ ಮಿತ್ರಾ ॥
ಕರ್ಮಾವೀಗಲೆ ಪೋಪವಲ್ಲಾ ದತತ್ರಾ ।
ಜನ್ಮಾವಾದರೆ ಅಯ್ಯೋ ಕಮಲಾ ಕಳತ್ರಾ ೧೩

**ಪದ :**

ಆಣೆಲ್ಲೆದಮ್ಮ ಗೋವಿಂದಗೆ । ಕೇಶವನ ಬಗೆ ।

ಬಲ್ಲೆವೆಲ್ಲಾರು ಈಗೆ ।
ನಾ ನಿರ್ವಣೇಶಗೆ ಹೊಸ ಗುಣಾ । ಬಂತೆ ಗೀರ್ವಾಣಾ ।
ವಂದ್ಯ ಎಂದೆಂದಿಗೂ ಹೀನಾ ॥
ಆ ನಗರವಿಲ್ಲಿಗೆ ದೂರವೋ । ಸಮೀಪವೋ ।
ನದಿಯೊಳಗೆ ದಾಟಿವ್ಯೋ ।
ಭಾನುಸಖಾನನೆ ಕೂಗಿದಾ । ರಾರು ಕೇಳಿದ್ಯಾ ।
ಪ್ರಾಯ ಆದಾನು ಶ್ರೀದಾ ೧೪

**ಶ್ಲೋಕ :**

ಸಖೀ ವೋಡಿಹೋಗಲ್ಕೆ ಕೂಗಳತಿ ಮಾತ್ರಾ ।
ಶಕಟಾಂತಕಾನಂದ ಗೋಪನ್ನ ಮಿತ್ರಾ ॥
ಮುಖಾ ಕಾಣಿಸಿಕೊಂಬುವಾ ಈ ಚರಿತ್ರಾ ।
ಸುಖದಿಂದಲಿ ಕೇಳುವಾ ನೀಲ ಗಾತ್ರಾ ೧೫

**ಪದ :**

ನಿಲ್ಲಾದೆ ಹೋಗಿದ್ದರೆ ಸಿಗುವಾ । ದೇವರ ದೇವಾ ।
ಹೊತ್ತು ಹೋಯಿತಲ್ಲವ್ವಾ ।
ಇಲ್ಲೇ ವ್ಯರ್ಥವಾಗಿ ಬಿಸಲೊಳೂ । ದಣಿದೆವು ಕಾಲು ।
ನೋವುಗೊಂಡಾವು ಬಲೂ ॥
ಮಲ್ಲಾರಿ ಹೆಜ್ಜೆ ಇಲ್ಲಿವೆ ನೋಡಿ । ವಂದನಿಯ ಮಾಡಿ ।
ಊರು ಸ್ಥಳವನ್ನು ಕೂಡಿ ।
ಅಲ್ಲಂಗನಿಯ ಕೊಟ್ಟ ಪರಿಯಲ್ಲೀ । ಪಾದರಜದಲ್ಲೀ ।
ದೇಹ ಹೊರಳಿಸಿರಿಲ್ಲೀ ೧೬

**ಶ್ಲೋಕ :**

ಮಾರನಾ ಕಾಟ ಶಾಂತೀ ಆಗುವಾ ದಾರಿ ಕಾಣಾ ।
ಬಾರದೆಮಗೆ ಇನ್ನೆಂತು ಉಳದೀತು ಪ್ರಾಣಾ ॥

ಬಾರೀ ಬಾರಿಗೆ ಮರಿಯದೂ ಹರಿಯ ಧ್ಯಾನಾ ।
ನಾರಾಯಣನು ಮುರಿದನು ನಮ್ಮ ಗೋಣಾ ೧೭

**ಪದ :**

ಮಟ್ಟ ಮಧ್ಯಾಹ್ನವು ಆಯಿತು । ದೇಹ ಬಳಲೀತು ।
ಕತ್ತಲಲ್ಲೇ ಆದೀತು । ಮುಟ್ಟುವ ನಡಿರೆ
ಗೋಕುಲಕನ್ನಾ । ನಮ್ಮವರನ್ನಾ । ಸಂಪದಿಸುವನೆ
ಅನ್ನಾ ॥ ದುಷ್ಟ ಬುದ್ಧಿಯ ಒಂದು ತಿಲಾಂಶಾ ।
ನೆನಿಸದೆ ಕ್ಲೇಶಾ- । ವನ್ನು ಕಳೆವೆ ಪ್ರಾಣೇಶಾ ।
ವಿಠ್ಠಲ ತಾನೇವೆ ಬಂದಾನು । ನಮ್ಮ ಕೂಡ್ಯಾನು ।
ಅಲ್ಲೆ ತಡದು ನಿಲ್ಲಾನೂ ೧೮

## ೭೬

ರಂಗ ಬಂದನಂತಲ್ಲೇ ಸಖಿ ।
ರಂಗ ಬಂದನಂತಲ್ಲೇ । ಖಳನಿಂಗಿತ ತಿಳಿದಿಲ್ಲಲ್ಲೆ ಪ

ಶ್ರೀ ರಮಣನ ಪಾದಾಬ್ಜದಲಿ ಅ- ।
ಕ್ರೂರಗೆ ಅತಿ ಭಕುತೆಲ್ಲೆ ॥
ಕ್ರೂರನ ಮತಿ ಹೀಗೆಂದನಿರುದ್ಧಗೆ ।
ಪೂರತಿ ತಿಳಸಿಲ್ಲಲ್ಲೇ ಸಖಿ ೧

ಅತಿಹಿತರು ಬೇಡೆನದಲೆ ಗೋಪಿಕ ।
ಸತಿಯರು ಕಳಸಿಹರಲ್ಲೇ ॥
ಪತಿತೋದ್ಧಾರನ ಬಿಟ್ಟು ಬದುಕುವರು ।
ಕ್ಷಿತಿಯೊಳು ಬಹು ದಿಟ್ಟರಲ್ಲೆ ಸಖಿ ೨

ವಾರಿಜ ಬೈಲಿಗೆ ಬಿದ್ದಂತಿಂದಾ ।
ನಾರಿಯರಿಗಾಗಿಹದಲ್ಲೆ ॥
ಜಾರತನವ ಮಾಡಿದರೆಂದಾಡುವ ।
ಧೀರರು ಕೊಲ್ಲುತ್ತಿಹರಲ್ಲೇ ೩

ಇಂದಿರೆ ಅರಸನ ಎಂದಿಗೆ ಕಂಡೆವೋ ।
ಎಂದುದೇವೆ ಆಯಿತಲ್ಲೇ ॥
ಇಂದುವದನೆ ಇಂದೀ ಊರಿಗೆ ಹರಿ ।
ಬಂದರು ಬರದಂತಲ್ಲೇ ೪

ಅನುದಿನ ಶ್ರೀಹರಿ ಸಂಗವು ಬೇಕೆಂದು ।
ನೆನೆ ನೆನೆಸುತಿದ್ದೇವಲ್ಲೆ ॥
ಮನಸಿಜ ಜನಕಾಲಿಂಗಿಸಿದಂದದಿ ।
ಕನಸಿಂದು ಕಂಡೆನಲ್ಲೇ ೫

ಆ ಗರತಿ ಯಶೋದೆಗೆ ಎರಗಲು ಜಯ ।
ವಾಗೆಂದರಸಿಹಳಲ್ಲೇ ॥
ನಾಗಗಮನೆ ಹೆತ್ತವರ ಹರಕೆ ಸುತ ।
ಗಾಗುವದು ನಿಜವಲ್ಲೇ ೬

ಸೃಷ್ಟ್ಯಾದಿಗಳಿಗೆ ಕರ್ತೃನೆಂದು ಶೃತಿ ।
ಕೃಷ್ಣನ ಪೊಗಳುವದಿಲ್ಲೇ ॥
ದೃಷ್ಟಿಸೆ ಕಂಸನ ತರಿವುದು ಪ್ರಾಣೇಶ ।
ವಿಠ್ಠಲನೇಗರಿದಲ್ಲೆ ಸಖಿ ೭

## ೭೭

ಇಕ್ಕೊಳ್ಳಿ ಬಿಲ್ಲೂ । ತಕ್ಕೊಳ್ಳಿ ಕಲ್ಲೂ ।
ಹಾಕೆಲ್ಲಿಗ್ಯೋಡತಿರೆಲಾ ॥

ಲೋಕೆಲ್ಲ ನಡುಗೋದು । ಈ ಕೆಲಸೆಲ್ಲಿದು ।
ಯಾಕೆಮ್ಮ ಕೊಲ್ಲತಿಯಲಾ ಪ

ನಾರದ ಮುನಿ ವಿಸ್ತಾರಿಸಿದಂದದಿ ।
ಪೋರನ ಕೊಲ್ಲಬೇಕ್ರೆಲಾ ॥
ನಾರದ ಮುನಿ ಬಲು ಶೂರನು ತಿಳಿಯದೆ ।
ಈ ರೀತಿ ಮಾಡಿಕೊಂಡೆಲಾ ೧

ಶಿವನಾರಾಧನಿ ಜವದಿಂದ ಮಾಡಿಹೆ ।
ಭುವನದಿ ಸೋಲಿಲ್ಲೆಲಾ ॥
ಭವನೊರವೆಲ್ಲಾ ಸವಿಗೆಡಿಸಿದನೂ ।
ಇವಗ್ಯಾರೆದಿರಿಲ್ಲೆಲಾ ೨

ಮಿಂಚುವ ಮುತ್ತಿನ ಗೊಂಚಲ ಕೊಡುವೆನು ।
ವಂಚನೆ ಮಾಡಬೇಡ್ರೆಲಾ ॥
ಚಂಚಲರಾದೆವು ಮಿಂಚುವ ಮುತ್ತಿನ ।
ಗೊಂಚಲ ಸುಡಬೇಕಲಾ ೩

ಸೃಷ್ಟಿಯೊಳಗೆ ಬಹು ದಿಟ್ಟ ಬಂಟರೆಂ– ।
ದಿಟ್ಟಿಹೆ ನಿಮ್ಮನೆಲಾ ॥
ಬೆಟ್ಟದಂಥ ಗಜ ಕುಟ್ಟೇದ ಮಲ್ಲರ ।
ದೃಷ್ಟಿಸಲಿಲ್ಲೆನೆಲಾ ೪

ಉಮ್ಮಳೀ ಗ್ರಾಮವ ಸಮ್ಮೀಸಿ ಕೊಡುವೆನು ।
ಹಮ್ಮೀಲಿ ಕೊಲ್ಲಬೇಕ್ರೆಲಾ ॥
ಉಮ್ಮಳಿಯಲ್ಲದು ಮುಮ್ಮಳಿ ಜೀವಕೆ ।
ನಮ್ಮೇನ್ನೋಡಗಾಣೆಲಾ ೫

ಮಾತು ಬಿಟ್ಟ ಬಲ್ ।
ಭೀತಿಗೊಂಡು ಹೀಗ್ಯಾತಕೆ ನಿಂತೀರೆಲಾ ॥

ಜ್ಯೋತಿರೂಪನಾ ಯಿತೆಜಾಕ್ಷಿಯ ।
ನೀ ತೆರದು ನೋಡೆಲಾ ೬

ಕೆಟ್ಟ ರೂಪದಿಂ ದೃಷ್ಟಿಗೆ ತೋರುವ ।
ಕೃಷ್ಣನು ಇವನ್ಯಾರೆಲಾ ॥
ಸೃಷ್ಟಿಪ ಪ್ರಾಣೇಶ ವಿಠ್ಠಲನಿವನೂ ।
ಕುಟ್ಟೂವ ನಿನ್ನೀಗೆಲಾ ೭

## ೭೮

ಮೀರಿ ಬಂದ ಕೃಷ್ಣ ಎಲ್ಲನೇ ಕೂಗಿ ।
ಮಾರಿ ಕರಕೊಂಡ ಕಂಸನು ತಾನೇ ಪ

ಸೊಗಸಿಂದಾನೆಯ ಮೇಲೆ ಇರಸಿ ವೈತಿರಲು ವ- ।
ಸ್ತ್ರಗಳ ಕಂಡೆಮಣಿವು ಕೊಡು ಎನಲೂ ॥
ಜಗದೀಶನೆಂದು ತಿಳಿಯದೆ ಮನ್ನಿಸದಿರೆ ।
ಅಗಸಾನಿ ಭವ ಕೊಂದರಿವೆ ಸೂರಿ ಮಾಡುತ ೧

ಗೋಪಾಲ ರಾಮರ ಸಹಿತ ಮುದದಿ ಮಧು ।
ರಾಪುರ ಪೊಗಲು ಅಲ್ಲಿಹ ಜನರೂ ॥
ಶ್ರೀಪತಿಯನು ನೋಡಲ್ಕಾರಾರ ಮನಸೆಂತೊ ।
ಆ ಪರಿ ತೋರುತ ರಾಜಪಂಥಾನಾದಿ ೨

ಉಬ್ಬುಬ್ಬಿಲಿಂದ ಕೃಷ್ಣನ ಕೊಲ್ಲಬೇಕೆಂದು ।
ಕೊಬ್ಬಿದ ಗಜವನ್ನು ಮೇಲ್ಬಿಡಲೂ ॥
ಅಬ್ಬರಿಸುತ ಸೀಳಿ ದಂತ ರಾಮನು ತಾನು ।
ಇಬ್ಬರು ಹೊತ್ತು ರಕ್ತಾಂಕಿತರಾಗುತ ೩

ಕಂಡರು ಚಾಣೂರ ಮುಷ್ಟಿಕ ಮಲ್ಲಿದು ।
ಭಂಡಲೆ ನಮಗೇನು ಗತಿ ಎನ್ನುತಾ ॥
ಮಂಡಲದೊಳು ಮೀರಿದವರೆಂಬ ಹಮ್ಮೀಗೆ ।
ಪುಂಡರಿಕಾಕ್ಷನ ಎದುರಿಗೆ ನಿಂತರೂ ೪

ಬಲ್ಲಷ್ಟು ಯುದ್ಧವ ಬಡದಾಡಿಕೊಳಲೆಂದು ।
ಕಲ್ಲಂತೆ ನಿಂತನು ನೋಯದಲೆ ॥
ಬಲ್ಲಿದ ಕ್ಷಣಮಾತ್ರಕಿಬ್ಬರ ಕೊಂದ್ಯಮ– ।
ನಲ್ಲಿಗೆ ಕಳುಹಿದ ದುರ್ಜೀವಿಗಳನು ೫

ಆರಾರಿಗೆಂದಿಗೊಳಗಾಗ ಬೇಡೆಂದು ।
ದ್ವಾರದೊಳಿಟ್ಟಿದ್ದ ಶಿವನ ಬಿಲ್ಲೂ ॥
ಆರಾಧಿಸುತಲಿರೆ ಕಂಡು ಲೀಲೆಯಲಿಂದ ।
ಚೂರು ಚೂರು ಮಾಡಿ ನಡೆತರುತಿದ್ದನು ೬

ಗಂಧವ ಹಚ್ಚಿ ಕುಬುಜೆ ತಿದ್ದಲಾಕ್ಷಣ ।
ತಂದುಕೊಟ್ಟರು ಮಾಲೆ ಕನ್ನಡಿಯಾ ॥
ಛಂದಾದಿ ವಸ್ತ್ರಗಳನ್ನು ಹೊದ್ದಿಸುವರು ।
ಮಂದೆಲ್ಲ ನಮೊ ನಮೊ ಸ್ವಾಮಿ ಎಂಬುವರೂ ೭

ಚಂಡಂತೆ ಕುಣಿ ಕುಣಿದಾಡುತ ಊರೊಳು ।
ದಿಂಡಿಕ್ಕಿ ಹುಡುಕುತ ಬಹು ಖಳರಾ ॥
ಚಂಡಿರೆಗಳ ಹಿಡಿದ್ಹಿಡಿದು ಸರ್ವರ ಪ್ರಾಣ ।
ಕೊಂಡು ಹಾರುತ ಪೋಗಿ ಮಾವನ ಮನಿ ಪೊಕ್ಕ ೮

ಕೆಟ್ಟೆ ಕೆಟ್ಟೆ ಎಂದು ಮಂಚಿಕಿ ಏರಾಲು ।
ಬಿಟ್ಟೆನೇ ನಿನ್ನಾಡಗಿದರೆನುತಾ ॥
ಮುಷ್ಟಿಲಿ ಗುದ್ದಿ ಕಂಸನ ಕೊಂದು ಪ್ರಾಣೇಶ ।
ವಿಠ್ಠಲ ದೇವಕಿಯರ ಬಂದಿ ಬಿಡಿಸೀದ ೯

## ದೇವ ದೇವತೆಗಳ ಸ್ತುತಿ

### ೭೯

ವಸುಧೀಜೆ ಸೀತೆ ವೈದೇಹಿ । ನಾ ನ–
ಮಿಸುವೆ ಪಾದಾಬ್ಜಕೆ ಪಾಹಿ ॥ ಆಹಾ ॥
ದಶಕಾರಿಸತಿ ವಿಧಿ ವೃಷಭೇಷ ಪೂಜಿತೆ ।
ಬಿಸಜ ಮಂದಿರೆ ದೀನ ಅಸುರೇತರಾಂಘ್ರಿಪೆ ಪ

ಉದಿತ ಭಾಸ್ಕರ ಸಮಕಾಂತೆ । ದೇವಿ
ಪದುಮೇಶ ಗಮನೆ ನಿಶ್ಚಿಂತೆ । ಪಯೋ
ದಧಿ ಜಾತೆ ಅಸುರ ಕೃತಾಂತೆ । ಯನ್ನ
ಹೃದಯಾರ್ತಿ ಕಳೆಯೇ ಜಯಂತೆ ॥ ಆಹಾ ॥
ಮಧುಕೈಟಭಾರಿಯ ಹೃದಯ ನಿಕೇತನೆ ।
ಚದುರೆ ಶ್ರೀರೂಪದಿ ಬುಧಜನರ ಪೊರೆವೆ ೧

ರಾಜೀವೋಪಮ ಸುನೇತ್ರೆ । ಸುವಿ
ರಾಜಿಸುತಿಹೆ ಶುಭಗಾತ್ರೆ । ಮೃಗ
ರಾಜ ಮಧ್ಯಳೆ ಮುನಿ ಸ್ತೋತ್ರೆ ।
ಮುಕ್ತಿಭಾಜ ಪ್ರೀಯಳೆ ನೃಪಪುತ್ರೆ ॥ ಆಹಾ ॥
ಶ್ರೀ ಜನಾರ್ದನನಾಜ್ಞಾ ವ್ಯಾಜದಿಂ ಭೂದೇವಿ
ರಾಜಸರಿಗೆ ದ್ವಂದ್ವ ಭೋಜನಗೈಸುವೆ ೨

ಖಚರಾಳು ಬಂಧನ ನಿಟಿಲ । ನೇತ್ರ
ಖಚರ ವಂಶೋದ್ಭವ ಚಟುಲ । ದೇವ
ಖಚರಾಜ ಪ್ರಾಣೇಶ ವಿಠಲ – ರಾಣಿ
ಖಚರಾಸ್ಯೆ ಕಳೆಯೆನ್ನ ಕುಟಿಲಾ ॥ ಆಹಾ ॥
ಖಚರಾಪ ಸ್ಯಂದನೆ ಖಚರ ಸುವಾಣೀ ಹೇ
ಖಚರಾಶ ವೇಣಿಯೇ ಖಚರ ಮರ್ದನೆ ದುರ್ಗೆ ೩

## ೮೦

ಕಾಯೇ ಕಾಯೇ ಇಂದಿರೆ
ತೋಯಜಾಕ್ಷಿ ವೈನತೇಯ ವರೂಥೆ ಈ
ಕಾಯವೇ ನಿನ್ನದು ನೋಯಿಸದೆನ್ನನು ।
ಕಾಯೇ ಕಾಯೇ ಪ

ದೊಡ್ಡಾತನರಸಿ ನೀನಮ್ಮ ಕೈ– ।
ಯೊಡ್ಡಿ ಬೇಡುವೆ ನುಡಿ ಕೇಳಮ್ಮ ॥
ಗುಡ್ಡದಂತಿಹ ದೋಷ ।
ಕಡ್ಡಿಯಂತೋಡಿಸಲಾರೆಯಾ । ಹಾ ಹಾ ॥
ನಿನ್ನವನೆಂಬದರಿಯಾ (ಹಾ ಹಾ) ।
ಇತ್ತ ಬಾ ಯೆನಲಾರೆಯಾ (ಹಾ ಹಾ) ॥
ಕೃತಾಂತಗೆನ್ನ ಮಾರಿಯಾ (ಹಾ ಹಾ) ೧

ಬೊಮ್ಮಾದಿಗಳ ಪೊರೆವಾಕೆಂದು ಶ್ರುತಿ ।
ಸಮ್ಮತವಾಗಿರೆ ನೀನಿಂದು ॥
ಯಮ್ಮನು ನೋಡದೆ ।
ಸುಮ್ಮನಿರಬಹುದೆ ಭೂಷಣಾ । ಹಾ ಹಾ ॥
ಬಿಡದೇ ತ್ರಯ ಈಷಣಾ (ಹಾ ಹಾ ।
ಮಾಳ್ಪವು ಬಹು ಶೋಷಣಾ (ಹಾ ಹಾ) ॥
ಬಿಡಿಸಿ ಮಾಡೆ ಪೋಷಣಾ (ಹಾ ಹಾ) ೨

ಸುರಪತಿ ಪ್ರಾಣೇಶ ವಿಠಲನಾ ಪದ ।
ಸರಸಿಜ ಪೊಂದಿಸೆ ಶ್ರೀಲಲನಾ ॥
ಅರಗಿನಂತೆ ಜನನಿ ।
ಮರದಂತೆ ಮಕ್ಕಳು ಎಂಬರಾ ಹಾ ಹಾ ॥
ಆರ್ಯರನ್ಯತೆ ಶಂಬರಾ ಹಾರಿ (ಹಾ ಹಾ) ।

ಮಾತೆ ಹಾಟಕಾಂಬರಾ (ಹಾ ಹಾ)
ಧಾರೆ ಮೆಚ್ಚೆ ಪೀತಾಂಬರಾ (ಹಾ ಹಾ) ೩

## ೮೧

ಕ್ಷೀರವಾರಿಧಿ ಸಂಭೂತೆ ಪ್ರದ್ಯುಮ್ನಮಾತೆ ।
ಈರೇಳು ಲೋಕ ವಿಖ್ಯಾತೆ ॥
ಆರಾಧಿಪೆ ವಿಪದೇಶಮಲೆ ಹೃ ।
ದ್ವಾರಿಜದೊಳಗೆ ಮುರಾರಿಯ ತೋರೆ ಪ

ಧಾತಾದಿ ದಿವಿಷತ್ಪೂಜಿತೆ ಸಲ್ಲೋಕದಾತೆ ।
ಜಾತ ಮಧ್ಯಾಂತ ರಹಿತೆ ॥
ಸೀತೆ ಸದ್ಗುಣವ್ರಾತೇ ಭಜಕರಾ ಪ್ರೀತೆ ।
ಭೂತ ತನ್ಮಾತ್ರಾ ಗುಣವೀತೆ ॥
ಪಾತಕಾರಣ್ಯಕೆ ಜಾತವೇದಸೆ ಪುರು ।
ಹೂತ ಪೂಜಿತೆ ರಮೆ ಮಾತು ಮಾತಿಗೆ ನಿನ್ನ ॥
ಪ್ರೀತಿ ರಮಣ ರಘುನಾಥನ ಸ್ಮರಣೆಯ ।
ಆತುರದಲಿ ಕೊಡೆ ಸಿತಾಂಶು ಮುಖಿ ೧

ಷಡು ವಿಕಾರ ದೂರೆ ವ್ಯಾಪ್ತೆ ಜ್ಞಾನಿಗಳಿಂ ಪ್ರಾಪ್ತೆ ।
ಬಿಡದೆ ಭಜಿಸುವವರಿಗಾಪ್ತೆ ॥
ನಡುಮನೆ ಸುತ ಸೇವೆಗೆ ತೃಪ್ತೆ ದೋಷ ನಿರ್ಲಿಪ್ತೆ ।
ಕಡು ದಯಾವಂತೆ ಸುಷುಪ್ತೆ ॥
ಪಡೆದು ಕಮಲಭವ ಮೃಡ ಪ್ರಮುಖರ ವರ ।
ಕೊಡುವೆ ನಿರಂತರ ಬಡವನು ನಾ ನಿ ।
ನ್ನೊಡಲಿಗೆ ಭಾರವೆ ತಡೆಯದೆ ಶ್ರೀ ಹರಿ– ।
ಯಡಿಗಳರ್ಚಿಪುದಕೆ ದೃಢಮನ ಪಾಲಿಸು ೨

ಸಿಂಧುರ ಗಮನೆ ಅಹಿವೇಣೀ ಲೋಕೈಕ ತ್ರಾಣೀ ।
ಮಂದಹಾಸಾಸ್ಯೆ ಕಲ್ಯಾಣಿ ॥
ನಿಂದಿತ ಜನ ಸೂದನಿ ಸರಸಿಜ ಪಾಣಿ ।
ಇಂದಿರಾದೇವಿ ಶುಭ ವಾಣೀ ।
ನೊಂದೆನೆ ಜನ್ಮದಿ ಬಂದು ಸುಖವ ನಾ ।
ನೊಂದರಿಯನೆ ಅರವಿಂದ ಸದನೆ ವಾ ॥
ರೆಂದು ಭಯವ ಪ್ರಾಣೇಶ ವಿಠ್ಠಲನ ।
ಚಂದದಿ ತುತಿಸುವಾನಂದವ ಪಡಿಸೇ ೩

## ೮೨

ಕಾಯೆ ನಿನ್ನ ಪದ ತೋಯಜಕೆರಗುವೆ ।
ವಾಯುದೇವಿ ಹರಿ ಕಾಯ ನಿವಾಸೇ ॥
ಕಾಯೇ । ಕಾಯೇ ಪ

ಬುದ್ಧಿಯ ಪ್ರೇರಿಸೆ । ಪ್ರದ್ಯುಮ್ನನ ಸತಿ ॥
ಕರ್ದಮಜಾಲಯ । ಭದ್ರ ಶರೀರೆ ೧

ಇಂಗಡಲಾತ್ಮಜೆ । ಅಂಗನಾಕುಲ ಮಣಿ ॥
ರಂಗನ ಪದಕಂಜ । ಭೃಂಗೆ ಕರುಣದಿ ೨

ಪ್ರಾಣೇಶ ವಿಠಲನ । ಮಾನಿನೀ ಯನ್ನಯ ॥
ಹೀನತೆಯೆಣಿಸದೆ । ಪೋಣಿಸಿ ಮತಿಯ ೩

## ೮೩

ಸೀತೆ ಸದ್ಗುಣ ಗಣ । ವ್ರಾತೆ ಈರೇಳು ಲೋಕ ।
ಮಾತೆ ಪ್ರಣತ ಜನ । ಪ್ರೀತೆ ಸಾಗರ ಜಾತೆ ॥

ಮಾತು ಮಾತಿಗೆ ರಘು । ನಾಥನ ಸ್ಮರಣೆಯ ।
ಆತುರದಲಿ ಕೊಡು । ಸಿತಾಂಶು ವದನೆ ॥ಪಲ್ಲ॥

ಶ್ರೀ ಭೂ ದುರ್ಗಾಂಭ್ರಣೀ ಸ್ವ । ರ್ಣಾಭೆ ರಾಮನ ರಾಣೀ ।
ಸಾಭಿಮಾನ ನಿನ್ನದ । ಮ್ಮಾ ಬಾಲಕನ ಕರ– ॥
ವ ಬಿಡದಲೆ ಸರ್ವ । ದಾ ಬಾದರಾಯಣನಂ– ।
ಘ್ರಿ ಬಿಸಜ ದ್ವಯವ । ನೇ ಭಜಿಸಲು ಜ್ಞಾನ– ॥
ವ ಒಲಿಸುವದತಿ । ಶೋಭನ ವಿಗ್ರಹೆ ।
ಹೇ ಬಡವನು ಗೈ । ಯ್ವಾ ಬಿನ್ನಪವನು ।
ನೀ ಬಿಸುಟದೆ ಬಹ । ಳಾ ಭಯ ಪರಿಹರಿ ।
ಸೀ ಭಕುತ ಜನರೊ । ಳು ಬೆರಸುವದೇ ೧



ಮಾ ಕಂಜದಳನೇತ್ರೆ । ಶ್ರೀ ಕುಂಭಿಣೀಜೆ ದಾತೆ ।
ನೀ ಕರುಣದಿ ನೋ । ಡೀ ಕಕುಲಾತಿ ಹಿಂಗಿಸೆ ।
ಬೇಕು ಸತ್ಸಾಧನವು । ಸಾಕು ದುರ್ವಿಷಯಗಳು ।
ಲೌಕಿಕಗಳೆಲ್ಲಾ ವೈ । ದಿಕವಾಗಲೆನಗೆ ॥
ನಾಕು ಮೊಗನ ಜನ । ನೀ ಕರಿಗಮನೆ ಪ– ।
ರಾಕು ದಿವಿಜನುತೆ । ಶೋಕರಹಿತೆ ದನು– ।
ಜಾ ಕುಲ ಸಂಹರೆ । ಈ ಕಠಿಣ ಭವದೊ– ।
ಳೇಕೆ ದಣಿಸುತಿಹೆ । ನೀ ಕಡೆಗೆತ್ತಲೆ ೨

ದಾತ ಪ್ರಾಣೇಶ ವಿಠಲ । ಸೋತೆನೆಂದು ನಗಲು ನೀ– ।
ನಾತನ ದಾಯದಿಂ ಪುರು । ಹೂತನ ಸೋಲಿಸಿ ಪ್ರ– ।
ಖ್ಯಾತೆಯಾದೆ ಉದರೌ । ಜಾತ ಸದನೆ ।
ಸತ್ರಾಜಿತೆ ಲಕ್ಷ್ಮೀಯಾದಿ ದೇ । ವತೆ ಭಾಸ್ಕರ ಕಾಂತೆ ॥
ಭೂತಳದೊಳಗೆ ಅ । ನಾಥರಿಗೆ ವರ ಪ್ರ– ।
ದಾತೆ ಕೃಪಾ ನಿಧಿ । ಯೇ ತಡೆ ದುರ್ಮತಿ ।
ಧೌತ ವ್ರಜನಿ ಧರಿ । ಪೋತನಕನಲದೆ ।
ವಾತ ಪೂಜಿತೆ ರಮೆ । ಪಾತು ಪ್ರತಿಕ್ಷಣದಿ ೩

## ೮೪ – ಅ

### (ಉಗಾಭೋಗ)

ಬೊಮ್ಮನನ್ನೊಲ್ಲೆನವ್ವ ವೃದ್ಧನಾಗಿಹನೆ ।
ಸಮ್ಮೀರನೊಲ್ಲೆನವ್ವ ನಿಂತು ನುಡಿಸನೆ ॥
ಚರ್ಮಾಂಬರ ಶಂಕರನೊಲ್ಲೆನವ್ವ ।
ಅಮ್ಮಮ್ಮ ರವಿ ನೋಡೆ ಉರಿಯುತ ಬರುವ ॥
ಸುಮನಸರ ಪತಿಗೆ ಮೈಯೆಲ್ಲ ರಂಧ್ರ ।
ಹಿಮ್ಮೆಟ್ಟುವದು ಕಾಂತಿ ದಿನದಿನದಿ ಚಂದ್ರಗೆ ॥
ಧರ್ಮನ ಹೊಟ್ಟೆ ಗಣಪನೊಲ್ಲೆನವ್ವ ।
ಸಮ್ಮೀಚೀನಲ್ಲಾರು ಮೊಗನನೊಲ್ಲೆನವ್ವ ॥
ನಮ್ಮ ಪ್ರಾಣೇಶ ವಿಠಲನೆಲ್ಲ ಸುರರೊಳು ।
ಸಮ್ಮತನಾಗಿಹನೆಂದು ತುಂಬಿದಾನಂದದಿಂ ॥
ರಮ್ಮೆ ನಗುತ ಮಾಲೆ ಹಾಕಿ ನಮಿಸಿದಳು ॥

## ೮೪ – ಬ

ಏನು ಸ್ನೇಹವನು ಮಾಡಿದಿರಿಯಮ್ಮಾ ಮುಖ್ಯ–
ಪ್ರಾಣ ಸಖನ ಬಗೆ ಹೀಗೆಂದು ತಿಳಿಯದೇ ಪ

ಉಣಿಸುವ ಬೇಡಿದುದನೆಂಬಿರಾ ಶ್ರೀವಾ–
ಮನನಾಗಿ ತಿರಿದುಂಡ ಬಲಿಯಲ್ಲಿ ।
ಘನವಸನವುಟ್ಟೇವೆಂಬಿರಾ
ಅನುದಿನ ದಿಗಂಬರನಾಗಿ ತಿರುಗುವ ೧

ಮಣಿಭೂಷಣವನಿಟ್ಟೇವೆಂಬಿರಾ ಆವ
ಹಣವಿರೆ ಅಡವಿಯೊಳಿರುವಾನೆ ।

ತನು ನೋಡಿ ಮರುಳಾದೆವೆಂದಿರಾ ನೀಲ
ಘನದಂತಿರುವ ದೊಡ್ಡ ಚಲುವಿಕೆ ೨

ದುರಿತ ಬಂದರೆ ಕಾಯ್ವನೆಂಬಿರಾ ತಾನೇ
ಕರಕರೆ ಪಟ್ಟ ದನುಜನಿಂದ ।
ಪುರುಷನು ಗುಣವಂತನೆಂದಿರಾ ಪಾಲ್ಮೊ-
ಸರ ಕದ್ದು ತಿಂಬುವ ವ್ರಜದೊಳು ೩

ಕಡುದಯಾವಂತನೆಂದರಿದಿರ್‍ಯಾ ಶಿರ
ಕಡಿದ ಮಾತೆಯ ದಯೆ ನೋಡಿರಿ ।
ನುಡಿಗೇಳಿ ಮರುಳಾದೇವೆಂದಿರಾ ನಭ
ಪೊಡವಿ ನಡುಗುವಂತೆ ಕೂಗುವ ೪

ಜ್ಞಾನಿ ಈ ಕೃಷ್ಣನೆಂದರಿದಿರಾ ನಿತ್ಯ-
ಕಾನನದೊಳು ದನ ಕಾಯ್ವವನು ।
ತಾನೇ ಕಾಣದವನು ಮತ್ತೊಬ್ಬರು ಬೇಡ-
ಲೇನು ಕೊಡುವನೆಂಬುವರು ಜನರು ೫

ಯನಗೆ ತಿಳಿಯದೇನು ಮಾಯವೋ ಅವನ
ಮನೆಯ ಪೊಕ್ಕವರೆಂದು ತಿರುಗಾರು ।
ಅನುಗಾಲ ಗೆಳೆತನ ಮಾಡಿದ ಫಾಲಾ-
ಕ್ಷನು ಸುಡುಗಾಡೊಳು ಸೇರಿದ ೬

ಎಂತು ಪೇಳಿದರೆ ತೀರೀತಮ್ಮ ನಮ್ಮ
ಕಂತುಪಿತನ ಮಹಾಮಹಿಮೆಯೂ ।
ಅಂತಕಜ ಪ್ರಾಣೇಶ ವಿಠ್ಠಲಾ ನಮ್ಮ
ಚಿಂತೆಯ ಕಳೆಯೆಂದೆರಗಿರಮ್ಮ ೭

## ೮೫

ದಾತೆ ಇಂದಿರೆ ಪಾರಿ । ಜಾತ ಮಂದಿರೆ ಲೋಕ ।
ನಾಥೆ ಸುಖ ಪೂರ್ಣೆ ವಿಖ್ಯಾತೆ ॥
ಬಿನ್ನವಿಸುವೆನೆ ಯನ್ನ
ಮಾತು ಮನ್ನಿಪುದೇ ವಿಧಿಮಾತೆ ಪ

ಪಾನೀಯಧಿ ಹರಿಗೆ । ಏನು ಕೊಟ್ಟನೊ ನಿನ್ನ ।
ಕಾಣಿಸವೆ ಕಣ್ಣು ಕುಲವಿಲ್ಲ ॥
ಗೋತ್ರವಿಲ್ಲ ಹೆತ್ತವರ–
ಕ್ಷೋಣಿಯೊಳಗೊಬ್ಬರರಿತಿಲ್ಲ ೧

ಏನು ಮರುಳಾದೆವ್ವ । ಶ್ರೀನಾರಿಯಿಂಥವಗೆ ।
ಹೀನಳುಚ್ಛಿಷ್ಟ ಫಲಮೆದ್ದ ॥
ಬಡ ಬ್ರಾಹ್ಮಣೊದ್ದರೆ
ಮಾನವೇ ಇಲ್ಲಿ ನಗುತಿದ್ದ ೨

ಧವ ಚೋರ ಬಹು ಜಾರ । ಸವತಿಯರು ಬಲು ಮಂದಿ ।
ಅವರಿಗಾತ್ಮಜರು ಹತ್ತತ್ತು ॥
ನಿನ್ನೊಗತನದೊಳಿದ್ದ
ಅವಿವೇಕ ಮೂಲೋಕಕೆ ಗುರುತು ೩

ಅತ್ತೆ ಮಾವಗಳಿಲ್ಲ । ವೃತ್ತಿ ಕ್ಷೇತ್ರಗಳಿಲ್ಲ ।
ಹಸಿದರನ್ನಿಲ್ಲ ಮನೆಯಲ್ಲಿ ॥
ಈ ಗಂಡನೊಡನೆಯೇ–
ನರ್ಥಿ ಪಡುತಿಹೆಯೆ ನೀ ಬಲ್ಲೆ ೪

ಸೇರಿದನು ಪತಿ ನಿನ್ನ । ಶೌರು ಮನೆ ನೋಡಲ್ಕೆ ।
ಧಾರಿಣಿಯೊಳಗೆ ಬಹು ನಿಂದಾ ॥

ಭಕ್ತಿಯಿಂದವನ ಹ್ಯಾ-
ಗಾರಾಧಿಸುವದೋ ಸುರವೃಂದಾ ೫

ಶಿಶು ಹಿಂಸಕತಿ ಕಠಿಣ । ಹಸನ್ಮುಖನಲ್ಲರ್ಭಕ ಹೆಂ- ।
ಗಸರಳಿದ ಪುಕ್ಕಾ ಬಹು ಠಕ್ಕಾ ॥
ಕಲಹಗಂಟೇನು ಸೇ-
ವಿಸಿದ್ಯೊ ವ್ರತಗಳನು ಇವ ಸಿಕ್ಕಾ ೬

ಎಲ್ಲೆಲ್ಲಿ ನೋಡಿದರು । ಇಲ್ಲಿ ಪ್ರಾಣೇಶ ವಿ- ।
ಠಲನಂಥವರೂ ಏನೆಂಬೆ ॥
ಮುದದಿಂದ ಬಿಡದೆ ಅವ-
ನಲ್ಲಿ ಪೊಂದಿರ್ಪೆ ಜಗದಂಬೆ ೭

## ೮೬

## ಬ್ರಹ್ಮದೇವರ ಸ್ತುತಿ

ಸರಸೀಜಾಸನ ವಾಣಿ । ತರುಣೀ ವಲ್ಲಭ ಕ್ಷೋಣಿ ।
ಗುರುವೆ ಮುಗಿವೆನು ಪಾಣಿ । ಹರಿ ಪಾದದಾಣಿ ೧

ಇನ್ನೊಬ್ಬರಾ ಬಲ್ಲೀನೆ । ಎನ್ನ ಸ್ವರೂಪೋದ್ಧಾರ ॥
ರನ್ನು ಜಗದೊಳು । ನಿನ್ನೆತಿರಿಕ್ತಾ ೨

ಈ ಕಥಿಗೆ ಮಂಗಳವಾ । ಕರುಣೀಸು ತ್ವರ ॥
ಲೋಕಾಧೀಶ ಪ್ರಾಣೇಶ । ವಿಠ್ಠಲನ್ನ ದಾಸಾ ೩

(ಈ ಪದವನ್ನು ದಾಸರಾಯರ ಮುಯ್ಯದ ಪದದಿಂದ ಸಂಗ್ರಹಿಸಲಾಗಿದೆ.)

## ೮೭

## ವಾಯುದೇವರ ಸ್ತುತಿ

ನಮೋ ನಮೋ ಗುರುವಾತ ನಿನ್ನ ಚರಣಯುಗಳಕೆ ।
ಕಮಲನೇತ್ರನ ದೂತ ನೆರೆ ನಂಬಿದ ಜನರ ।
ಶ್ರಮವ ನೀಗುವ ದಾತ ಮೂಜಗದಿ ನಿನ್ನ ಮ-
ಹಿಮೆಯ ಬಲ್ಲರೋ ಖ್ಯಾತ ಶ್ರೀ ಕಾಳಿನಾಥ ॥
ತಿಮಿರ ರಿಪು ನಿಭ ಅಮರವಂದಿತ ।
ಡಮರುಧರ ಪಿತ ಸಮೀರ ದೇವ ಪ

ತ್ರೇತಯುಗದಲಿ ಅಂದು ಹನುಮಂತ ಶ್ರೀರಘು ।
ನಾಥನಲ್ಲಿಗೆ ಬಂದು ಪರಮಾತ್ಮ ನಿನ್ನಯ ।
ಮಾತು ಕೇಳುವೆನೆಂದು ಕೈಕೊಂಡು ಸೇವೆಯಾ ।
ನಾಥ ಜನ ಕುಮುದೇಂದು ಕರ ಮುಗಿದು ನಿಂದು ॥
ಆ ತರಣಿಕುಲ ಜಾತನುಂಗುರವಾತುರದಿ ಕೊಂ-
ಡಾತ ವೇಗದಿ ಸೀತೆಗರ್ಪಿಸಿ ಭೀತಿಯಿಲ್ಲದೆ ।
ಪಾತಕರ ಬಹು ಘಾತಿಸಿದೆಯೆಲೋ ೧

ಕುಂತಿಯಲಿ ಅವತಾರ ಮಾಡಿದೆಯೊ ಕುರುಕುಲಕೆ ।
ಅಂತಕ ಖಳಕುಠಾರಾ ಸೀಳಿದೆಯೊ ಮಗಧನ ।
ಸಂತರೊಡೆಯ ಉದಾರ ವಿಕ್ರಮನೆ ಬಹು ಗುಣ ।
ವಂತ ಕಲ್ಮಷ ದೂರಾ ಆ ಕೀಚಕರಾ ॥
ಸಂತತಿಯನಳಿದಂಥ ನಿಜ ಬಲವಂತ ನಿನ್ನಯ ।
ಪಂಥ ಗೆಲಿಸಿದೆ ದಂತಿ ಪುರದರ ಸಂತಕಾತ್ಮಜ ।
ನಂತು ನೆಲಿಸಿದೆ ಚಿಂತಾರಹಿತ ೨

ಕಲಿಯುಗದಿ ಮುನಿಯಾಗಿ ಪ್ರಾಣೇಶ ವಿಠ್ಠಲ ।
ನೊಲುಮೆಯನು ಚೆನ್ನಾಗಿ ಗಳಿಸುತಲಿ ಸೂತ್ರಗ ।
ಳೊಲಿಸಿ ಬಹು ಸ್ಪಷ್ಟವಾಗಿ ಗ್ರಂಥಗಳ ವಿರಚಿಸಿ ।

ಹಲವು ಮತಗಳ ನೀಗಿದಂಥ ಸುನಿಯೋಗಿ ॥
ಕಳೆದು ಸುಜನರ ಮಲಿನವನು ಈ ಇಳೆಯೊಳಗೆ ಬಹು ।
ಬೆಳದೆ ನಿನ್ನ ಮತ ಚಲುವ ಯತಿ ಯನಗೊಲಿದು ಸನ್ಮತಿ ।
ಕಲಿಸುವದು ಕರಗಳನು ಬಿಡದಲೆ ೩

## ೮೮

ಶರಣು ನಿನ್ನ ಚರಣಗಳಿಗೆ ಭಾರತೀಶನೆ ।
ಕರವ ಪಿಡಿದು ಸಲಹೋ ಬಿಡದೆ ಭಾರತೀಶನೆ ಪ

ಎಲ್ಲ ಕಡೆಗೆ ವ್ಯಾಪ್ತ ನೀನೆ ಭಾರತೀಶನೆ ।
ಅಲ್ಲಿ ವಿಷವ ಕುಡಿದೆಯೆಂದು ಭಾರತೀಶನೆ ॥
ಗೆಲ್ಲಿಸಿದೆಯೊ ಸರ್ವ ಸುರರ ಭಾರತೀಶನೆ ।
ಬಲ್ಲಿದನು ನಿನಗೆಣೆ ಯಾರೋ ಭಾರತೀಶನೆ ೧

ಅಂಜನಾ ಕುಮಾರನಾಗಿ ಭಾರತೀಶನೆ ।
ಕಂಜನಾಭನಂಘ್ರಿ ಭಜಿಸಿ ಭಾರತೀಶನೆ ॥
ಲಿಂಜದು ದಧಿ ದಾಟಿ ಪೋಗಿ ಭಾರತೀಶನೆ ।
ಸಂಜೆ ಚರರ ಸಂಹರಿಸಿದೆಯೊ ಭಾರತೀಶನೆ ೨

ಕುಂತಿ ಜಠರದಿಂದ ಜನಿಸಿ ಭಾರತೀಶನೆ ।
ಹಂತ ಕೌರವರನ ತರಿದಿ ಭಾರತೀಶನೆ ॥
ಕಂತು ಪಿತನ ಕರುಣ ಪಡೆದೆ ಭಾರತೀಶನೆ ।
ಅಂತಗಾಣೆ ನಿನ್ನ ಮಹಿಮೆಗೆ ಭಾರತೀಶನೆ ೩

ಯತಿಯ ರೂಪ ಇಳಿಯೊಳಾಗಿ ಭಾರತೀಶನೆ ।
ಮತಿಯ ಸರ್ವ ಬುಧರಿಗಿತ್ತೆ ಭಾರತೀಶನೆ ॥
ಸತತ ನಿನ್ನ ಪೂಜಿಪರಿಗೆ ಭಾರತೀಶನೆ ।
ಗತಿಯ ಕೊಡುವೆ ದೋಷ ಕಳೆದು ಭಾರತೀಶನೆ ೪

ಘನ್ನ ಪ್ರಾಣೇಶ ವಿಠಲ ನಾಳೆ ಭಾರತೀಶನೆ ।
ಬಿನ್ನಪವನು ಲಾಲಿಸುವದೋ ಭಾರತೀಶನೆ ॥
ನಿನ್ನ ದಾಸನೆನಿಸಬೇಕೋ ಭಾರತೀಶನೆ ।
ಅನ್ಯ ವಿಷಯವೊಂದನೊಲ್ಲೆ ಭಾರತೀಶನೆ ೫

## ೮೯

ನಮಿಸೊ ಗಂಧವಹಗೆ ಪ್ರತಿದಿನ ನಿನ್ನ ।
ಶ್ರಮವ ಕಳೆದು ಅಭೀಷ್ಟಿಯ ಕೊಡುವ ಮನುಜ ಪ

ಹರಿ ಕರುಣಿಸದಿರೆ ಗುರು ಕರುಣಿಸುವನು ।
ಗುರು ಕರುಣಿಸದಿರೆ ಹರಿ ಜರೆವ ॥
ಧರೆಯೊಳು ವಾತಪ್ರಸಾದ ಸಂಪಾದಿಸಿ ।
ಶಿರಿವಲ್ಲಭಗೆ ಬೇಕಾದವರ ಕೇಳು ಮನುಜ ೧

ಹನುಮನೊಲಿದನೆಂದು ಒಲಿದ ಸುಗ್ರೀವಗೆ ।
ಮನಸಿಜ ಪಿತನು ತನ್ನಯ ಚರಣ ।
ಘನವಾಹ ಸುತ ಭಜಿಸಿದರಿನ್ನವಗೆ ಪ್ರಭಂ ।
ಜನನೊಲಿಯದಕೆ ಕೊಂದನು ಕೇಳೆಲೊ ಮನುಜ ೨

ದುರ್ಜನಾಂತಕಗೆ ಬೇಕಾದ ಕಾರಣದಿಂದ ।
ಅರ್ಜುನಾದಿಗಳು ಸುಖವ ಬಿಟ್ಟರು ॥
ಅಬ್ಜಾಪ್ತಸುತ ಅಸಮರ್ಥನೆ ರಣದೊಳು ।
ನಿರ್ಜಿತನಾಗಲು ತಿಳಕೊ ಇದು ಮನುಜ ೩

ಸುರರೆಲ್ಲ ಕೂಡಿ ನ್ಯಾಯವ ಮಾಡಿ ನೋಡಲು ।
ಸರಿಯಾಗಲಿಲ್ಲವು ಮಾರುತಗೆ ॥
ಗಳವುದ್ಭವಿಸಲು ಮಥನ ಕಾಲದಿ ಆದಿತ್ಯರ ।
ಮೊರೆ ಕೇಳಿ ಪ್ರಾಶನ ಮಾಡಿದ ಮನುಜ ೪

ಶಮೆಯಲ್ಲಿ ದಮೆಯಲ್ಲಿ ಸರ್ವಗುಣದಲ್ಲಿ ।
ಪವಮಾನಗೆ ಸರಿಯುಂಟಾವನು ಜಗದಿ ॥
ಅಮಲ ಪ್ರಾಣೇಶ ವಿಠಲಗಲ್ಲದವನು ।
ಯಮ ಸದನಕೆ ಯೋಗ್ಯ ಯಮಗಲ್ಲೆಂಬ ಮನುಜ ೫

## ೯೦

ಶ್ರೀ ಭಾರತೀಶ ನಮೋ ನಮೋ ಬಿನ್ನಪವ ಕೇಳು ।
ನಾಭಿನಂದನ ಚರಣ ಸರಸೀರುಹ ಭೃಂಗ ನಮೋ ನಮೋ ಪ

ಸಂಕರ್ಷಣನ ತನಯ ಜಡಜಂಗಮದಿ ವ್ಯಾಪ್ತ ।
ಶಂಕರಾದಿ ಸಮಸ್ತ ಸುರವಂದಿತ ॥
ಕಿಂಕರರವನೋ ನಾನು ದಯದಿ ಕರಪಿಡಿದು ಭವ ।
ಪಂಕದೊಳಗಿಹನ ಕಡೆ ತೆಗೆಯೊ ಭಯ ಕಳಿಯೊ ೧

ನೀನಲ್ಲದಾರ ಸಲಹುವರ ಕಾಣೆನೋ ಜೀಯ ।
ಭಾನುನಂದನ ರಕ್ಷ ದುರುಳ ಶಿಕ್ಷ ॥
ಹೀನಮತಗಳ ಸೋಲಿಸಿದ ದಕ್ಷ ಸುರಪಕ್ಷ ।
ದೀನಜನ ಮಂದಾರ ಪವನ ಸುಕುಮಾರಾ ೨

ಪ್ರಾಣೇಶ ವಿಠಲನಿಚ್ಛಾನುಸಾರ ಧರೆಯೊಳು ।
ನೀನವತರಿಸಿ ಜಾತಿ ಧರ್ಮವನ್ನು ॥
ಜ್ಞಾನಿಗಳ ಸಮ್ಮತಾಹಂತೆ ಆಚರಿಸಿದೆಯೊ ।
ಮಾನಿ ಮೋಕ್ಷದನೆ ಆರೊಂದು ಸುರವಂದ್ಯ ೩

## ೯೧

ನಮೋ ನಮೋ ಶ್ರೀ ಭೀಮ । ನಮೋ ನಮೋ ಜಿತಕಾಮ ।
ಕಮಲಾಕ್ಷ ದಾಸ । ಮೊರೆಯಬ್ಜಾಪ್ತ ಭಾಸ ಪ

ಘನ ಗಿರಿಯೊಳಗೆ ಕುಂತಿ ನಿನ್ನೆತ್ತಿಕೊಂಡಿರಲು ।
ಧ್ವನಿ ಮಾಡೆ ಹುಲಿ ತಾಯಿ ನಡುಗಿ ಬಿಸುಟೀ ॥
ತನುವು ನಿನ್ನದು ಸೋಂಕೆ ನಗವೊಡೆದು ಶತಶೃಂಗ- ।
ವೆನಿಸಿಕೊಂಡಿತೋ ದ್ವಾಪರದಿ ಬಲವಂತ ೧

ಲೋಕದೊಳು ಮನುಜರಾ ಶಿಶುಗಳಂದದಿ ಬೆಳೆದು ।
ಪಾಕಶಾಸನಿ ಯಮಜ ಯಮಳರ ಜನನೀ ।
ಯಾ ಕೂಡಿಕೊಂಡು ಇಭಪುರಿಗೈದಿ ಮೋದದಲಿ ।
ಸಾಕಿಕೊಂಡೆಯಂಬಿಕೆಯ ಮಗನಿಂದಾ ೨

ಚಿಕ್ಕವರೊಡನೆ ಚಂಡು ಬುಗುರಿ ಈಸಿರೆ ಓಟ ।
ತೆಕ್ಕೆ ಮುಷ್ಟಿ ಮರಗಳನೇರುವಲ್ಲಿ ॥
ಸೊಕ್ಕಿದವನಿವನೆಂದು ಆವಾಗಲೆಲ್ಲರಿಗೆ ।
ಬಿಕ್ಕಿ ಬಾಯ್ದೆರೆವಂತೆ ಮಾಡಿ ತೋರಿಸಿದೆ ೩

ಅಹಿತರಾದವರು ನೀರೊಳಗೆ ಕೆಡಹಲು ಎದ್ದೆ ।
ಅಹಿಗಳಿಂ ಕಟ್ಟಿಸಲು ನೋಯದಿದ್ದೆ ॥
ಸಹಿಸದಲೇ ವಿಷಹಾಕಿ ಬದುಕಲ್ಕೆ ಹೊರಘಾಕೆ ।
ಮಹಮೋಸ ಮಾಡೆ ಗೆದ್ದು ಧರಿಯೊಳು ಮೆರೆದೆ ೪

ಸೋಕಿಯಸುರಿಯ ಮಗನ ಪಡೆದು ಖಲನನು ತರಿದು ।
ಏಕಚಕ್ರ ನಗರದಲ್ಲಿದ್ದು ।
ಬೇಕೆಂದು ನೀನಾಗಿ ಪೋಗಿ ಬಕನನು ಕೊಂದೆ ।
ಈ ಕುಂಭಿಣೀಯೊಳು ನಿನಗಿದಿರಾರು ದೇವಾ ೫

ಪಾಂಚಾಲಿಯನು ಗಳಿಸೆ ಕೋಪದಿಂ ಬಂದ ಹರಿ ।
ವಂಚಕರ ದರ್ಪವ ಭಂಗಿಸಿ ಲೀಲೆಯಿಂ ।
ಮಿಂಚುವಾ ಗದೆಲಿಹ ನಿಶ್ಚಿಂತ ಬಲವಂತ ।
ಮುಂಚಿನಜ ಪ್ರಣತ ಸುರಭೂಜ ರವಿತೇಜ ೬

ಈ ಪರಿಯಿಂದ ಕೆಲಕಾಲವಲ್ಲೆಲ್ಲ ।
ಕಾಪಾಡಿ ವಜ್ರಿಪ್ರಸ್ಥಕ್ಕೈ ತಂದು ॥
ಪಾಪಿ ಜರಿಜನ ಕೊಂದು ರಾಜಸೂಯವ ಮಾಡಿ ।
ನೀಂ ಪಾಲಿಸಿದೆಯವನಿ ಸದ್ಧರ್ಮದಿಂದ ೭

ದ್ಯೂತವಾಡಿದ ಸಮಯದಲ್ಲಿ ದ್ರೌಪದಿಯಳನು ।
ಪಾತಕಿ ವಸವೆಳೆಯೆ ಕೋಪದಿಂದ ॥
ಘಾತಿಸುವೆನೆಂದಬ್ಬರಿಸಿ ಪಲ್ಗಡಿದು ಲಕ್ಷ್ಮೀ ।
ನಾಥನಿಚ್ಛೆಂಗೆ ಈಗೇಂದು ಕೈಮರೆದೇ ೮

ತಮೋ ಯೋಗ್ಯನಾ ಪಾಪಪೂರ್ಣದಾಹದಕೆ ಬ- ।
ಹು ಮಿತಿಯಿಂದ ವನವಾಸ ಪತ್ಕರಿಸಿದೆ ॥
ಸಮರಾಂಗಣದೊಳಿವರ ಹೀಗೆ ಸವರುವೆನೆಂದು ।
ಸುಮನಸಾರಾಧ್ಯ ಬಾಹುಗಳೆತ್ತಿ ನಡೆದೆ ೯

ಕಾನನದಿ ಕಿರ್ಮೀರನಂ ಕೊಂದು ಋಷಿಯಿಂದ ।
ಮಾನವಂ ಕೈಕೊಂಡು ಮತ್ತೆ ಮುಂದೆ ॥
ಆ ನಗದಿ ಬಹುಕಾಲ ಸೇರಿಕೊಂಡಿದ್ದಂಥ ।
ದಾನವರ ಮಡುಹಿ ಸೌಗಂಧಿಕವ ತಂದೆ ೧೦

ನಿನ್ನೊಳಗೆ ನೀಂ ಲೀಲೆ ಮಾಡಿದ್ಯಾ ಸಮಯದಲಿ ।
ಚಿನ್ನದೋಪಮ ಪುಷ್ಪವೊಂದು ಬೀಳೆ ॥
ನಿನ್ನರಸಿಯಿದು ಎನಗೆ ಇಷ್ಟವೆನಲವಳ ನುಡಿ ।
ಮನ್ನಿಸುತೆ ಪೋಗಿ ಮಣಿಮಂತನೊಂಚಿಸಿದೆ ೧೧

ದ್ವೈತ ವನದೊಳು ಬಂದು ಮೃಗ ಬೇಟೆಯಾಡೆ ಪುರು ।
ಹೂತ ಪದವಾಳ್ದವನು ಮೆಯ್ಯ ಸುತ್ತಲ್ ॥
ನೀ ತವಕ ಬೀಳದೆ ಅವನ ಪುನೀತನ ಮಾಡಿ ।
ಖ್ಯಾತಿ ತಂದಿತ್ತೆಯಂತಕನ ಸುತಗಂದು ೧೨

ಮತ್ಸ್ಯ ದೇಶಾಧಿಪನ ಮನೆಯಲ್ಲಿ ಇದ್ದಾಗ ।
ಹೆಚ್ಚಿನಾ ಬಲದ ಮಲ್ಲನ ಕೆಡಹಿದೆ ॥
ಅಚ್ಚ ಪಾಪಾತ್ಮ ಕೀಚಕನನ್ವಯ ತಂದೆ ।
ಅಚ್ಯುತನ ನಿಜದಾಸ ಭಕ್ತರಘನಾಶ ೧೩

ಎಂಟೈದು ವರುಷ ಈ ರೀತಿಯಲಿ ಕಳೆದು ವೈ- ।
ಕುಂಠಪತಿ ದಯದಿಂದ ಉಪಪ್ಲಾವ್ಯದಿ ॥
ಗಂಟು ಹಾಕಿದಿ ದುರಾತ್ಮನ ಕೂಡ ಸಂಗರಕೆ ।
ಕಂಠೀರವರವದಿಂ ತಲೆದೂಗಿ ನಡೆದೆ ೧೪

ಮುತ್ತೆ ಭೀಷ್ಮಗೆ ವಂದು ಸ್ವಲ್ಪಮಾತ್ರಕೆ ಮಾನ ।
ವಿತ್ತಂತೆ ತೋರಿ ಎಲ್ಲರ ರಥವನೂ ।
ಕತ್ತರಿಸಿ ಹಿಂದಕ್ಕೋಡಿಸಿದೆ ನಿನ್ನಾರ್ಭಟಕೆ ।
ಹತ್ತು ದಿಕ್ಕಿನೊಳೊಬ್ಬರಿದಿರಾಗಲಿಲ್ಲ ೧೫

ಪ್ರಹ್ಲಾದನವತಾರ ಬಾಹ್ಲೀಕನನು ಗೆದ್ದು ।
ಮಹೀಜಸುತನಾನಿ ಮಸ್ತಕ ಶೀಳಿದೆ ॥
ಬಹು ಖೋಡಿ ಧಾರ್ತರಾಷ್ಟ್ರರ ಕೊಂದು ಹರೆಬಿಟ್ಟ ।
ಅಹಿಯಂತೆ ರಣರಂಗದಲ್ಲಿ ಸಂಚರಿಸಿದೆ ೧೬

ಕಡು ಕೋಪದಿಂದ ಹೂಂಕರಿಸಿಯುರಿಯುಗುಳುತಲಿ ।
ಪೊಡವಿ ನಡುಗಿಸಿ ನಭ ಬೇಯಿಸುತ್ತಲಿ ॥
ಪಿಡಿದು ದುಶ್ಯಾಸನನ ತೊಡೆಯಲ್ಲಿ ನೆರೆಗೆಡಹಿ ।
ಒಡಲ ಛೇದಿಸಿ ರಕ್ತಮಜ್ಜನವಗೈದೆ ೧೭

ಕರುಳ ದಂಡೆಯ ಮಾಡಿ ಅರಸಿ ಮಂಡೆಗೆ ಮುಡಿಸಿ ।
ಖರೆಯ ಮಾಡಿದೆ ಉಭಯತರ ಶಪಥವ ॥
ಕರೆದೆ ಕುರು ಪಾಂಡವರ ಬಿಡಿಸ ಬನ್ನಿರೆಂದು ।
ಮರುಳಗೊಂಡರೆಲ್ಲ ನಿನ್ನ ರೂಪ ನೋಡುತಲಿ ೧೮

ಸ್ವಾಮಿ ಪ್ರಾಣೇಶ ವಿಠಲನ ಆಜ್ಞೆಯ ವಹಿಸಿ ।
ಭೂಮಿ ಭಾರಿಳುಹುದಕೆ ಅವತರಿಸಿದೆ ॥
ನಾ ಮಾಡುವೆನೆ ಪೂರ್ತಿ ನಿನ್ನ ಮಹಿಮೆಯ ಸಮರ ।
ಭೀಮ ಕರ ಪಿಡಿದು ಸಲಹುವದೋ ಪ್ರತಿದಿನದಿ ೧೯

## ೯೨



ಅಂಜಿಕ್ಯಾತಕೆ ಮನವೇ ಅಂಜಿಕ್ಯಾತಕೇ ಪ

ಕಂಜಹರನ ಪಿತನ ಪಾದ ।
ಕಂಜ ನಿರತ ಭಜಿಸುತಿರಲು ||ಅ.ಪ||

ಎರಡು ಒಂದು ಕೋಟಿ ರೂಪ ।
ಧರಿಸಿ ರಕ್ಕಸರೊಳು ಕಾದಿ ॥
ಹರಿಯ ಕರುಣ ಗಳಿಸಿದವನ ।
ಚರಿತೆಗಳನು ಸ್ಮರಿಸುತಿರಲು ೧

ತಾಸಿಗೆಂಟು ಒಂದು ನೂರು ।
ಶ್ವಾಸ ಜಪವ ಮಾಡಿ ಜಂತು ॥
ರಾಶಿಗಳಿಗೆ ಸತತ ಬೇಡಿ ।
ದಾಸೆ ಪೂರ್ತಿಸುವವನಿರಲು ೨

ಜಂಗಮರಿಗೆ ಪಾಣಿ ಚರಣ ।
ಕಂಗಳು ಕಿವಿಯಾಡಿಸುತಲಿ ॥
ಪಿಂಗಳನಿಭ ಭಾರತೀಶ ।
ಹಿಂಗದನವರತ ಪೊರೆಯಲು ೩

ಪರಿಹರಿಸುತಲಗ್ನಿ ಭಯವ ।
ತ್ವರದಿ ಹಿಡಿಂಬ ಕೀಚಕ ಪ್ರಮು ।

ಖರನು ಕುರುಪತಿಯ ಕುಲವ
ತರಿದ ಕುಂತೀ ಕುವರನಿರಲು ೪

ಭುಜಕೆ ಗೋಪೀಚಂದನವನು ।
ವಿಜಯ ಚಕ್ರಗಳನು ಧರಿಸಿ ॥
ಕುಜನ ರಿಪು ಪ್ರಾಣೇಶ ವಿಠಲ ।
ಭಜಕನ ದಯ ಪೂರ್ಣವಿರಲು ೫

೯೩

ಮರುತ ದೇವರ ಹೊಂದಿರೋ ಮೂಜಗದ ।
ಗುರು ಮರುತ ದೇವರ ಹೊಂದಿರೋ ಪ

ಮರುತ ದೇವರ ಹೊಂದಿದವರ ಪಾಪವು ಪೋಗಿ ।
ಹರಿಮಂದಿರವನ್ನೈದುವದಕೆ ಸಂದೇಹವಿಲ್ಲ ॥ಅ. ಪ॥

ದಶರಥ ಸುತನಂಗನೆಯ ಕದ್ದೊಯ್ದಿರಲಾಗಿ ।
ದಶಕ ವಾನರ ಸ್ತೋಮ ರವಿಜನಾಜ್ಞಾ ॥
ದೇಶದಿಂದೆಲ್ಲರಾಶೆ ಭಯದಲಡಗಿ ರಕ್ಷಿಸೋ ।
ಶ್ವಸನಾ ಯೆನಲು ಪೋಗಿ ಶೀಘ್ರ ವಾರ್ತೆಯ ೧

ಕುರುಜನುಪಟಳಕೆ ಪಾರ್ಥಾರಳಲಿ ವನ ।
ಚರಿಸಲು ತವಕ ಬೀಳದೆ ಪ್ರಾಂತಕ್ಕೆ ॥
ದುರುಳರ ಸದೆದು ಭೂಭಾರವ ಕಳೆದು ಸಹೋದ- ।
ರರ ಪ್ರೀತಿಪಡಿಸಿ ಕೃಷ್ಣನ ದಯೆ ಪಡೆದ ೨

ಗುಣಪೂರ್ಣ ಅನಘ ಶ್ರೀ ಪ್ರಾಣೇಶ ವಿಠಲನ ನಿ- ।
ರ್ಗುಣನೆಂದು ಅಸುರರು ದುರ್ಮತ ಸ್ಥಾಪಿಸೆ ॥

ಘನಶಾಸ್ತ್ರ ವಿರಚಿಸಿ ಐಕ್ಯವ ಬಿಡಿಸಿ ಸ ।
ಜ್ಜನರ ಪೊರೆವ ಶ್ರೀ ಆನಂದ ಮುನಿಪರೆಂಬ ೩

## ೯೪

ಮುಖ್ಯ ಪ್ರಾಣನೆ ನಮ್ಮ ಮೂಲ ಗುರುವು ।
ರಕ್ಕಸಾಂತಕ ಶ್ರೀ ಭಾರತಿಯ ರಮಣನೆಂಬ ಪ

ಅಂಜನಾ ಸುತನಾಗಿ ದಶರಥ ಸುತನಂಘ್ರಿ ।
ಕಂಜ ಭಜಿಸಿ ರಾವಣಾದಿ ಖಳರಾ ॥
ಅಂಜಿಸಿ ಕಪಿಗಳು ಚೇತನ ಕೆಡಲಾಗ ।
ಸಂಜೀವನವ ತಂದು ಪ್ರಾಣವನುಳುಹಿದ ೧

ಹರಿಗೆ ದ್ವೇಷಿಗಳಾದ ಮಗಧಾದಿ ಕ್ಷಿತಿಪರ ।
ತರಿದು ದ್ರೌಪದಿಯಳ ಕರವ ಪಿಡಿದು ॥
ದುರುಳ ಕೌರವರನ್ನು ಅಳಿದು ದ್ವಾಪರ ಕೊಟ್ಟಾ ।
ಗರಳ ಭೋಜನ ಮಾಡಿ ವೃಕೋದರನೆನಿಸಿದಾ ೨

ವಿಷಯಂಗಳ ತೊರೆದು ಕಾಷಾಯಾಂಬರ ಧರಿಸಿ ।
ವಸುಧೆಯೊಳಗೆ ದುರ್ಮತವ ಸೋಲಿಸಿ ॥
ಅಸಮ ಶ್ರೀ ಪ್ರಾಣೇಶ ವಿಠ್ಠಲ ಪರದೈವವೆಂದು ।
ಹಸನಾಗಿ ತಿಳಿಸಿದ ಶ್ರೀ ಮಧ್ವಮುನಿಯೆಂಬ ೩

## ೯೫

ಶ್ರೀವಾಯುದೇವರಿಗೆ ನೀತವಾದ ।
ಮೂವತ್ತೆರಡು ಸುಲಕ್ಷಣಗಳನು ವರ್ಣಿಸುವೆ ಪ

ತಾಲು ಜಾನುಗಳು ಸ್ತನ ತುದಿಯು ನಾಸಿಕ ಚಕ್ಷು ।
ನಾಲಕ್ಕೊಂದು ದೀರ್ಘ ಜಂಘ ಗ್ರೀವ ॥
ಆಲಿಂಗ ಪೃಷ್ಠ ನಾಲ್ಕು ಹೃಸ್ವ ಕೇಶರದ ।
ಮೇಲಾದ ತ್ವಕು ಬೆರಳು ನಖ ಪಂಚ ಸೂಕ್ಷ್ಮ ೧

ಕಕ್ಷಿ ಕುಕ್ಷಿಯು ವಕ್ಷ ಕರ್ಣ ನಖ ಸ್ಕಂದಾರು ।
ರಕ್ಷಘ್ನನಿಗೆ ಶೋಭಿಪವು ಉನ್ನತ ॥
ಅಕ್ಷಿ ಚರಣ ಕರ ನಖ ಅಧರ ಜಿಪ್ವೇಣು ಜಿಹ್ವೆ ।
ಮೋಕ್ಷದನ ಈ ಏಳು ಅವಯವವು ರಕ್ತ ೨

ಸತ್ವ ನಾಭಿಯು ಸ್ವರವು ಈ ಮೂರು ಗಂಭೀರ ।
ಉತ್ತಮ ಲಲಾಟ ಉರದ್ವಯ ವಿಸ್ತಾರಾ ॥
ಸತ್ಯ ಸಂಕಲ್ಪ ಶ್ರೀ ಪ್ರಾಣೇಶ ವಿಠಲನ ।
ಭೃತ್ಯೋತ್ತಮಗೆ ತಕ್ಕುವಿವಾರಿಗಿಲ್ಲ ೩

## ೯೬

ತಿಂಗಳಿಗೆ ತಿಂಗಳಿಗೆ ಬರುತಿಹ । ಪಿಂಗಳರ ನಾಮವನು ಬರೆವೆನು ।
ಇಂಗಿತಜ್ಞರು ಕೇಳ್ವುದು ಉದಾಶನವ ಮಾಡದಲೆ ಪ

ಧಾತ ಚೈತ್ರಕೆ ಆರ್ಯಮಾಯೆಂಬಾತ ವೈಶಾಖಕೆ ಸುಜೇಷ್ಠಕೆ ।
ನಾಥನೆನಿಸುವ ಮಿತ್ರ ಆಷಾಢಕ್ಕೆ ಬಹ ವರುಣ ॥
ಖ್ಯಾತನಾಗಿಹ ಶ್ರಾವಣಕೆ ಪುರುಹೂತ ಭಾದ್ರಪದಕೆ ವಿವಸ್ವಾನೆ ।
ಭೂತಿಯುತನಾಗಿರುವ ತ್ವಷ್ಟಾಶ್ವೀನ ಮಾಸದಲಿ ೧

ಹರಿದಿನಪ ಕಾರ್ತೀಕ ಮಾಸದಿ ।
ಇರುತಿಹನು ಮಾರ್ಗಶಿರದಿ ಸವಿತೃ ।
ವರದ ಭಗ ಪುಷ್ಯದಲಿ ಪೂಷಾ ಮಾಘಮಾಸದಲಿ ॥
ಸುರನದಿಯೆ ಮೊದಲಾಗಿಹ ಐ ।

ವರಿಗೆ ಸಮುಪರ್ಜನ್ಯ ಫಾಲ್ಗುಣ ।
ಕರಿತು ಇಂತು ಯಥಾವಿಧಿಯೊಳರ್ಘ್ಯವನು ಕೊಟ್ಟು ಜಪವ ೨

ಮಾಡುತಿಹ ಧನ್ಯರಿಗೆ ಪಾಪಗ ।
ಳೋಡಿ ಸುತ ದಯದಿಂದ ಯೇನೇನೆ ।
ಬೇಡಿದಿಷ್ಟವ ಕೊಟ್ಟು ಕರ್ಮಕೆ ಸಾಕ್ಷಿ ತಾನಾಗಿ ॥
ಮಾಡುವನು ಸಂರಕ್ಷಣೆಯ ಒಡ । ನಾಡುವನು
ಬಿಡನೊಂದರೆಕ್ಷಣ । ಈಡು ಇಲ್ಲದ ಮಹಿಮ
ಶ್ರೀ ಪ್ರಾಣೇಶ ವಿಠಲನು ೩

## ೯೭

ಇಂದ್ರಸೇನ ನಾಥ ಹೋ, ತ್ರೈಲೋಕ್ಯ ವಿಖ್ಯಾತ ಹೋ ।
ಸವ್ಯಸಾಚಿ ಪ್ರೀತ ಹೋ ಮಧ್ಯಗೇಹ ಜಾತ ಹೋ ಪ

ತರಣಿ ಬಿಂಬಕೆ ಜಿಗಿದೆ ಗದೆಯನು ವಗೆದೆ
ಅಸುರಗ ಕರವನು ಮುಗಿದೆ ।
ಹರಿಗೆ ವಾರ್ತೆಯ ತಂದೆ ಜರಿಜನ ಕೊಂದೆ
ನೀಂ ಬದರಿಯೊಳ್ನಿಂದೆ ಖಳಕುಲ ।
ತರಿದೆ, ವಜ್ರ ಶರೀರ, ಧರಣಿಯ ಭಾರ
ವಿಳುಹಿದುದಾರಮತಿ, ಕಪಿ ।
ವರನೊಳತಿ ಕೃಪೆ ಮಾಡಿದೆ ದಾನವ ।
ಬೇಡಿದೆ ಸುಮತಿಯ ನೀಡಿದೆ ೧

ದಂಡ ಮೇಖಲ ಧಾರ ಕುಜನ ಕುಠಾರ ।
ಬ್ರಹ್ಮ ಶರೀರ ಜೈಸಿದೆ
ಮಂಡೋದರಿ ವಲ್ಲಭನ ಚರಿಸಿದೆಯೋ ವನ ।
ತಂದೆ ಮಾಧವನ ಉಡುಪಿಲಿ
ಚಂಡ ವಿಕ್ರಮ ರಾಮ ಸೇವಕ ಭೀಮ ।

ಸದಾಚಾರ ಧಾಮ ಯತಿ ಮೇ ।
ಷಾಂಡನ ಮೊರೆ ಕೇಳ್ದೆ ಕೀಚಕನನು ಸೀಳ್ದೆ ದ್ವಿಜಕುಲವಾಳ್ದೆ ೨

ಲಕುಮಿಗುಂಗುರವ ಕೊಟ್ಟೆ ರಣಕತಿ ಗಟ್ಟಿ
ಶಾಟಿಯನುಟ್ಟೆ ಶರಧಿಯ ತ ।
ವಕದಿ ಕ್ಷಣದೊಳು ಹಾರಿದೆ ಉಗ್ರವ ತೋರಿದೆ
ಜ್ಞಾನವ ಬೀರಿದೆ ಲಂಕೆಯ ।
ಸಕಲ ಸೌಖ್ಯವ ಕೆಡಿಸಿ ಪುಷ್ಪವ ಮುಡಿಸಿ
ಐಕ್ಯವ ಬಿಡಿಸಿ, ವಟುವಪು ।
ಮುಕುತಿ ಪತಿ ಪ್ರಾಣೇಶ ವಿಠಲನ
ದಾಸ ಸಲಹೋ ನಿರ್ದೋಷ ೩

## ೯೮

ಸಲಹೋ ಜಡಚೇತನ ನಿಲಯ ಶ್ರೀ ಹನುಮಂತ ।
ಕಲುಷ ವಿದೂರ ಶಾಂತ ಪ

ಕುಲಿಶ ಬಾಧೆಗೆ ನೀನೆ ಗತಿಯೆಂದು ಮರೆಹೊಕ್ಕೆ ।
ಕುಲಜ ಪಾಲಕ ಹರಿಕುಲಜ ದಯಾಂಬುಧೇ ಅ.ಪ.

ಕಂಜ ಚರಣ ಗದಾ ಕಂಜಧರನ ಪಾದ
ಕಂಜ ಮಧುಪ ಮುನಿಪ ।
ಕಂಜವದನ ನಭ ಕಂಜ ಸುರಪ ರವಿ
ಕಂಜ ವಿನುತ ವಿಜಿತ ॥
ಕಂಜಕೇತನ ಕಂಜಪಕ್ಷ ಖಳಸೂದನ
ಕಂಜನಾಶನ ಭಾವೀ ಕಂಜ ದಯಾಂಬುಧೇ ೧

ಕಾಲನೇಮಿಹನಿಚ್ಚೆ ಹೀಗೆಂದು ತಿಳಿದು ಆ
ಕಾಲಜನನುಸರಿಸಿ ।

ಕಾಲ ಕಳೆದು ವಿಪಿನಾಜ್ಞಾತವಾಸದಿ
ಕಾಲಾರಿ ಪಾಲಿಸಿದೆ ॥
ಕಾಲು ಪಿಡಿದವನ ಶಾಪವ ಕಳೆದೆ ಆವ ।
ಕಾಲಕು ನೀನೇ ಗತಿ ಜಗಕೆ ದಯಾಂಬುಧೇ ೨

ಪ್ರಾಣಾಪಾನ ವ್ಯಾನೋದಾನ ಸಮಾನ ಹೇ ಜಗ-
ತ್ಪ್ರಾಣ ಸಮೀರ ಜ್ಞಾನ ।
ಪ್ರಾಣಾಧಿಪೂರ್ಣಾಧಿ ಪ್ರಾಣ ನಂದನ ತಿರಸ್ಕೃತ
ಪಾಂಚಾಲಸುತಾ ॥
ಪ್ರಾಣದೊಡೆಯ ನೀನೊಲಿಯದೆ ಎಂದಿಗೂ ।
ಪ್ರಾಣೇಶ ವಿಠಲನ ಕಾಣೆ ದಯಾಂಬುಧೆ ೩

## ೯೯

ಭಾರತೀ ರಮಣಾ ಪವಮಾನಾ ಜಗದೊಳು ಸುತ್ರಾಣ ।
ಘೋರ ದುರಿತಾರಣ್ಯ ದಹನ । ಮಾರ ಕದನ ಜಿತ
ವಾರವಾರಕೆ ಶ್ರೀ ನಾರಾಯಣನ ಪದ ಆರಾಧನೆ ಕೊಡು ಪ

ಮೃಗಣ್ಣಪದವಾಳ್ದವಾತ । ಲೋಕ ವಿಖ್ಯಾತ ।
ನಾಗಜನಕ ಭಜಕ ಪ್ರೀತ ॥
ಯೋಗೇಶ ಜಡಜಂಗಮ ವಿತತ । ಅದ್ಭುತ ಚರಿತ ।
ಬಾಗುವೆ ಲಾಲಿಸೋ ಮಾತ ॥
ಹೋಗುತಲಿದೆ ಹೊತ್ತೀಗಲೆ । ತವಕದಲಿ
ಭಾಗವತರೊಳಗೆ ॥
ಭಾಗೀರಥೀ ಪಿತನಾ ಗುಣ ಪೊಗಳಿಸೊ । ಜಾಗು ಮಾಡದಲೆ ।
ನಾಗಾದಿ ರೂಪನೆ ಗರುಡಾರ್ಚಿತ ೧

ಗೀರ್ವಾಣ ವಂದ್ಯ ಹರಿದಶ್ವ । ತೇಜ ಪೃಷದಶ್ವ ।
ದೂರ್ವಾಸಾರ್ಚಿತ ಮಾತರಿಶ್ವ ॥

ಪಾರ್ವತೀಪತಿ ವಂದ್ಯ । ದುಸ್ಸ್ವಭಾವಗತ ನಭ ಸ್ವ ।
ತ್ಪೂರ್ವಿಕಾ ದೇವ ಹಂಸಾಶ್ವ ॥
ತೋರ್ವುದು ಜ್ಞಾನವ । ಬೀರ್ವುದು ಕರುಣವ ।
ಪೂರ್ವದೇವ ಸಾರ್ವೆ ನಿನ್ನನು ಯನ್ನ ॥
ಚಾರ್ವಾಕ ಮತಿಯನು । ಬೇರೂರೆ ಸಳಿಯಾಲು ।
ಉರ್ವಿಯೊಳಗೆ ಮತ್ತೋರ್ವರ ಕಾಣೆ ೨

ತ್ರಿಗುಣ ವರ್ಜಿತ । ಪ್ರಾಣೇಶ ವಿಠಲನ ದಾಸ ।
ನಗಪಾಲಾ ಕೊಡು ಯನಗೆ ಲೇಸ ॥
ಅಗಣಿತ ಮಹಿಮನೆ । ಕಾಷಾಯ ವಸನ ಭೂಷ ।
ನಿಗಮವೇದ್ಯನೆ ನಿರ್ದೋಷ ॥
ನಗ ಸ್ತೋಮಗಳಿಗೆ । ಪಗೆಯಾಗಿರ್ಪನ ।
ಮಗನ ಧ್ವಜದಿ ನಿಂದಿ ಗಡಕುರುಜರೆದೆ ॥
ಭುಗಿಲೆಂಬುವ ತೆರ ಮೃಗಧ್ವನಿ ಮಾಡಿದನಘ ।
ಪೊರೆವುದು ಕರವ ಮುಗಿವೆ ಚರಣಕೆ ೩

## ೧೦೦

ಹೇ ದಯಾಬ್ಧೇ ಪಾಲಿಸೆನ್ನನು । ಶ್ರೀದ ಹನುಮಂತ ಪ

ಭೂಧವಜ ನದಿಯಲ್ಲಿ ನಿಂತಾ ಕಾಳೀಕಾಂತ ವೀತಚಿಂತಾ ಅ.ಪ.

ರಾವಣಾನುಜನಂತೆ ಮತ್ತಾ ಶೈಲಸುತನಂತೆ ।
ದೇವತೆಗಳೀಶನಂತೆ ದೇವತೆಗಳಂತೆ ॥
ಆವ ವಿಕ್ರಮ ಪಾರ್ಥನಂತೆ ಕಾದಿ ಬಿದ್ದಾ ಕಪಿಕುಲದಂತೆ ।
ತಾವರೆಯ ಸಖ ಸೂರ್ಯನಂತೆ ತತ್ಸುತ ಸುಗ್ರೀವನಂತೆ ೧

ಭೂವರಾಧಿಪ ಧರ್ಮನಂತೆ ದ್ರೌಪದಿಯಂತೆ ।
ಭೂವಿ ಬುಧಸುತನಂತೆ ರಾಕ್ಷಸಿಯಂತೆ ಫಣಿಯಂತೆ ॥

ಆ ವಿರಾಟರಾಯನಂತೆ ಪಾರ್ವತಿಯ ನಾಥನಂತೆ ।
ನೀ ವಿಜಯನಾಗಲು ಸಹಿಸದಲೆ ಕೋಪಿಸಿದ ಧೃತರಾಷ್ಟ್ರನಂತೆ ॥

ಮೋದದಿಂದ ನಿನ್ನ ಪಡೆದಾ ಮಧ್ಯಗೃಹನಂತೆ ।
ಆದರದಿ ಹರಿಪೂಜೆ ಮಾಳ್ಪಾ ಸೂರಿ ಜನರಂತೆ ॥
ಆ ದಿನ ಕಡಲಲ್ಲಿ ಮುಳುಗಿ ಪೋಗುತ್ತಿದ್ದಾ ನಾವೆಯಂತೆ ।
ಪಾದ ಹಿಡಿದಾ ಕಾಳೀಸರ್ಪನ ಕಾಯ್ದ ಪ್ರಾಣೇಶ ವಿಠ್ಠಲನಂತೆ ೩

## ೧೦೧

ಗುರುವೆ ಭಾರತಿನಾಥ । ಶರಣು ಲಾಲಿಸೋ ಮಾತ ।
ಹರಿ ಪದಾರ್ಚನೆ ಕೊಟ್ಟು ಪೊರೆಯೋ ದಯೆಯಿಟ್ಟು ಪ

ರಾಮ ಸೇವಕನಾಗಿ ವಾನರ ಕಟಕ ನೆರಹಿ ।
ನೀಂ ಮುದದಿ ಲವಣಾಬ್ಧಿ ದಾಟಿ ಪೋಗಿ ॥
ಭೂಮಿ ತನುಜೆಳಿಗೆ ವಾರ್ತೆಯನೆ ಪೇಳಿ । ರಾಗಟಿಯ
ಸ್ವಾಮಿಗರ್ಪಿಸಿದ ಬಲವಂತ ಹನುಮಂತ ೧

ರಾಜಸೂಯವ ಮಾಡುವದಕೆ ಮಾಗಧನ ಕೊಂದೆ ।
ಮಾಜಿಸಿದೆ ಕುರುಪತಿಯ ಸಂತತಿಯನು ॥
ಸೋಜಿಗವು ನಿನ್ನ ಲೀಲೆಯು ಆಯುಜಾತ ಬಿ ।
ಡೌಜ ರಕ್ಷಕ ದ್ರೌಪದೀಶ ಬಲವಂತ .೨

ಬುಧ ಮಧ್ಯಗೇಹನಲಿ ಅವತರಿಸಿ ಕುಮತಗಳ ।
ಬೆದರಿಸಿ ತ್ರಿದಶ ಸಪ್ತ ಗ್ರಂಥ ಮಾಡಿ ॥
ಸುದಯದಿಂದುತ್ತಮರಿಗಿತ್ತು ಮತವನು ನಿಲಿಸಿ ।
ಬದರಿಯೋಳ್ ಪ್ರಾಣೇಶ ವಿಠಲನಲ್ಲಿರುವೆ ೩

## ೧೦೨

ಪವಮಾನ ರಾಯಾ ಪಾವನ ಕಾಯಾ । ಕಾಯೋ
ದಿವಿಷತ್ಪೂಜಿತ ಕವಿಜನ ಗೇಯ ಪ

ಭಕ್ತವತ್ಸಲ ದೇವ ರವಿತೇಜ । ಸರ್ವೋ–
ದ್ರಕ್ತ ಪ್ರಣತ ಜನ ಸುರ ಭೂಜ ॥
ಶಕ್ತ ಲೋಕೈಕ ಅನಂತಜ । ಭುಕ್ತಿ
ಮುಕ್ತಿದ ದಿತಿಜಾಹಿ ದ್ವಿಜರಾಜ ೧

ದುರಿತಾಂಬುಧಿ ಘಾಗಜ ಕಾಳೀಶ । ಸರ್ವ
ಸುರವಂದ್ಯ ಪದಕಂಜ ನಿರ್ದೋಷಾ ॥
ಪುರ ರಿಪು ಪಿತ ಪಯೋಧರ ಭಾಸ । ಸಾರೆ–
ಗರೆದು ಪೂರ್ತಿಸೊ ಯನ್ನ ಅಭಿಲಾಷಾ ೨

ಪೌಲಸ್ತ್ಯಾನುಜ ಮಾತ ರಜ ರಕ್ಷ । ಶ್ರೀ ಗೋ–
ಪಾಲನವನೆನೀಸುವದುಪೇಕ್ಷ ॥
ನೀಲೇಶ ತ(?)ಮಾಡದೆ ತಾ ರಕ್ಷ । ವಂದ್ಯ
ಕಾಲಿಗೆರಗುವೆ ದುರ್ಜನ ಶಿಕ್ಷ ೩

ಮಧುಸಖ ಪಾಲಾನುಜ ಪಾದಾರವಿಂದ ।
ಮಧುಕರ ದಂಡ ಮೇಖಲ ಧಾರ ॥
ವಿದುರಾಗ್ರಜ ನಂದನ ಸಂಸಾರಾರಣ್ಯ ।
ಸುಧನಂಜಯ ವೃಕೋದರ ಸಮೀರ ೪

ಕುಟಿಲರಹಿತ ಋಜುಗಣಾಧೀಶ । ಶ್ರೀ ಧೂ–
ರ್ಜಟಿವಂದ್ಯ ಭಕ್ತಿಯಿಂ ಪ್ರಾಣೇಶ ॥
ವಿಠಲನ್ನ ಭಜಿಸುತ್ತ ಸದ್ಭಾಷ್ಯವನ್ನು ।
ಪಠನೆ ಮಾಡಿಸೊ ದಯದಿಂದ ನಿಶಾ ೫

## ೧೦೩

ಪೃಕ್ಷದಶ್ವ ಪಾಲಿಪುದೆನ್ನ ಈ ದು ।
ರ್ವಿಷಯ ತ್ಯಜಿಸಿ ಶ್ರೀ ಕೃಷ್ಣನ್ನ ॥
ಅಸಮ ಪಾದಾಬ್ಜ ಭಜಿಸುವಂತೆ ಪ್ರತಿದಿನ ।
ಹಸನಾದ ಜ್ಞಾನ ಪ್ರೇರಿಸೊ ಭಕ್ತ ಸುರತರು ಪ

ಪರಿಸರ ಕೃಷ್ಣೇಶ ಗಂಧ ವಹ
ಸಿರಿವಲ್ಲಭ ಪದಾರವಿಂದ ಭೃಂಗ ।
ಪುರುಹೂತ ಮುಖ ಸುರವೃಂದ ವಂದ್ಯ ।
ಗಿರಿಜಾ ಪಾಲಕ ಶತಾನಂದ ॥ಆಹಾ॥
ಎರಡು ಹತ್ತೊಂದು ಸಾವಿರದಾರುನೂರ್ಜಪ
ಸರುವ ಜೀವರೊಳಗೆ ಇರುಳು ಹಗಲು ಮಾಳ್ಪ ೧

ನಾಗಾದಿ ದಶರೂಪ ಧರ ತಲೆ
ಬಾಗುವೆ ನಿನಗೆ ಉದಾರ ವಿಕ್ರ-
ಮಾಘ ಕಾನನ ವೈಶ್ವಾನರ, ಹೇ ಸ-
ದಾಗತಿ ಕುಜನ ಕುಠಾರಾ ॥ಆಹಾ॥
ಮಾಗಧ ರಿಪು ಹೊತ್ತು ಹೋಗುತಲಿದೆ ಈಗ ।
ಭಾಗವತರ ಸಂಗ ಜಾಗು ಮಾಡದಲೀಯೋ ೨

ದೀನವತ್ಸಲ ಶ್ರೀ ಮಾರುತ ಯಾತು
ಧಾನ ಸಂಹರನೆ ಹೇ ಮಾತರಿಶ್ವ ।
ಪ್ರಾಣೇಶ ವಿಠಲನ ದೂತ ಚತು-
ರಾನನ ಪದಯೋಗ್ಯ ವಾತ ॥ಆಹಾ॥
ಕ್ಷೋಣಿಯೊಳೆನ್ನಂಥ ಹೀನರಿಲ್ಲವೊ ಪಾಪ ।
ಕ್ಷೀಣಿಸಿ ಸಲಹೋ ಸುಶೇಣಾದಿಸೂದನ ೩

## ೧೦೪

ನೀನಲ್ಲದನ್ಯರೆ ಸಲಹಲು ಕಾಯೊ ।
ಜಾನಕೀಪತಿ ದೂತ ಹನುಮಂತ ಪ

ಗುರುವೆ ನಿನ್ನಯ ಪಾದ ಭಜಿಸುವರನ್ನ ।
ಧರೆಯೊಳು ಬನ್ನಬಡಿಸುವ್ರೋರೆ ॥
ಗಿರಿಸುತ ನೀ ಗತಿಯೆನಲಾಗ ಬೇಗ ।
ಪೊರೆದೆಯಾತನ ಜಲಧಿಯೊಳಿಟ್ಟು ೧

ರವಿಜ ಶಕ್ರಜನಿಂದ ಬಳಲುತ ಬಂದು ।
ಪವನ ಪಾಲಿಪುದೆನ್ನಲಾಕ್ಷಣ ॥
ಭುವನೇಶನಿಂದ ವಾಲಿ ಕೊಲ್ಲಿಸಿ ಕಾಳೀ ।
ಧವ ಸುಗ್ರೀವನ ಭಯ ಬಿಡಿಸಿದೆ ೨

ತಂದೆ ಪ್ರಾಣೇಶ ವಿಠ್ಠಲನಿಗೆ ನಿನಗಂ ।
ದುಂಟಿಂದಿಲ್ಲೇ ಈ ಮಹಿಮೆಯು ॥
ಬಂದ ದುರಿತ ನಿವಾರಣ ಮಾಡಿ ದಯ-
ದಿಂದ ಪಾಲಿಸೋ ನಿನ್ನ ದಾಸರ ೩

## ೧೦೫

ದೂರ ನೋಡುವುದುಚಿತವಲ್ಲವೋ
ವಾರವಾರಕೆ ಬಿಡದೆ ತುತಿಪೆ ।
ಮೀರಿದವನೆ ನಾ ನಿನಗೆ ಪವನ ಪ

ರಾಮಚಂದ್ರನ ಸೇವೆಯ ನಿ-
ಷ್ಕಾಮದಿಂದ ಮಾಡಿ ಬಹಳ ।

ತಾಮಸ ಜನಂಗಳ ತಂದೆ
ನೀಂ ಮಹಾ ಸಮರ್ಥನೆಂದೇ ॥
ನೀ ಮನೆಯಿಲ್ಲದವನು ಎಂದೆನೆ । ಕೋತಿರೂಪ
ಈ ಮುಖವು ಹೀಗೆ ಅಂದೆನೆ । ನಗವ ಪೊತ್ತಿ
ಭೂಮಿಯೊಳಗೆ ಕಠಿಣನೆಂದೆನೆ । ಹನುಮನೆ ೧

ಪೊಕ್ಕು ರಣಕೆ ಹೆಜ್ಜೆಯ ಹಿಂದಕೆ
ಯಿಕ್ಕದೆ ಭುಜವ ಚಪ್ಪರಿಸಲಾಗ ।
ನಕ್ಕವರ ಬಲ ಹುರಿದು ಹೋಯಿತು ।
ಅಕ್ಕಟಕ್ಕಟಾ ನೀ ವೀರನೆಂದೇ ॥
ರಕುತವ ಕುಡಿದ ನೀಚನೆಂದೆನೇ । ತಿಂದು ತಿಂದಿ
ರಕ್ಕಸಿಯನು ಕೂಡಿದನೆಂದೆನೇ । ಒಡಲ ಬಾಕ
ಸೊಕ್ಕು ನಿನಗೆ ಬಹಳವೆಂದೆನೇ । ಭೀಮನೇ ೨

ತಿಳಿದು ಪ್ರಾಣೇಶ ವಿಠಲನಿಚ್ಛೆ ।
ಇಳೆಯೊಳುದಿಸಿ ಹಲವು ಮತವ ॥
ನೆಲಕೆವೊರಿಸಿ ಮರುತ ಮತವ ।
ನಿಲ ಹಾಕಿದ ಗುರುಗಳೆಂದೇ ॥
ತುಳುವರಲ್ಲಿ ಪುಟ್ಟಿದೆಯೆಂದೆನೇ । ಬಹಳ ಗುಗ್ಗರಿ
ಮೆಲಿದ ಭೂತ ಮಗುವು ಎಂದೆನೇ । ಭಾರತೀಶ
ಸಲಹೋ ಬಿಡದತಿಮ್ಮನೆಂದರೆ । ಮಧ್ವನೇ ೩

## ೧೦೬

ಭಾರತೀರಮಣ ನಂಬಿದೆ ಪಾದವಾರಿಜಾ
ಕರುಣಾ ವಾರಿಧೆ ಯನ್ನನು ।
ದೂರ ನೋಡದೆ ನಿನ್ನ ಸಾರೆಗರೆದು
ಭಯ ನಿವಾರಿಸಿ ಸಲಹೋ ಪ

ನೀಲಲೋಹಿತನ ಪಿತನೇ ಗೋಪಾಲನ ಸುತಾ ।
ಕಾಳಕೂಟ ಪಾನಿ ವಿಶಾಲಾಂಬಕಾ ಮಾರರಿಂದ ॥
ವೇಳೆ ವೇಳೆಗಳಲ್ಲಿ ವೋಲಗವ ಕೈಕೊಂಬುವ ।
ಕಾಳೀವಲ್ಲಭ ಭೇಶ ಭಾಸ್ಕರರೋಲು ಸನ್ನಿಭ ॥
ಈ ಲೌಕಿಕ ನರರಾಲಯ ಕಾಯಿಸದೆ ।
ವಾಲಯ ಸುಮತಿಯ ಪಾಲಿಪುದೊಲಿದು ೧

ಜಾನಕೀಪತಿ ಸೇವೆ ಮಾಡಿದ್ಯೆ ಕಾಣೆನೋ ಪ್ರತಿ ।
ಯಾ ನಿನಗಾರಾರಾ ಭುವನದೊಳಗೆ ಗಂಧವಹನೆ ॥
ಮುದ್ರಿಯ ಕೊಂಡು ಕ್ಷಣದೊಳಗೆ ಜಲಧಿಯನ್ನೆ ಹಾರಿದೆ ।
ಸೀತೆಗುಂಗುರವನ್ನೆ ತೋರಿದೆ ॥
ಆ ನಗರವನು ದಹನಗ್ಯೆಸಿ ಬಹು ।
ದಾನವರನಳಿದು ದಶಾನನನೊದ್ದೆ ೨

ಪಾಪದೂರನೆ ವೃಕೋದರ ಶ್ರೀ ದ್ರೌಪದೀಶನೇ ।
ವಿಪಿನ ಚರಿಸಿ ಕುರುಪತಿಯ ತರಿದು ॥
ಕ್ಷಿತಿಪರನ್ನು ಬಿಡಿಸಿದೆಯ್ಯೆ ಪಾಂಡವರ (ಪರಿ) ಪಾಲಕ ।
ಕೋಪನಾಶನ ಉದ್ಧರಿಸೆನ್ನ ಚಾಪಭಂಜನ ॥
ಶ್ರೀಪತಿ ದ್ವಯ ಪದ ಆಪಜ ಭಜಿಸುವ ।
ನೇ ಪರಮೇಷ್ಟಿಯ ರೂಪ ಗುಣಾಢ್ಯ ೩

ದೇಶಿಕೋತ್ತಮ ಮಾರುತಿ ಇಂದಿರೇಶನ ಪ್ರೇಮ ।
ಸಂಪಾದಿಸಿಕೊಂಡತಿಶಯ ಭಕುತಿಯಿಂದಲೀ ಸಮೀಚೀನವಾಗಿ ॥
ತ್ರಿಂಶತಿ ಸಪ್ತ ಸಂಖ್ಯಾ ದರುಶನ ಗ್ರಂಥ ವಿರಚಿಸಿ ದು ।
ರ್ಭಾಷ್ಯವ ಸಂತರಾ ಸಲಹುವರನಾಭಾಸ ಮಾಡಿದೆ ॥
ವ್ಯಾಸಭಜಕ ನಿನ್ನ ದಾಸನೆನಿಸಿಕೊಳ್ಳೋ ೪

ಅಂಜನಾಸುತ ಪ್ರಾಣೇಶ ವಿಠಲನೆಂಜಲನೊಯ್ಯುತ ।
ಭುಂಜಿಸಿದಿಯಲೊ ನಿರಂಜನ ಕಪಿ ಪ್ರ- ॥
ಭಂಜನ ಕೊಡು ಕೃತಾಂಜಲಿಯಿಂ ಬೇಡುವೆ ।

ಕಂಜನಾಭನ ಸ್ಮರಣೆ ದಿವಾ ಸಂಜೆಯಲಿ ಘನ ॥
ಪುಂಜ ಸುಗುಣಮಣಿ ಮಂಜರಿ ಅರ್ಥ ಪ– ।
ರಂಜಳ ತಿಳಿಸೋ ಧನಂಜಯ ರಕ್ಷ ೫

## ೧೦೭

ಎತ್ತಾರೆ ಹಿಂದಿನ ಮಾತು । ಭಾರತೀಶ ನಿನ್ನ
ಭೃತ್ಯರು ತಮ್ಮನುವರಿತು । ನೀ ಸಲಹದಿದ್ದರೆ ಹೀಗೆಂದು ಪ

ಮೂಗು ಹಿಡಕೊಂಡು ಕುಳಿತಿದ್ದಿ ನೂರತೊಂಭತ್ತೆಂಟು ಕಲ್ಪ ।
ಆಗಲೊಬ್ಬರೂ ನಿನ್ನನಾರೆಂದು ಕೇಳಾರೋ ॥
ಈಗ ದೇವರ ದಯೆಯಿಂದ ಹದಿನಾಲ್ಕು ಲೋಕಕ್ಕೆ ಮಂತ್ರಿ ।
ಯಾಗಿ ಸಂತೋಷದಿಂದ ಮೇಲು ಮೆರೆವುದಕ್ಕೀ ಗರ್ವವೆಂದು ೧

ಊರ ಸೇರದಲೆ ಕಂಡ ಗಿಡದ ತೊಪ್ಪಲುಗಳ ತಿಂದು ।
ಅರಣ್ಯದೊಳು ಬಹುಕಾಲ ಬದುಕಿದ್ದು ಮತ್ತೂ ॥
ಶ್ರೀರಾಮನಾಳಾಗಿ ಶಿಲೆಯ ಪೊತ್ತುದು ಜಗವೆಲ್ಲಾ ಬಲ್ಲದು ಮುಂದೆ ।
ವಾರಿಜಾಸನ ಪದವಿಯಾಳೆಂದು ಹರಿ ನುಡಿದುದಕೀಗರ್ವವೆಂದು ೨

ತಿರಿದುಂಡು ಹನ್ನೆರಡಬ್ದ ವನವಾಸ ಅಜ್ಞಾತವೊಂದು ।
ವರುಷ ಮತ್ಸ್ಯಾಧಿಪನಾಗಾರದಲಿ ಪಾಕ ಮಾಡಿ ॥
ತರುಣೀ ಮಾನಭಂಗವ ನೋಡಿ ಸುಮ್ಮನಿದ್ದೆಯಾಗ ಕೃಷ್ಣ ।
ತರಿದು ದುರ್ಯೋಧನರ ರಾಜ್ಯ ನಿಮಗಿತ್ತುದಕೀ ಗರ್ವವೆಂದು ೩

ಎಲ್ಲರೂ ಕಂಡದ್ದು ಹುರಳಿ ಗುಗ್ಗರಿ ತಿಂದು ಭಿಕ್ಷಾರ್ಥಿಯಾಗಿ ।
ಮುಳ್ಳು ಮರದಡಿಯಲ್ಲಿ ಕುಳಿತದ್ದು ಹಿರಿಬದರಿಯಲ್ಲಿ ॥
ಸುಳ್ಳಲ್ಲ ವೇದವ್ಯಾಸಾನಂತ ವೇದಾರ್ಥ ತಿಳಿಸಿ ಸಕಲ ।
ಬಲ್ಲವನೆಂದು ಪೆಸರೂ ಕೊಟ್ಟದೆವೇ ಈ ಗರ್ವವೆಂದು ೪

ಏನೆಂಬುವ ಸರ್ವರಲ್ಲಿ ಪೊಕ್ಕು ಬಳಕೆ ಮಾಡುತಿದ್ದಿ ।
ಹೀನರು ನಿನಗೀಸು ನೀರ ಹಾಕಂದು ಕೇಳಿ ॥
ಪ್ರಾಣೇಶ ವಿಠಲನ್ನ ಭಜಿಸಿ ಪೂರ್ಣ ದಯಕೆ ಪಾತ್ರನಾಗಿ ।
ಮೀನಾಂಕಾರಿ ಮುಖರಿಂದರ್ಚನೆಗೊಂಬಕ್ಕೀ ಗರ್ವವೆಂದು ೫

## ೧೦೮

ರಾಘವನಾಡಿದ ಮಾತಿಗಾಂಜನೇಯ ಬಿನ್ನವಿಸುವದು ।
ಈಗ ಪೇಳುವೆ ಸಜ್ಜನರಾಲಿಸುವದು ಪ

ಆ ರವಿನಂದನನು ತಾ ಮೇರೆ ಮಾಡಿ ಅಟ್ಟಿದನು ।
ವಾನರರುಗಳನು ತಿಂಗಳು ಮೀರಿತಿಂದಿಗೆ ॥
ಮಾರುತಿ ಕೇಳೀ ಮಾತು ಇನ್ನಾರ ಕಾಣೆ ಬಲ್ಲಿದರ ।
ನಾರಿಯೆಲ್ಲಿಹಳೋ ವಾರ್ತೆ ತಾರೋ ನೀ ಪೋಗಿ ೧

ಸ್ವಾಮಿ ಪಾಲಿಸೊ ಅಪ್ಪಣೆ ನಾ ಮುಂಚೆ ಪೋಗುವೆ ।
ತಡವ ಮಾಡದೆ ಎಲ್ಲೀಗೆನ್ನ ಭೂಮಿಜಾ ರಮಣ ॥
ಈ ಮುದ್ರೆ ಕೊಂಡು ಪೋಗೋ ಶಾಮಲಾಪತಿ ದಿಕ್ಕಿಗೆ ।
ಸಮುದ್ರ ದಾಟಿ ವೇಗ ಪಾವಮಾನಿ ಕೇಳೋ ೨

ಭೂತಲಾಕಾಶ ಲೋಕಾದಿ ಪಾತಾಳದೊಳಗಿರಲಿ ।
ನಾ ತರುವೇನು ವಾರ್ತೆ ಜಗನ್ನಾಥ ಪರಾಕು ॥
ಹೇ ತರಳ ತ್ರಿಲೋಕ ವಿಖ್ಯಾತನಾಗಿಹ ರಾವಣ ।
ಪಾತಕ ಕೊಂಡು ಪೋಗಿಹ ಸೀತೆಯ ಕೇಳು ೩

ಬುದ್ಧಿದೇವ ನೀ ಕೊಟ್ಟಂಥ ಬುದ್ಧಿಯಿಂದಲೇ ಅವನ ।
ಗುದ್ದಿ ಸರ್ವ ಬಲವನ್ನೂ ಒದ್ದು ಬರುವೆನೊ ॥
ಮುದ್ದು ಕಂದ ರಕ್ಕಸರವಧ್ಯರೋ ವರ ಪಡೆದು ।
ರುದ್ರನಿಂದ ಮಾಡದಿರೊ ಗದ್ದಲ ಕೇಳೋ ೪

ತಂದೆ ರಾಮಾ ನಿನ್ನ ದಯೆಯಿಂದ ಈಡಲ್ಲವೊ ಯನಗೆ ।
ನಂದಿಧ್ವಜಾ ಈ ರಕ್ಕಸರೊಂದು ತೃಣವೋ ॥
ಕಂದ ಈ ವೇಳೆಯೊಳೇನು ಬಂದುದನು ಭೋಗಿಸಿ ನಾನು ।
ಕೊಂದು ಹಾಕುವ ದಿನವೂ ಮುಂದುಂಟು ಕೇಳೋ ೫

ದೇವಿಯ ನೋಡಿ ಬರುವಾಗ ತಾವಂತು ಕೆಣಕಲು ದಾ- ।
ನವರು ಸುಮ್ಮನಿರಲೇನು ದೇವದೇವೇಶ ॥
ಕೋವಿದಾಗ್ರೇಶನೆ ನೀನು ಸಾವಿರಾಳಿಗೆ ಒಬ್ಬನೇ ।
ಆ ವಿಚಾರ ಮನಕೆ ತರುವದೇ ಕೇಳೋ ೬

ಹೇಳಿದ ಮಾತು ಕಟ್ಟಿದ ಕೂಳು ನಿಲ್ಲವೊ । ಆ ವನ-
ದೊಳೇನಹದೊ ಬಲ್ಲನೇ ಪ್ರಾಣೇಶ ವಿಠಲಾ ॥
ಬಾಲಕ ಹನುಮಂತ ನಿನ್ನೊಳಗೆನ್ನಾ ರಾಣಿಯಲ್ಲಿ- ।
ಹಳೋ ನೋಡಿ ಬರುವುದಕಾಲಸ್ಯ ಕೇಳೋ ೭

## ೧೦೯

ರಾಮ ರಾಮಾಯೆಂದು ಮಾರುತಿಯು ನಡೆದು ।
ಸೋಮವದನೆ ಜಾನಕಿಯನು ಹುಡುಕಾ ಪ

ಹರಿಯಿಂದ ಗುರುತು ಪಡೆದು ತನ್ನ ಶಿಖದಲಿ ।
ಧರಿಸಿಕೊಂಡತಿಶಯ ಭಕುತಿಯಲಿ ॥
ತೆರಳಿ ಮುಂದು ಮುಂದಕೆ ಕಡಲ ಸಮೀಪದಿ ವಾ- ।
ನರಾಧೀಶ ಮಾಡಿದ ವಾಸವನೂ ೧

ರವಿಜನ ಭಯದಿಂದ ಕಪಿಗಳೆ- ।
ಲ್ಲವು ಎದೆಯನೊಡೆದು ನಗದೊಳು ಕುಳಿತಿರಲು ॥
ಪವನಜನು ಬಂದು ವಿಚಾರವ ಮಾಡಲು ಸಾಗ- ।
ರವ ದಾಟಲೊಬ್ಬಗೊಶವಲ್ಲವೆಂದರೆಲ್ಲರಲ್ಲಿ ೨

ನಮ್ಮನು ರಕ್ಷಿಸೋ ಕುಲಮಣಿಯೆ ವಾಸುದೇವನ ।
ಮೊಮ್ಮಗನೆ ಎಂದು ಕಪಿಗಳು ಯಾಚಿಸೆ ॥
ಗಮ್ಮನೆ ಹಾರಿ ರಕ್ಕಸಿ ಹೊಟ್ಟೆಯ ಹೊಕ್ಕು ದಾಟಿ ಮತ್ತೇ ।
ಒಮ್ಮೆ ಒಬ್ಬಳನ್ನು ಸೀಳಿ ಪುರಪ್ರವೇಶ ಮಾಡಿದ ೩

ಗಿಡಗಿಡ ಚರಿಸುತ ಸ್ಥಳ ಸ್ಥಳದಲಿ ಬಲು ।
ಹುಡುಕುತ ಮೂಜಗ ಪೂಜಿತನ ॥
ಮಡದಿಯಾಕೃತಿಯನು ಕಾಣಲಾಕ್ಷಣದೊಳು ।
ತಡೆದನಲ್ಲಿಯೇ ಪದಗಳ ಮುಂದಕ್ಕಿಡದಲೇ ೪

ಋಷಿಗಳಂದದಿ ಪ್ರಾಣೇಶ ವಿಠಲನೆನ್ನುತಿರೆ ।
ಶಶಿಮುಖಿಯಳು ಆಂಜನೇಯ ಪದ ।
ಬಿಸಜಾಂಘ್ರಿಗಳಿಗೆರಗಿ ಜಯ ಜಯವೆಂದು ।
ಉಸಿರಿದ ರಘುಪತಿಯ ಸುದ್ದಿ ವಿಸ್ತರದಲಿ ೫

## ೧೧೦

ನಮೋ ನಮೋ ರಾಮ ಕಳುಹಿಸಿದನಮ್ಮಾ ।
ಮಮ ಸ್ವಾಮಿ ಬದುಕಿಹನೆ ಪೇಳೋ ತಮ್ಮ ಪ

ವಾಸುದೇವನು ಜಗದ ಸೃಜಿಸುವನು ಕೆಡಿಸುವನು ।
ನಾಶವೆಲ್ಲಿಹದು ರಘುವರ್ಯಗಮ್ಮಾ ॥
ವಾಸವಾಗಿರೆ ವನದಿ ಮೃಗ ತರಲು ಪೋಗಿ ಜಗ- ।
ದೀಶ ನುಡಿದನು ಕಡೆಯ ಮಾತು ತಮ್ಮ ೧

ಖಳ ಮಾಯೆಯಲಿ ಬರಲು ರಾಘವನು ಸಂಹರಿಸೆ ।
ನೆಲಕುರುಳಿ ಕೂಗಿದನು ಅವನೇ ಅಮ್ಮಾ ॥
ಬಲುವಿಂದ ಲಕ್ಷ್ಮಣನ ಬೈದು ಅಟ್ಟಿದೆ ನಾನು ।
ಜಲಜಾಕ್ಷನೋರ್ವನಿಹನೇನೋ ತಮ್ಮ ೨

ಅನುಜಯುಕ್ತದಿ ದೇವ ಕಪಿದಂಡು ನೆರಹಿಹನು ।
ಹನುಮಂತ ನಾ ರಾಮದೂತನಮ್ಮಾ ॥
ಇನಿತು ಸತ್ಯವೊ ಅನ್ಯತವೊ ನಂಬಿಗ್ಯಾಗದು ।
ಮನದ ಅನುಮಾನ ಬಿಡುವಂತೆ ಮಾಡೋ ತಮ್ಮ ೩

ಸಿರಿಕಾಂತ ಶ್ರೀಮಂತ ಕರುಣದಲಿ ಕೊಟ್ಟಿಹನು ।
ಗುರುತಿನುಂಗುರವನಿದು ನೋಡಿರಮ್ಮಾ ॥
ಪರಮಾತ್ಮನಿಗೆ ದೂತನಹುದು ಶುಭ ವಾರ್ತೆಗಳೆ ।
ಇರುವನೆಲ್ಲೆದು ವಿಸ್ತರಿಸೆಲೊ ತಮ್ಮಾ ೪

ಕಾನನದೆ ಚರಿಸುತ ರವಿಸುತಗೊಲಿದು ಶುಕ್ರಜನ ।
ಹಾನಿ ಮಾಡಿದನಲ್ಲೇ ಇರುವನಮ್ಮಾ ॥
ಜಾನಕಿಯೆಂದೆನ್ನನು ನಿತ್ಯದಲಿ ನೆನೆಸಿ ।
ಏನು ಮಾಡುವನೊ ಪೇಳುವದೋ ತಮ್ಮ ೫

ನಿನ್ನಗಲಿ ವ್ಯಾಕುಲದಿ ನರರಂತೆ ಕೇಶವನು ।
ಅನ್ನ ಉದಕವನೆಲ್ಲಾ ಜರಿದನಮ್ಮಾ ॥
ಪನ್ನಗಾರಿ ಧ್ವಜನು ದನುಜರ ಗೆಲಿದು ।
ಯನ್ನ ಕೂಡುವದು ನಾ ಕಾಣೆ ತಮ್ಮ ೬

ತಾಯೆ ರಾವಣನಳಿದು ನಾನೊಯ್ವೆ ನಿನ್ನೀಗ ।
ನೋಯಿಸದೆ ಹರಿಗೀಡು ಆವನಮ್ಮಾ ॥
ನಾಯಕನು ನೀಂ ಭೃತ್ಯರೊಳು ತ್ವರಿತ ಬಹುದೆಂದು ।
ಕಾಯಜ ಪಿತನಿಗೆ ಬಿನ್ನೈಸೊ ತಮ್ಮ ೭

ಪೋಗಿ ಬರುವೆನು ನಿಮ್ಮ ಗುರುತು ಏನಿದೆ ಕೊಟ್ಟು ।
ಬೇಗನಪ್ಪಣೆಯೆನಗೆ ಈವದಮ್ಮಾ ॥
ನಾಗಶಯನಗೆ ರಾಗಟೆಯನಿತ್ತು ಪದಕೆ ತಲೆ ।
ಬಾಗಿರುವಳೇಳದಲೆಯೆನ್ನೋ ತಮ್ಮ ೮

ನಳಿನಮುಖಿಯೆ ನಮೋ ನಮೋ ದಯೆಯಿರಲಿ ಸ್ವಲ್ಪ ದಿನ ।
ದೊಳಗೆ ಬರುವೆವು ಚಿಂತೆ ಬೇಡವಮ್ಮ ॥
ಭಳಿ ಭಳಿರೆ ಪ್ರಾಣೇಶ ವಿಠ್ಠಲನ ಪೂರ್ಣ ದಯೆ ।
ಗಳಿಸಿ ಅಜಪಟ್ಟವನು ಆಳೋ ತಮ್ಮ ೯

## ೧೧೧

ಹಾಳು ಮಾಡಿದ ಹನುಮ ಸಾಲು ವನಗಳ ।
ಧಾಳಿ ಕೊಟ್ಟನಿತರ ಜನಕೆ ।
ಕೇಳಲಿದನು ದನುಜನೆಂದು ಪ

ಚರರು ಪೇಳಲವನು ಖತಿಯ ।
ಲಿರುವ ದಳವ ಕಳುಹಲದನು ॥
ತರಿದ ಭಯವಬಡದೆ ಮುಂದಕೆ ।
ಚರಣವಿಡದೆ ಬಹು ಸಮರ್ಥ ೧

ಹರಿಜಿತ ಬಲು ಭರದಿ ಬರಲು ।
ಥರವು ಸಿಗುವದಿವನ ವಶಕೆ ॥
ಮೂರೇಳು ಮುಖನ ಕಾಂಬುವೆನೆನುತ ।
ಕರವ ಮರೆದ ಮರುತ ಕುವರ ೨

ದಾನವ ಪತಿಯಲ್ಲಿ ಪೋಗಿ ।
ಏನು ಯೋಚನೆಯನ್ನು ಮಾಡದೆ ॥
ತಾನು ಗಂಭೀರ ಸ್ವರದಿ ಪೇಳ್ದ ।
ಪ್ರಾಣೇಶ ವಿಠ್ಠಲನ ಮಹಾತ್ಮೆಯನ್ನು ೩

## ೧೧೨

ದಿತಿಜ ಕುಲ ತರಿಯ ಬಂದೆನೋ ನಿನ್ನ ವೈರಿ ರಘು ।
ಪತಿಯ ನಿಜದೂತ ನಾನೆ ॥
ಮತಿಹೀನ ಕಪಿ ನಿನ್ನ ಗುಣವ ತೋರಿದೆ ನಮ್ಮ ।
ಹತವ ಮಾಡುವನಾವನೋ । ಈಗ ಪ

ಅಬ್ಬರಿಸಿ ಮಾತನಾಡಿದ ನಿಂತು ಹನುಮಂತ ।
ಕೊಬ್ಬು ಸಲ್ಲದೊ ಅಸುರನೆ ಹಿಂದೆ ॥
ಇಬ್ಬರೂ ಸ್ವರ್ಣ ನಾಮಕರ ನೆಲಕೆ ।
ಹಬ್ಬಿದವನಾರೋ ಬಹು ಮಕರ ಬುದ್ಧಿ ।
ಹಬ್ಬಿತೇ ನಿನಗೆ । ವಿಧಿ ಶಿವಕರಾ ॥
ಅಬ್ಜ ಪೂಜಿತನು ನಿನ್ನ ಸೀಳುವಾಗಲಿ ವೀರ ।
ಬೊಬ್ಬೆಯಿಕ್ಕುವೆ ನಾನೆಲೊ ॥ ಮರುಳೇ ೧

ನಗೆ ಬರುವದಯ್ಯ ಕಪಿ ನಿನ್ನಿಂದ ।
ಹಗರಣದ ಮಾತುಗಳನು ಕೇಳಿ ॥
ಬಿಗವು ಹೇಳುವನು ನಾನಲ್ಲಾ ಮೂರು ।
ಜಗದಿ ಯನ್ನರಿಯದವರಿಲ್ಲಾ ಭಾಗ್ಯ ।
ಮಿಗಿಲಾಗಿ ಫಳಿಸಿಹೆನೋ ಬಲ್ಯಾ ॥
ನಗಜಾಧಿ ಪತಿಯಿಂದ ವರವ ಪಡೆದಿಹೆ ಒಬ್ಬರಿಗೆ ।
ಶಿಗಿನ್ಯೊ ಅರಿಕೆಯಿರಲೀ ಕಪಿಯೇ ೨

ಪುಸಿಯಲ್ಲವಿನಿತು ನೀನಾಡಿದುದು ರಾವಣನೆ ।
ವಸುಧಿಜೆಯ ಕೊಂಡು ಬರಲು ಬೆಂಕಿ ॥
ವಸನದೊಳಗಿಟ್ಟ ತೆರದಂತೇ ನೋಡು ।
ಪಶುಪತಿಯ ವರವು ಅದರಂತೇ ನಿನ್ನ ।
ದಶ ವದನಗಳು ಉಳಿಯದಂತೆ ॥
ದಶರಥನ ತನಯ ಸವರುವ ತಿಳಿದು ಬಿಟ್ಟುಕೊಡು ।
ಶಶಿಮುಖಿಯ ಬದುಕಿಕೊಳ್ಳೋ ಮರುಳೇ ೩

ಇನ್ನೊಂದು ಮಾತನಾಡಿದರಾಡೊ ತಾಳುವೆನೊ ।
ಚನ್ನೆ ಸೀತೆಯನು ಬಿಡೆನೋ ದಂಡು ॥
ಯನ್ನ ಮೇಲಿನಿತಿನ್ನು ಬರಲಿ ಸ್ವಲ್ಪ ।
ಖಿನ್ನನಾಗೆನೊ ತಿಳಿದು ಇರಲೀ ಇದಕೂ ।
ಘನ್ನತೆಯು ಬರಲೆನ್ನ ಹರಲೆ ।
ಸಣ್ಣ ಮನುಜರು ಹತ್ತು ಕೋಟಿ ಕೂಡಿದರೇನು ।
ಯನ್ನ ಸಮನಾಹರೇನೋ ಕಪಿಯೇ ೪

ಸೊಕ್ಕಿ ನುಡಿಯಲು ಬೇಡ ತಾಳಲಾರೆನೂ ಬಹಳ ।
ಕಕ್ಕಸವು ತುಂಬಿತೆನಗೆ ಮಣ್ಣು ॥
ಮುಕ್ಕಿಸುವೆ ಕುಂಭಿಣಿಗೆ ಕೆಡಹೀ । ಬಿಡದೆ
ರಕ್ಕುತವ ಸುರಿಸುವೆನೊ ಮಡುಹಿ । ಆಗ
ಚಿಕ್ಕ ನರಿಯಂತೆ ಬಾಯ್ದೆರೆವೆ ।
ಹೊಕ್ಕು ಲವಣ ಸಮುದ್ರ ಪಾತಾಳದೊಳಗಡಗೆ ।
ತೆಕ್ಕೆಯಲಿ ಪಿಡಿದು ತರುವೇ ಮರುಳೇ ೫

ಹತ್ತು ಶಿರಗಳೂ ವಿಂಶತಿ ಭುಜವು ಮನೆಯೊಳಗೆ ।
ಕತ್ತಿ ವಟ್ಟಿಹವು ಒಂದೂ ಗುಡ್ಡ ॥
ಸುತ್ತ ನೆರೆದಿಹ ಚರರ ಹಿಂಡಸುರರ ।
ನಿತ್ಯವಾಳುವೆ ನಾನು ಚಂಡ ನಮ್ಮ ॥
ವಿತ್ತ ತುಂಬಿಹುದೆಲ್ಲ ಕಂಡ್ಯಾ ।
ಎತ್ತ ಹೋಗಲು ಬೇಡ ಯನ್ನ ಬಳಿಯಲಿ ಸೇರು ।
ಉತ್ತಮಾನ್ನವ ಕೊಡುವೆನೋ ಕಪಿಯೇ ೬

ತೈಲವಿಲ್ಲದ ದೀಪದಾ ಬೆಳಕು ನಿಜವಲ್ಲ ।
ಕೇಳು ದನುಜನೆ ಸಾರುವೆನು ಕೂಗೀ ॥
ನಾಳೆ ಬರುವದು ನಮ್ಮ ದಂಡು । ಲಂಕೆ
ಹಾಳು ಮಾಡುವದು ನೀ ಕಂಡು ಕಂಡು ।
ಗೋಳನಾಡುವದು ಬಲು ಭಂಡೂ ॥

ವಾಲಿಯೆಂಬುವನು ಬಲು ಭಂಟ ನೀ ಬಲ್ಲೆ ಸಿರಿ ।
ಲೋಲ ಸಂಹಾರ ಮಾಡಿದಾ । ಮರುಳೇ ೭

ಅಡವಿಯೊಳು ಮನೆಮಾಡಿ ತಮ್ಮ ಬಿಲ್ಲ ತಾವ್ ಪೊತ್ತು ।
ಒಡಲ ಹಸಿವೆ ಈರ್ವರೂ ನಿರುತಾ ।
ಗಿಡಗಿಡವ ತಿರುಗುವುದು ಕಂಡೇ ಯನ್ನ
ಒಡನೆ ಪುಸಿಯೇಕವಗೆ ದಂಡೇ । ಇನ್ನು
ತಡೆಯೆ ಕೋಪವ ನಿನ್ನ ತುಂಡೇ
ಕಡಿದು ಶಿಕ್ಷಿಸುವೆ ಯನಗಭಿಮುಖನು ಆಗದಲೆ
ನಡೆಯೊ ನಿನ್ನ ಬಂದ ಕಡೆಗೆ । ಕಪಿಯೇ ೮




ಕೆಟ್ಟ ಜಾತಿಯೆ ಹರಿಗೆ ನಾಡುವರೆ ಇನಿತೆಂದು ।
ಮುಷ್ಟಿಯಲಿ ಅವನ ಎದೆಗೇ ಗುದ್ದೆ ॥
ಅಷ್ಟು ಮಾತ್ರಕೆ ಧರಣಿಗುರುಳೆ ರಕ್ತ ।
ಕಟ್ಟು ಇಲ್ಲದೆ ಸುರಿಯೆ ಅರಳೆಯಂತೆ
ನಷ್ಟವಾಗಲು ದೇಹ ಬಳಲಿ ॥
ಸಿಟ್ಟಿನಿಂದಲೆ ಎದ್ದು ಏನು ನೋಡುವಿರಿವನ ।
ಕಟ್ಟಿ ಕಿಚ್ಚನು ಬಾಲಕೇ । ಎಂದಾ ೯

ಪುಚ್ಛವನು ಪಿಡಿದು ಅಸುರರು ಸೀರೆಗಳ ಸುತ್ತೆ ।
ಹೆಚ್ಚಿಕೆ ಮುಂದಕೆ ಬೆಳೆಯಲೂ ಮಿಗಿಲು ॥
ತುಚ್ಛಗೈದರು ತಿಳಿಯಲಿಲ್ಲಾ ಬೆಂಕಿ ।
ಹಚ್ಚಲಿಕೆ ಪಟ್ಟಣವನೆಲ್ಲಾ । ಉರಿಯು
ಮುಚ್ಚಿಕೊಂಡಿತು ಮಡಿದರೆಲ್ಲ ॥
ಎಚ್ಚತ್ತು ಕೆಲವು ಜನ ಹಲವು ಕಡೆಯಲಿ ಪೋಗಿ
ಬಚ್ಚಿಟ್ಟುಕೊಂಡರು ಪ್ರಾಣಾ ೧೦

ಸ್ವಾಮಿ ಪ್ರಾಣೇಶ ವಿಠಲನ ಆಜ್ಞೆದಿಂ ಪೋಗಿ ।
ಭೂಮಿಜೆಯ ಗುರುತು ಕೊಂಡು ಖಳರಾ ॥
ಸ್ತೋಮವಧಿಶ್ಯಬ್ಧಿ ಹಾರಿದನು ಭಕ್ತ ।

ಪ್ರೇಮನಂಘ್ರಿಗಳಿಗೆರಗಿದನೂ ॥ ಅಲ್ಲಿ
ಯಾ ಮಾತನೆಲ್ಲ ಪೇಳಿದನು
ಭೂಮಿಯೊಳು ಯಂತ್ರವುದ್ಧಾರಕನು ಎನಿಸುವನು
ಈ ಮುನಿಪ ಮಧ್ವಾಚಾರ್ಯ ಆರ್ಯಾ ೧೧

## ೧೧೩

ಅಂಜಾನೆ ತನಯ ಧ । ನಂಜಾಯನಗ್ರಜ ॥
ಕಂಜಾಕ್ಷ ಶ್ರೀ ಮಧ್ವ । ಸಂಜಯವಂತಾ ೧

ಮಾರುತಿ ನಿನ್ನಯ । ಕೀರುತಿ ಜಗದೊಳು ॥
ಬೀರುತಿದ ಕೊ ನಾ । ಸಾರುತೀ ನೀಗಾ ೨

ರಾವಣಾನುಜ ಸು । ಗ್ರೀವಾ ವಿಪ್ರಜಾನಂತೆ ॥
ಭೂವರನಂತೆ ಕಾಯೋ । ದೇವೇಂದ್ರ ಪಾಲಾ ೩

ಪ್ರಸ್ತುತ ಬಿನ್ನಪ । ವಿಸ್ತರಿಪ ಕೃತಿ ಸ ॥
ಮಸ್ತರೂ ಕೇಳಲಿ । ಆಸ್ಥೀಯಲಿಂದಾ ೪

ಪ್ರಾಣೇಶ ವಿಠ್ಠಲಾ ಪ್ರೀ । ತಾನಾಗಬೇಕೀದಕೆ ॥
ಹೀನ ವಿಷಯಗಳಾ । ನಾನೊಲ್ಲೆ ದೇವ ೫

## ೧೧೪

ಭೀಮ ಶ್ಯಾಮ । ಕಾಮಿನಿಯಾದನೂ ಪ

ಹೆಂಗಳೆ ನೂತನ ಶ್ರೀಂಗಾರವಾದನು
ಉಂಗುರಗೂದಲೊಳಿಂಗಿಸಿ ರಾಗಟೆ ॥

ಹಿಂಗೂವ ತೆರ ಕಳಿಂಗನ ವೇಣಿಗೆ
ರಂಗನಿಕ್ಕಿದ ಚವುರಿಂಗೆ ಗೊಂಡೆಯೂ ॥
ತಿಂಗಳರ್ಧಾ ಫಣಿ ಮಂಗಾಳ ಕುಂಕುಮ
ಕಂಗಳಿಗೆ ಕಪ್ಪು ಭಂಗಾರದೋಲಿಯು ॥
ಜಂಗು ಬ್ಯಾಳೀ ಸರ ಅಂಗಾಜ ಸತಿಯ
ಭಂಗೀಪ ಚಲುವ ಅಂಗವಾದ ೧

ಏಕಾವಳಿ ಸರ ತೂಕದ ಸರಿಗೆ ।
ಲೋಕದೊಳಿಲ್ಲದ ಬೇಕಾದ ಭಾಪುರೆ ॥
ಹಾಕೀದ ಚಿತ್ರ ಕಂಚೂಕವ ಬಿಗಿದ–
ನೇಕ ಪರಿ ವಸ್ತವೂ ಕರಕೇ ॥
ಆ ಕಂಠೀರವನ ಸೋಲಿಪ ಕಟಿಪಟ್ಟಿ
ಸೋಕೆಯಿಳೀ ಸೀರಿ ಮೂಖ ಹರಿದ್ರ ನಾ– ।
ಸೀಕಾದಿ ಮೂಗುತಿಯು ಕಟ್ಟಿದಾ ಗಿಳಿ
ಯಾಕಾನಾ ಬಾವುಲಿಯೂ ಕಿವಿಗೇ ೨

ಉಲ್ಲುರುಳೀ ಪದದಲ್ಲಿ ಕಡಗಾವು
ಘಲ್ಲೆಂಬೊ ಗೆಜ್ಜಿಯ ಬಲ್ಲೀದ ಶಬ್ದವು ॥
ಎಲ್ಲೆಲ್ಲಿ ಜಗದೋಳಿಲ್ಲದ ಪರೀಯ
ಪಿಲ್ಯಾವನ್ನು ಬಟ್ಟಿನಲ್ಲಿಟ್ಟಾನೋ ॥
ಕೊಲ್ಲೂವೆನುವ ಆವಲ್ಲಿಹನೆನುತ
ಹಲ್ಲು ತಿನುತಾಲಿ ಸೊಲ್ಲು ಸೊಲ್ಲೀಗೆ ತಾ ।
ಕುಲ್ಲೂತ ಪಾತಕಿದ್ದಲ್ಲಿಗೆ ನಡೆದ
ನಿಲ್ಲಾದೆ ದನುಜ ದಲ್ಲಾಣನೂ ೩

(ಈ ಪದವನ್ನು ದಾಸರಾಯರ ಕೃತ ಭೀಮಸೇನ ವಿಲಾಸದಿಂದ ಸಂಗ್ರಹಿಸಿದೆ.)

# ಕಕ್ಷಾದೇವತೆಗಳ ಮನನ

## ೧೧೫

ಪ್ರಾಣ ಪಾಲೀಸಿಂದ್ರಾನ ರಾಣೀ ದಕ್ಷಾನಿರುದ್ಧಾ ।
ಮಾನಿನಿ ರತಿ ಮನು ಗುರು ವಾಯು ಕೋಲೆ ॥
ಮಾನಿನಿ ರತಿ ಮನು ಗುರು ವಾಯು ಯಮ ಸೋಮ ।
ಮಾನವಿ ಭಾಸ್ಕರಗೆರಗೂವೆ ಕೋಲೆ ೧

ವರುಣ ನಾರದ ವಹ್ನಿ ತರುಣಿ ಪ್ರಸೂತಿ ಭೃಗು ।
ಸರಸೀಜಾಸನನ ಪುತ್ರಗಾರೊಂದು ಕೋಲೆ ॥
ಸರಸೀಜಾಸನನ ಪುತ್ರರಾರೊಂದು ಮಂದಿಗಳ ।
ವರನಾಮ ವಿಸ್ತರಿಸಿ ವಂದಿಪೆ ಕೋಲೆ ೨

ಅಂಗೀರಾ ಪುಲಸ್ತ್ಯ ಅತ್ರಿ ಮಂಗಳಾಂಗ ಪುಲಹ ಕೃತು ।
ತುಂಗ ವಶಿಷ್ಠಿ ಮರೀಚಿಗೊಂದಿಪೆ ಕೋಲೆ ॥
ತುಂಗ ವಶಿಷ್ಠ ಮರೀಚಿ ವಿಶ್ವಾಮಿತ್ರನಿಗೆ ಮತ್ತಾ ।
ನಂಗ ಕಂಡ ವೈವಸ್ವತಗೊಂದಿಸುವೆ ಕೋಲೆ ೩

ನಿರರುತಿ ಪ್ರಾವಾಹಿ ಮಿತ್ರ ಗುರುಪತ್ನೀಗೆ ವಂದಿಸುವೆ ।
ಕರಿಮುಖ ವಿಶ್ವಕ್ಸೇನ ಪೌಲಸ್ತ್ಯ ಕೋಲೆ ॥
ಕರಿಮುಖ ವಿಶ್ವಕ್ಸೇನ ಪೌಲಸ್ತ್ಯ ಅಶ್ವಿನೀಗ ।
ಇರಳೂ ಹಗಲೂ ನಾ ಸ್ಮರಿಸೂವೆ ಕೋಲೆ ೪

ಮರುತೂ ನಾಲ್ವತ್ತೊಂಬತ್ತು ಗುರು ವಿಶ್ವೇದೇವ ಹತ್ತು ।
ಎರಡು ಅಶ್ವಿನೀ ರುದ್ರರ್‍ಹನ್ನೊಂದೂ ಕೊಲೆ ॥
ಎರಡು ಅಶ್ವಿನೀ ರುದ್ರರ್‍ಹನ್ನೊಂದೂ ವಸುಯಂಟು ।
ಎರಡಾರು ಸೂರ್ಯರಿಗೆರಗೂವೆ ಕೋಲೆ ೫

ಭಾರತೀ ಭರತಾಗೆ ಮೂರು ಪಿತೃಗಳಿಗೆ ।
ಧಾರೂಣೀ ಋಭುವೀಗೆರಗುವೆ ಕೋಲೆ ॥
ಧಾರೂಣೀ ಋಭುವೀಗೆರಗೂವೆ ತಿಳೀವದು ।
ನೂರು ಮಂದೆಂದೂ ಕರಸೋರು ಕೋಲೆ ೬

ಮೂರು ಮಂದೀ ಉಳಿದೂ ಈರೈದು ಒಂದು ಮನು ।
ಚಾರು ನಾಮಗಳ ವರ್ಣಿಪೆ ಕೋಲೆ ॥
ಚಾರು ನಾಮಗಳ ವರ್ಣಿಪೆ ದಯಮಾಡಿ ।
ಸೂರಿಗಳೆಲ್ಲಾ ಕೇಳ್ವೋದು ಕೋಲೆ ೭

ಸ್ವಾರೋಚೀಷೋತ್ತುಮಾನು ಶ್ರೀ ರೈವತ ಚಾಕ್ಷುಷಾ ।
ನಾರಾಯಣನ ದಾಸ ಸಾವರ್ಣಿ ದಕ್ಷಾ ಕೋಲೆ ॥
ನಾರಾಯಣನ ದಾಸ ಸಾವರ್ಣಿ ದಕ್ಷ ಬ್ರಹ್ಮ ।
ಮಾರಾರಿ ದೇವ ಧರ್ಮ ಇಂದ್ರ ಸಾವರ್ಣೀ ಕೋಲೆ ೮

ಎಂದಿವರೀಗೊಂದೀಸಿ ಮುಂದೆ ಚವನ ಋಷಿ ।
ನಂದಾನೋಚಿತ್ಥ, ಪಾವಕಾ, ಧೃವ, ನಹುಷ ಕೋಲೆ ॥
ನಂದಾನೋಚಿತ್ಥ ಪಾವಕ ಧೃವ ನಹುಷ ಶಶಿ ।
ಬಿಂದೂ ಪ್ರಹ್ಲಾದ ಪ್ರಿಯ ವೃತಗೊಂದಿಸುವೆ ಕೋಲೆ ೯

ಶಾಮಲಾ ಗಂಗಾ ಉಷಾ ಸೋಮರಾಣಿ ಸಂಜ್ಞಾ ।
ಧೀಮಂತ ಪರ್ಜನ್ಯಾಖ್ಯ ಸೂರ್ಯಗೆ ಕೋಲೆ ॥
ಧೀಮಂತ ಪರ್ಜನ್ಯಾಖ್ಯ ಸೂರ್ಯಗೆ ವಂದಿಸೀ ಅನ ।
ಭೀ ಮಾನೀ ಸೂರರನ್ನ ಮನದೊಳು ನೆನವೆನೆ ಕೋಲೆ ೧೦

ಅನಲರಸೀ ಬುಧ ಅಶ್ವಿನಿ ಭಾರ್ಯಾ ಛಾಯಾ ಪುತ್ರ ।
ಶನಿ ಪುಷ್ಕರಜಾನೂಜ ದೇವತಿಗಳಿಗೆ ಕೋಲೆ ॥
ಶನಿ ಪುಷ್ಕರಜಾನೂಜ ಮನ ದೇವತೆಗಳಿಗೊಂದಿಪೆ ಸು ।
ಪ್ರಾಣೇಶ ವಿಠಲಾನಲ್ಲಿರಲೆಂದು ಕೋಲೆ ೧೧

ಉರುವಸೀ ಮುಖ್ಯ ಅಪ್ಸರ ಸ್ತ್ರೀಯರೀಗೊಂದಿಸೀ ।
ಹರಿನಾರಿಯರ ಪಾದಕ್ಕೆರಗೂವೆ ಕೋಲೆ ॥
ಹರಿನಾರಿಯರ ಪಾದಕ್ಕೆರಗಿ ಪಿತೃಗಂಧರ್ವ ।
ನರನಾರ ಪತಿ ಮನುಷ್ಯೋತ್ತಮರಿಗೊಂದಿಸುವೆ ಕೋಲೆ ೧೨

ಈ ನಿರ್ಜರರ ಧ್ಯಾನವನ್ನು ಮಾಡುತ್ತಾ ।
ಪ್ರಾಣೇಶ ವಿಠಲನ ಆ ನಾಭಿಯಿಂದ ॥
ಪ್ರಾಣೇಶ ವಿಠಲನ ಆ ನಾಭಿಯಿಂದ ಬಂದ ।
ಜ್ಞಾನಿಗಳ ಸಂತತೀ ನಾ ವರ್ಣಿಸುವೆ ಕೋಲೆ ೧೩

## ನದೀದೇವತೆಗಳ ಸ್ತುತಿ

### ೧೧೬

ಸ್ಮರಿಸುವೆನನುದಿನ ಮುದದಿಂದ । ಈ
ಧರಿಯ ಮ್ಯಾಲುಳ್ಳ ಮಹಾ ನದಿಗಳ ಪ

ಗೌತಮನಘ ಪರಿಹಾರ ಮಾಡಿದ ಗೋದಾ ।
ಮಾತೆ ಶ್ರೀ ಕೃಷ್ಣವೇಣೀ ಸರಸ್ವತೀ ॥
ಆ ತರೂವಾಯ ಶ್ರೀ ಕಾವೇರಿ, ಸರಿಯು ಶ್ರೀ ಯಮುನಾ ।
ಧೌತ ಪಾತಕೆ ಶ್ರೀ ನರ್ಮದ ತುಂಗಾ ೧

ಸಿಂಧೂ ಭವನಾಶಿನಿ ಕುಮದ್ವತಿ ಶ್ರೀ ವಂಝಾರ ।
ಸುಂದರ ಭೀಮಾ ತಾಮ್ರಪರಣೀ ಮಲಹಾ ॥
ಮಿಂದರೆ ಪಾವನ ಮಾಡುವ ಬಹು ನದಿಗಳ ।
ಒಂದೇ ಮನಸಿಲಿಂದಾ ಪೊಗಳುವೆ ೨

ವಾರಣೀ ಫಲ್ಗುಣೀ ಶ್ರೋಣ ಭದ್ರಾ ಗಂಡಕಿ ಹೇಮ ।
ಮೂರು ವೇಣಿ ಗಾಯತ್ರಿ ವೇಗವತೀ ॥

ಸೂರಿ ಗಮ್ಯ ಕೌಸಿಕ ಮಣಿಕರಣಿಕ ಗೌತಮಿ ಭಾ ।
ಗೀರಥಿ ಕಾಗಿನಿ ಶ್ರೀ ವೇತ್ರವತೀ ೩

ಹೇಮವತಿ ನೇತ್ರವತಿ ಪಾಪನಾಶಿ ಶ್ರೀ ಸೀತಾ ।
ಆ ಮಹಾಳಕನಂದಾ ಹಯಗ್ರೀವ ॥
ಹೇಮ ಮುಖರ ತಾಪಿನಿ ಕಾಳಿ ಸೌಪರಣಿ ಪಿನಾಕೀ ।
ಶ್ರೀ ಮತ್ಕಪಿಲ ಜಮದಗ್ನಿ ಪ್ರಣವ ಸಿದ್ಧ ೪

ಮರುದ್ವತಿ ಮದಿರ ಮೇನುಕಾ ಸೂನಾಸಿ ಚಕ್ರವತಿ ।
ಗರುಡ ಶಂಖವತೀ ಕುಹು ಮಹೇಶ್ವರೀ ॥
ಸರಯು ಜಯ ಮಂಗಳ ಯೋಗಕೃತು ಮಾಲಾ ಗದಾ ।
ಧರಿ ಮಾಲಿನೀ ಗಾರ್ಗಿಣೀ ದೇವವತಿ ೫

ಸಾವಿತ್ರಿ ಧನ್ಯಮಾಲಾ ಧರ್ಮ ಚಕ್ರತೀರ್ಥ ಹರಿ ।
ದ್ರಾವತಿ ಇಂದ್ರಾಣಿ ಪಾತಾಳಗಂಗಾ ॥
ಶೈವಕುಂಡ ಕುಂಡಿನಿ ನೀರ ಕುಮಾರ ಧಾರೀ ಶು ।
ಶಾವರ್ತಿ ಮೌಳೀ ಲೋಕಪಾವನೀ ೬

ಸ್ವಾಮಿ ಪುಷ್ಕರ್ಣಿ ಚಂದ್ರ ಪುಷ್ಕರ್ಣಿ ಮಾನಸ ಪುಷ್ಕರ್ಣಿ ।
ಶ್ರೀ ಮಧ್ವ ಸರೋವರ ಪದ್ಮ ಸರಾ ॥
ಸೋಮ ಭಾಗಾ ವ್ಯಾಸ ಸಿಂಧು ಶ್ರೀ ಪಂಪಾ ಸರೋವರ ।
ವಾಮನ ಶ್ರೀ ಮಯೂರ ಸರೋವರ ೭

ರೋಮ ಹರ್ಷಣ ತೀರ್ಥ ಸೀತಾ ಸರೋವರ ಪುಣ್ಯ ।
ಧಾಮಾ ಶ್ರೀ ಕಪಿಲತೀರ್ಥ ಧವಳಗಂಗಾ ॥
ಭೀಮಸೇನ ತಟಾಕ ಬ್ರಹ್ಮಜ್ಞಾನ ಕನ್ಯಹೃದಯ ।
ಶ್ರೀ ಮದ್ವಿಶಿಷ್ಟ ತೀರ್ಥ ತಾರಾ ತೀರ್ಥ ೮

ಈ ತೀರ್ಥಗಳ ದಿವ್ಯನಾಮ ನಿತ್ಯ ಪಠಿಸಲು ।
ಯಾತಕ್ಕಾದರೂ ವಿಘ್ನ ಬಾರದು ॥

ಮಾತರಿಶ್ವ ಪ್ರೀಯ ಪ್ರಾಣೇಶ ವಿಠಲನು ಬಹು ।
ಪ್ರೀತನಾಗಿ ಬಿಡದೆ ಪೊರೆವನು ೬

## ೧೧೭

ಭಾಗೀರಥಿ ದೇವಿ ನಮೋ ॥
ಭಾಗೀರಥಿ ದೇವಿ ಭಯ ನಿವಾರಣ ಗಂಗೆ ।
ಸಾಗರನರ್ಧಂಗೆ ಸುತರಂಗೆ ಪ

ವಾಮನ ವಾಮ ಪಾದಾಂಗುಷ್ಟ ನಖ ಸೋಕಿ ।
ಆ ಮಹ ಬ್ರಹ್ಮಾಂಡ ಸೀಳಾಲೂ । ಭಾಗೀ..... ॥
ತಾಮರಸಜ ಲೋಕಕ್ಕಿಳಿದು ಮಜ್ಜನವಾಗಿ ।
ಸ್ವಾಮಿ ಪಾದೋದಕಳೆನಿಸಿದೆ ॥ ಭಾಗೀ... ೧

ಹರಿಪಾದ ಜಲ ದೊರಕುವದು ದುರ್ಲಭವೆಂದು ।
ಹರ ಪ್ರಾರ್ಥಿಸಲು ಜಡೆಯೊಳು ನಿಂದೆ । ಭಾಗೀ.... ॥
ಮೊರೆಯಿಡೆ ದೇವತೆಗಳಿಗೆ ವೊಲಿದು ಬಂದು ।
ಸುರನದಿಯೆಂದು ಕರೆಸಿಕೊಂಡೇ । ಭಾಗೀ..... ೨

ಚನ್ನಾಗಿ ಸ್ವರ್ಗದೊಳಗೆ ನಿಂತ ಕಾರಣ ।
ಸ್ವರ್ನದಿಯೆಂದು ಕರೆಸಿದೆವ್ವ । ಭಾಗೀ.... ॥
ಉನ್ನತ ಧೃವ ಮಂಡಲಕ್ಕೆ ಪೋಗಿ ಮುಟ್ಟಿದೆ ।
ನಿನ್ನಾಕಾಶ ಗಂಗೆ ಎಂಬೋರೆ । ಭಾಗೀ..... ೩

ಭಗೀರಥ ಬಹುಕಾಲ ಪ್ರಾರ್ಥಿಸೆ ಕರುಣದಿಂ ।
ಜಿಗಳಿ ಹೇಮಾದ್ರಿಗೆ ನಡೆತಂದೆ । ಭಾಗೀ.... ॥
ಸೊಗಸಿಲಿಂ ತ್ರಿಪಥಾಗಿ ದಕ್ಷಿಣದಲಿ ಬಂದು ।
ಸಗರರಾಯನ ಉದ್ಧರಿಸಿದೇ । ಭಾಗೀ..... ೪

ತವಕದಿಂದಲ್ಲಿ ಜಹ್ನು ಋಷಿಯಲ್ಲಿ ಜನಿಸಿ ಜಾ ।
ಹ್ನವಿಯೆಂದು ಸ್ತುತಿಸೋರೆ ಸುರರೆಲ್ಲ । ಭಾಗೀ.... ॥
ಭುವನದೊಳೆಲ್ಲರು ಪುನೀತರಾಗೋದು ಸಿದ್ಧ ।
ತವಪಾದ ಸ್ಮೃತಿ ಮಾತ್ರದಿಂದಲೀ । ಭಾಗೀ...... ೫

ನಂದಿನಿ ನಳಿನಿ ಸೀತಾ ಮಾಲತೀ ಮಲಹ ।
ಮಂದರ ಧರ ಪದಿ ಶ್ರೀಗಂಗೆ । ಭಾಗೀ...... ॥
ಸುಂದರ ತ್ರಿಪಥ ಭಾಗೀರಥಿ ಭೋಗವತಿ ।
ವಂದೆ ಜಾಹ್ನವಿ ತ್ರಿದಶೇಶ್ವರಿ । ಭಾಗೀ.... ೬

ವಸುಗಳ ಮಾತು ಲಾಲಿಸಿ ರಾಯನಲಿ ಬಂದು ।
ಬಸುರಿಂದ ಪಡೆದು ಉದ್ಧರಿಸಿದೆ । ಭಾಗೀ.... ।
ಅಸಹ್ಯ ಕರ್ಮವ್ಯಾಕೆಂದೆನಲು ಕುಮಾರನ ।
ಕೊಸರುತ ನಿಜರೂಪವೈದಿದೇ । ಭಾಗೀ.... ೭

ನಮೊ ನಮೊ ಶುಭಗಾತ್ರೆ ನಮೊ ನಮೋ ಸುಚರಿತ್ರೆ ।
ನಮೊ ನಮೊ ಶಂತನುವಿನ ಮಿತ್ರೆ । ಭಾಗೀ..... ॥
ಶಮ ದಮಾದಿಗಳಿತ್ತು ಪೊರೆ ಅನುದಿನದಲ್ಲಿ ।
ಅಮರ ವಿನುತ ಪಾದಪಂಕಜೆ । ಭಾಗೀ..... ೮

ಕಾಣಲು ಪಾಪಹರವು ಮುಕ್ತಿ ಅಹುದು ।
ಸ್ನಾನದ ಫಲವು ಬಲ್ಲವರಿಲ್ಲ । ಭಾಗೀ...... ॥
ಕ್ಷೋಣಿಯ ಮ್ಯಾಲುಳ್ಳ ಸರಿದ್ವರಳೆನಿಸುವೆ ।
ಪ್ರಾಣೇಶ ವಿಠಲನ್ನ ದಯದಿಂದ । ಭಾಗೀ..... ೯

## ೧೧೮

ಪಾಹಿ ಸರಸ್ವತಿ ಸುಗಾಯಿತ್ರಿ ಶ್ರೀ ಸಾವಿತ್ರಿ ।
ಮಹಾ ದುರಿತಾದ್ರಿಪವಿ ದೀನ ಸುರಧರಿಜೇ ಪ

ಶಿಷ್ಟಜನರ ಪಾಲಿಪಳೆ ದುಷ್ಟ ಜನ ದೂರಳೇ ।
ಸೃಷ್ಟಿಪತಿ ಸೇವೆಯೊಳಗಿಟ್ಟು ದುರುಳ ।
ಬಟ್ಟೆ ಹಿಡಿಸದಲೆ ದಯವಿಟ್ಟು ಪಿಡಿವದು ಕೈಯ ।
ಕಷ್ಟ ನಾಶನ ಮಾಡೆ ಕೊಟ್ಟು ಸುಖ ಪೂಜ್ಯೆ ೧

ಮದನ ಸತಿ ಕೋಟ ಲಾವಣ್ಯೆ ಗುಣಸಂಪನ್ನೆ ।
ಸುದತೀ ವೃಂದ ಶಿರೋಮಣಿ ಕರುಣಾರ್ಣವೆ ॥
ಮಧು ಜಿತ್ಪಿಯನ ರಾಣಿ, ವಾಣೀ ವೀಣಾಪಾಣಿ ।
ಹೃದಯದೊಳು ಕಮಲನಾಭನ ನಿರುತ ತೋರೇ ೨

ಈಶಾದಿ ಸುಮನಸಾರ್ಚಿತ ಪಾದ ಸರಸೀರುಹೆ ।
ಲೇಶೀತರಾನಂದೆ ಸುಗುಣೆ ಶ್ರೀ ಪ್ರಾ–
ಣೇಶ ವಿಠಲನ ಕೊಂಡಾಡುವರೊಳಗೆ ಸ್ನೇಹ ।
ಹ್ರಾಸವಾಗದೆ ಈಯೆ ಇಭರಾಜ ಗಮನೆ ೩

## ೧೧೯

ಸರಸ್ವತೀ ಶ್ರೀ ಗಾಯತ್ರೀ । ಪರಮೇಷ್ಟಿಜೆ ಸಾವಿತ್ರಿ ॥
ಸರುವ ವೇದಾತ್ಮಿಕೆ ಪ್ರೀತಿ । ಸರಸ್ವತಾ ದೇವೀ ಪ

ವಾಣೀ ದೇವೀ ಸುವೀಣಾಪಾಣಿ ಕಾಯೆ ।
ಬ್ರಹ್ಮನ ರಾಣಿ ಗರುಡಾರಾದ್ಯಾರಾಧಿತೇ ॥
ಜಾಣೆ ತವ ಪದ ಕಂಜಾರೇಣು ಸೇವಿಪೆ ನಿತ್ಯ
ಮೋಣಿಸಾಬೇಕೆ ಸನ್ಮತಿಯಾ ೧

ಹಂಸ ವರೂಢೆ ಮಾತೆ ಕಂಸಾರಿ ನಿಜದೂತೆ
ಸಂಸೇವಿಸುವರ ದಾತೆ ॥
ದೋಷರಹಿತೆ ಯನ್ನಾ ಆಶಿ ಪೂರ್ತಿಸೆ ನಿನ್ನಾ
ನಾ ಸೇವಿಸೂವೇನೆಯೆಮ್ಮಾ ೨

ಶಿರಿ ಪ್ರಾಣೇಶ ವಿಠಲನ ಚರಣಾಂಬುಜ ಷಟ್ಪಾದೆ
ಕರವ ಮುಗಿದು ಬಿನ್ನೈಸುವೆ ॥
ಬರವ ನುಡಿಗೆ ವಿಘ್ನತೆ ಬರದಂತೆ
ಪಾಲಿಸವ್ವಾ ಕರಣಾ ಸಾಗರೆ ಪವಿತ್ರೆ ೩

## ಭಾರತೀದೇವಿ ಸ್ತೋತ್ರಗಳು

### ೧೨೦

ಶರಣು ಶ್ರೀ ಮಾರುತನ ರಾಣಿಯೆ ।
ಶರಣು ಮಂಗಳ ಶ್ರೋಣಿಯೇ ॥
ಶರಣು ಸ್ಮಿತ ಮುಖ ಉರಗವೇಣಿಯೆ ।
ಶರಣು ಸರಸಿಜ ಪಾಣಿಯೇ ಪ

ಇಂದ್ರಸೇನೆ ಪುರಂದರಾರ್ಚಿತೆ ।
ಇಂದಿರಾಪತಿ ಕೃಷ್ಣನಾ ॥
ನಂದದಲಿ ಸೇವಿಸುವ ಭಕುತಿಯ ।
ಇಂದುಧರನಿಗೆ ಕೊಡುವಳೇ ೧

ಗರುಡನುತ ಪದ ಸರಸೀರುಹೆ ವೃಕೋ ।
ದರನ ಪ್ರೀತಿಗೆ ಯೋಗ್ಯಳೇ ॥
ತರುಣಿ ಶಿರೋಮಣಿ ದುರ್ಮತಿಯ ಕಳೆದು ।
ಕರುಣದಲಿ ಕರ ಪಿಡಿವುದು ೨

ವಿದ್ಯುನ್ನಾಮಕೆ ಧಾತಜಾತಳೆ ।
ಶ್ರದ್ಧೆ ದಾತೆ ನಿರಂತರ ॥
ತಿದ್ದಿ ಯನ್ನ ವಕ್ರಮತಿಯ ದ್ರುಹಿಣ ।
ವಿದ್ಯೆ ಪಾಲಿಸೆ ಭಾರತೀ ೩

ಕಾಳೀ ದ್ರೌಪದಿ ಸ್ಥಾಣು ಕನ್ಯಾ ।
ಶೈಲಜಾದಿ ನಮಸ್ಕೃತೇ ॥
ಕಾಲಿಗೆರಗುವೆ ಯನ್ನ ಬಿನ್ನಪ ।
ಕೇಳಿ ಜ್ಞಾನವ ಪ್ರೇರಿಸೇ ೪

ಗಜಗಮನೆ ನಳನಂದಿನಿ ಅನಘೆ ।
ಸುಜನ ಹೃದಯ ನಿಕೇತನೆ ॥
ತ್ರಿಜಗ ಪತಿ ಪ್ರಾಣೇಶ ವಿಠಲನ ।
ಭಜನೆಯೊಳು ಮನ ನಿಲ್ಲಿಸೇ ೫

## ೧೨೧

ಶರಣು ಭಾರತೀ ತಾಯೆ । ಕರವ ಬಿಡದಲೆ ಕಾಯೆ ॥
ಮರುತದೇವನ ರಮಣಿ । ಸುರ ನದಿಯ ಭಗಿನಿ ಪ

ಪ್ರದ್ಯುಮ್ನ ದೇವಸುತೆ । ರುದ್ರಾದಿ ಸುರ ವಿನುತೆ ॥
ಭದ್ರ ವಿಗ್ರಹೆ ದಯಾ ಸ । ಮುದ್ರೆ ಕುಲಿಶೆ ॥
ಅದ್ರಿಯೋಪಮ ದೋಷ । ಕಿದ್ದ ದುರ್ಮತಿ ಕ್ಲೇಶ ॥
ವೊದ್ದು ನಿನ್ನವನೆನ್ನು । ಬುದ್ಧಿ ಕೊಡು ಇನ್ನೂ ೧

ನೀರಜಾಂಬಕೆ ಯನಗೆ । ತೋರು ಸಾಧನ ಕುನಗೆ ।
ಜಾರಿಸು ಭಕುತಿಯನ್ನು । ತೋರು ಕರುಣಾ ॥
ವಾರಿಧಿ ಹರಿಯ ಪಾದ । ಆರಾಧಿಸಲು ಮೋದ ।
ವಾರವಾರಕೆ ಈಯೇ । ವಾರಣ ಗಮನೆಯೇ ೨

ಪ್ರಾಣೇಶ ವಿಠಲನ । ಧ್ಯಾನದೊಳಗಿರಿಸು ಮನ ।
ವಾಣೀ ಪದವೈದುವಳೇ । ಮಾನ ನಿನ್ನದೆಲೆ ॥
ಹೀನ ವಿಷಯಗಳೊಲ್ಲೆ । ನೀನೇ ಸ್ವಾಂತದಿ ನಿಲ್ಲೆ ।
ಕ್ಷೋಣಿಯೊಳಗತಿ ಮಾನೀ । ಜ್ಞಾನೀ ಅಹಿವೇಣೀ ೩

## ೧೨೨

ದ್ರೌಪದಿ ಕೃಷ್ಣಾ ಪಾಂಚಾಲಿ । ದೇವಿ ।
ಗೋಪತಿ ಧ್ವಜ ವಂದ್ಯೆ ಕಾಳಿ । ಆಹಾ ।
ಪಾಪಗಳೆಣಿಸದಲೇ ಪುನೀತನ । ಮಾಡೆ ।
ಶ್ರೀ ಪವನನ ಕರುಣಾಪಾತ್ರೆ ಸುಚರಿತ್ರೆ ಪ

ವಾಣಿ ಭಕ್ತಿಗೆ ಅಭಿಮಾನಿ । ತಾಯಿ
ನೀನೆ ಗತಿಯೆಲೆ ಸುಶ್ರೋಣಿ । ಶ್ರೀಶ
ಧ್ಯಾನವ ಮಾಡಲು ಮನ ಪೋಣಿಸುವ ।
ದೇನನೊಲ್ಲೆನು ಪೂರ್ಣ ಜ್ಞಾನಿ । ಆಹಾ ॥
ದೀನ ರಕ್ಷಕೆ ಮಿಕ್ಕ ಹೀನ ದೇವರ ಪಾದ ।
ಕ್ಕೆ ನಮಿಸುವ ಮತಿಯನೆಂದು ಕೊಡದಿರೆ ೧

ಶಾರದೆ ಹರಿಯ ಕುಮಾರಿ । ನಿನ್ನ ।
ಸಾರಿದೆ ಕುಜನ ಕುಠಾರಿ । ದಯಾ ।
ವಾರಿಧೆ ಸುಜನೋಪಕಾರಿ । ತೋರೆ ।
ಸಾರೆಗರಿದು ಮುಕ್ತಿ ದಾರಿ । ಆಹಾ ॥
ಶ್ರೀ ರಮಣ್ಯುಳಿದೆಲ್ಲ ನಾರೀ ಶಿರೋಮಣಿ ।
ಆರಾಧಿಸುವೆ ಯೆನ್ನ ದೂರ ನೋಡಲು ಬೇಡ ೨

ಹಲವರಿಗೆಲ್ಲ ಬಾಯ್ದೆರೆದು । ಬೇಡಿ ।
ಕೊಳುವದೇನದೆ ದಿನ ಬರಿದು । ಸಾಧು ।
ನೆಲೆಯದೋರರು ಹತ್ಯಾಗರೆದು । ಬುದ್ಧಿ ।
ಕಲಿಸೆ ಭಾರತಿಯೆನ್ನ ಮರೆದು । ಆಹಾ ।
ಇಳೆಯೊಳು ಶ್ರಮಪಡಿಸಲು ಸಲ್ಲ ದಿತಿಜರ ।
ನಳಿದ ಪ್ರಾಣೇಶ ವಿಠಲಗಚ್ಚಿನ್ನ ಭಕ್ತಳೆ ೩

## ೧೨೩

ಭಾರತೀ ದೇವೀ ನಿನ್ನನು ದಿನಾ । ಸಾರುವರ ಕಾಯ್ವೀ ॥
ಮಾರಮಣನ ಪಾದ ವಾರಿಜ ಯುಗದಲೀ ।
ಚಾರು ಭಕುತಿ ಕೊಡು ನಾರೀ ಶಿರೋಮಣಿ ಪ

ಇಂದ್ರಸೇನಳೆ ವಿಪ್ರ ಕನ್ನಿಕೆ । ಚಂದ್ರೇ ಶ್ರೀಕಾಳೆ ।
ನೊಂದೆನೆ ಬಹ ಭವ । ಬಂಧನದೊಳು ವೇಗಾ ।
ದಿಂದ ಕಾಯೆ ಕರುಣಾ ಸಿಂಧು ದ್ರೌಪದಿ ದೇವಿ ೧

ಮಾತೆ ಕೇಳೆಲೆ ಭವಟವಗೆ । ವೀತಿಹೋತ್ರಳೆ ॥
ಮಾತು ಮಾತಿಗೆ ಜಲಜಾತನಾಭನ ಸ್ತುತೀ ।
ಅತುಕೊಂಡಿರಲೆ ಶ್ರೀ । ಮಾತರಿಶ್ವನಾ ರಾಣೀ ೨

ಪತಿತ ಪಾವನೆ । ಶಿವ ಕನ್ಯಾ ಜಗದ್ವಿತತೆ ಜೀವನೆ ॥
ನುತಿಸಿ ಬೇಡಿಕೊಂಬೆನೆ । ಕ್ಷಿತಿಯೊಳೆಲ್ಲರೂ ಸನು ।
ಮತವನ್ನೈದಿ ಈ ಕೃತಿಗೆ ಮಂಗಳವೀಯೆ ೩

ದೋಷ ದೂರಳೇ । ಹರಿಭಕ್ತಿಯಲ್ಲಿ ಮೋಸ ತೋರಳೆ ॥
ಕಾಶಿ ನಂದನೆಯನ್ನಾ । ಯಾಸ ಬಡಿಸದಲೀ ।
ಶ್ರೀಶನ ಕಥೆಗೆ ವಿಶೇಷ ಬುದ್ಧಿಯನೀಯೆ ೪

ಮಾನ ನಿನ್ನದೆ । ಸತತ ಪೇಳ್ವದೇನು ಮಾಣದೇ ॥
ಪ್ರಾಣೇಶ ವಿಠಲನ ಧ್ಯಾನದೊಳಿರುವಂತೆ ।
ಪೋಣಿಸುವದು ಮತಿ ಬಾಣ ವರದ ನುತೆ ೫

## ೧೨೪

ಕಾಳೀ ದ್ರೌಪದಿ ಭಾರತೀ
ನಿನ್ನ ಪಾದ ಕೀಲಾಲಜ ನುತಿಪೆ ಪ್ರತಿ ॥

ವೇಳೆಯೊಳಗೂ ಲಕ್ಷ್ಮೀಲೋಲನ ಚರಣಾಬ್ಜ ।
ವಾಲಗವೀಯೇ ಸುಶೀಲೆ ಸ್ವಯಂಭುಜೆ ಪ

ಇಂದ್ರಸೇನಾ ನಳನಂದಿನಿ ಶಿವಕನ್ಯಾ ।
ನಂದಪೂರಿತಳೆ ಚಂದ್ರಾ ।
ನಿಂದಕ ರಿಪು ಜ್ಞಾನಸಾಂದ್ರೆ ಸುಪತಿವ್ರತೆ
ಕಂದುಗೊರಳ ವಾರುಣೀಂದ್ರ ಅಂಡಜಾಧಿಪ ॥
ಇಂದ್ರ ನಿರ್ಜರ ವೃಂದ ಮುನಿಗಣ
ವಂದಿತ ಪದಾರವಿಂದೆ ಭವದಲಿ
ನೊಂದೆ ಭಯವಾರೆಂದು
(ನಿನ್ನೊಡಿವೆಂದದಲಿ ನಿನ್ನಡಿ ಪೊಂದಿ ಬೇಡುವೆ ನಂದದಲಿ)
ಕೊಡೆ (ಅ) ಮಂದ ಕರುಣೆ ೧

ತರಣಿಯಾನಂದ ಭಾಸೆ ।
ಪ್ರದ್ಯುಮ್ನ ದೇವರ ಸುತೆ ಕ್ಲೇಶ ಹರಿಸೆ ।
ಹರಹಿ ಯನ್ನಯ ಮೇಲೆ ಕರುಣಾಪಾಂಗದ ದೃಷ್ಟಿ ।
ದುರುಳ ಮತಿ ಪರಿಹರಿಸಿ ತವಕ ಹರಿ-
ಗೆರಗೊ ಮನ ಕೊಡು ಪರಮ ಧಾರ್ಮಿಕೆ
ಕರೆವೆ ಬಂದೀಗಿರೆ ಹೃದಯಾಬ್ಜದಿ ।
ಉರು ಪರಾಕ್ರಮೆ ಪರ ತರಳೆ ಸದಾ
ಪೊರೆಯೆ ಬಿಡದಲೆ ಕರ ಮುಗಿವೆ ೨

ವಾಣೀ ಸುಂದರಿ ವರದೆ ಸಾಧ್ವೀ ।
ವೀಣಾಪಾಣಿ ಪೇಳುವೆನೆ ಇದೇ ।
ಹೀನ ವಿಷಯವಲ್ಲೆ ಪೋಣಿಸಿ ಸುಮತಿ ಶ್ರೀ
ಪ್ರಾಣೇಶ ವಿಠಲನ ಧ್ಯಾನದೊಳಿಹ ಮ-
ಹಾನುಭಾವರ ಸಂಗ ಪಾಲಿಸೇ ॥
ಮಾನಿನೀ ಕುಲ ಮೌಳಿ ಮಣಿ ಚಂ ।
ದ್ರಾನನೆ ಮದಗಜಗಮನೆ ಸು-
ಶ್ರೋಣಿ ಅಷ್ಟಾಪದ ಸುಕಾಂತೆ ೩

## ೧೨೫

ಕಾಯೆ ಭಾರತೀ ನಿನ್ನ ಆರಾಧಿಸುವೆ ಯನ್ನ ।
ಮಾಯಾ ಮಂದಿರನವರ ಕಿಂಕರನು ಯೆನಿಸೇ ಪ

ವ್ಯೋಮಜ ರಮಣಿ ನಳಿನಭವ ಜಾತೆ ಕೃತಿ ಪುತ್ರೆ ।
ಸಾಮಜ ಗಮನೆ ಉರಗವೇಣಿ ಕಾಳೀ ॥
ಸೋಮಮುಖಿ ಬೇರೊರಸಿ ಯನ್ನ ದುರ್ಮತಿಯಳಿದು ।
ರಾಮಧ್ಯಾನದಲಿ ಮನ ನಿಲ್ಲಿಸುವದನಿಶ ೧

ಲೋಕನಾಯಿಕೆ ಶೈಲಜಾಪತಿ ಮುಖ ಪೂಜಿತಳೆ ।
ನೀ ಕರುಣದಲಿ ನೋಡಿ ಕರವ ಪಿಡಿಯೇ ॥
ಕಾಕು ಮನುಜರ ಸಂಗವನು ಕೊಡದೆಯೊಂದಿನಕು ।
ಲೌಕಿಕವ ಸಂಪಾದಿಸಿಸಬೇಡವಮ್ಮ ೨

ಕೃಷ್ಣೆ ನಳನಂದಿನಿ ದ್ರುಪದ ತನುಜೆ ಶಿವಕನ್ಯೆ ।
ದುಷ್ಟ ಜನ ಗಿರಿಕುಲಿಶೆ ಸ್ವರ್ಣಗಾತ್ರೆ ॥
ಕೊಟ್ಟ ಮಾತಿಗೆ ತಪ್ಪದಲೆ ಕಾಯ್ವ ಪ್ರಾಣೇಶ ।
ವಿಠಲನ ಚರಣಯುಗ ಸರಸೀರುಹ ಭೃಂಗೆ ೩

## ೧೨೬

ಏನು ಮರುಳಾದೆವ್ವ ಎಲೆ ಭಾರತೀ ।
ನೀನರಿಯೆ ಪವನನಿಂಥವನೆಂಬುದು ಪ

ಕಲ್ಲು ಹೊರುವನು ಮತ್ತೆ ಯಾರಿಂದಲಾಗದವು ।
ಎಲ್ಲರಂತಲ್ಲ ಕಪಿರೂಪ ನೋಡು ॥
ಖುಲ್ಲ ಫಲಪುಷ್ಪಯುಕ್ತ ವನವನು ಕೆಡಿಸಿದನು ।
ಎಲ್ಲಿಂದ ಒದಗಿದನೊ ಈ ಪತಿಯೊ ನಿನಗೆ ೧

ರಕುತವಂ ಪಾನ ಮಾಡಿದನಂತೆ ಕೇಳಿದೆಯಾ ।
ರಕ್ಕಸೊಬ್ಬಳು ನಿನಗೆ ಸವತಿ ಇಹಳೂ ॥
ಮಕ್ಕ ಮಾರಿ ಮಗನುಂಟು ಗಂಡನು ಬದ ।
ನಕ್ಕೆ ಗತಿಯಿಲ್ಲದೆಲೆ ಭಿಕ್ಷೆ ಬೇಡುವನು ೨

ಹುಟ್ಟು ಬಡವವ ತಾನಾದರೇನಾಗಲಿ ನಿನ್ನ ।
ಬಿಟ್ಟು ತುರ್ಯಾಶ್ರಮವ ಧರಿಸಿಕೊಂಡು ॥
ದೃಷ್ಟಿಗೋಚರನಾಗದೇ ನರರಿಗೆ ಪ್ರಾಣೇಶ
ಠಲನ ಬಳಿಯಲ್ಲಿ ಬದರಿಯೊಳು ಸೇರಿಹನು ೩

## ರುದ್ರದೇವರ ಹರಿಹರಸ್ತೋತ್ರ

### ೧೨೭

ಶರಣು ನಿನ್ನ ಚರಣ ಕಮಲಗಳಿಗೆ ಶಿವಶಿವಾ ।
ಕರವ ಪಿಡಿದು ಸುಮತಿಯಿತ್ತು ಪೊರೆಯೊ ಶಿವಶಿವಾ ಪ

ದಂತಿ ಚರ್ಮ ಹೊದ್ದ ಭಸ್ಮಭೂಷ ಶಿವಶಿವಾ ।
ಚಿಂತಿ ರಹಿತ ಲಯಕೆ ಕರ್ತ್ರನಾದ ಶಿವಶಿವಾ ॥
ಸಂತರಿಂದ ಸತತ ಸೇವೆಗೊಂಬ ಶಿವಶಿವಾ ।
ಕಂತುಪಿತನ ಪೂರ್ಣ ಪ್ರೀತಿಪಾತ್ರ ಶಿವಶಿವಾ ೧

ಮಂದಮತಿಯ ತಪ್ಪಿನೆಣಿಸಬ್ಯಾಡ ಶಿವಶಿವಾ ।
ಕುಂದು ನಿನಗೆ ಎಂದಿಗೆಂದಿಗಿಲ್ಲ ಶಿವಶಿವಾ ॥
ಮಂದಗಮನೆ ನಿನ್ನ ಮನದೊಳಿಲ್ಲೆ ಶಿವಶಿವಾ ।
ತಂದುಕೊಂಡ ದಕ್ಷ ವೃಥ ಕುವಾರ್ತೆ ಶಿವಶಿವಾ ೨

ಹೀನರಂತೆ ನಿನಗೆ ಕೋಪ ಸಲ್ಲ ಶಿವಶಿವಾ ।
ಮಾಣು ಯಜ್ಞಸಹಯನಾಗು ದಯದಿ ಶಿವಶಿವಾ ॥

ಏನುಪಾಯ ಇದಕೆ ಚಿಂತಿಸುವದು ಶಿವಶಿವಾ ।
ಪ್ರಾಣೇಶ ವಿಠಲ ನಿನ್ನ ವಶದೊಳಿಹನು ಶಿವಶಿವಾ ೩

## ೧೨೮

ಬಾಣವದನ ಸಲಹೋ – ನಾ ನಮಿಸುವೆ ।
ಬಾಣವರದ ನಿನಗೆ । ಹರ ಹರ ಪ

ಕುಧ್ರೇಡ್ಜ ಮುಖ ಕಂದ–ರವಿ ಅಘ ।
ಅದ್ರಿ ಸಮೂಹ ಋಷಿಜಾ । ಹರಹರ ॥
ನಿದ್ರರಹಿತ ವಿಧಿಜಾ ಸತತ ಅ– ।
ಭದ್ರ ಭಕ್ತರಿಗೆ ಕುಜ ೧

ಗಜಋಷಿ ಅಂಬಕನೆ ಪಶುಪತಿ ।
ತ್ರಿಜಗದಿ ಪೂಜಿತನೆ । ಹರಹರ ॥
ಅಜಿನಾಂಬರ ಧರನೇ ಕರುಣಿಸೊ ।
ವಿಜಯೇಕ್ಷಣ ಶಿವನೆ । ಹರಹರ ೨

ಕಾಮಾದಿ ಮುಖ ಜನಕ ಧೂರ್ಜಟ ।
ಭೂಮಿಜ ವೈರಿ ಸಖಾ । ಹರಹರ ॥
ಸಾಮಜ ರಿಪು ಧನಿಕ ಮಿತ್ರನೆ ।
ಕಾಮಿತ ಫಲದಾಯಕ । ಹರಹರ ೩

ಧರಣಿಜೆ ರಮಣ ನಾಮಾ ಸರ್ವದಾ ।
ಸ್ಮರಿಸುವೆ ನತ ಪ್ರೇಮಾ ॥ ಹರಹರ ॥
ಗರಳ ನಾಶನ ಭೀಮ ವಿಕ್ರಮ ।
ಸರೋಜ ಧ್ವಜ ವಿರಾಮ । ಹರಹರ ೪

ಘನ ನಿಭ ಪ್ರಾಣೇಶ ವಿಠ್ಠಲ ।
ನನುಗನೆನಿಪುದನಿಶ । ಹರಹರ ॥
ಘನ ಮಹಿಮನೆ ಈಶ ಕುಧರ । ಸ-
ದನ ನಾಕಜ ಪೋಷ । ಹರಹರ ೫

## ೧೨೯

ಗಂಗಾಧರ ಸುಮತಿ ಪಾಲಿಸೋ । ಪಾಂಡು ।
ರಂಗನ ಚರಣಾಬ್ಜ ಭಜನೆ ಮಾಡು ನಿತ್ಯ ಪ

ವೈಕಾರಿಕಾದಿತ್ಯ ರೂಪ ದನುಜರಿಗೆ ।
ಶೋಕ ಕೊಡುವದು ನಿರಂತರದಿ ॥
ಲೌಕಿಕವೆಲ್ಲ ವೈದಿಕವಾಗಲೆನಗೆ ಮೈನಾಕೀ ।
ಹೃತ್ಕಮಲ ಮಾರ್ತಾಂಡ ಭಕ್ತ ವತ್ಸಲ ೧

ವಾಸವಾದ್ಯಮರ ವಂದಿತನೆ ಪದ್ಮಜ ಸುತ ।
ನೀ ಸಲಹುವದೋ ಕೈಲಾಸವಾಸ ॥
ಕ್ಲೇಶ ಮೋದವು ಸಮ ತಿಳಿಸೋ ಅಶ್ವತ್ಥಾಮ ।
ದೋಷರಹಿತನೆ ದಕ್ಷಾಧ್ವ ರನಾಶಕ ೨

ಪವಮಾನ ತನಯ ನಿನ್ನವರಲ್ಲಿ ಕೊಡು ಸ್ನೇಹ ।
ದಿಜ ವಸನಾದಿಯಲ್ಲಿ ಎನ್ನಿರವ ಬಲ್ಲಿ ॥
ಅವಲೋಕಿಸದೆ ಎನ್ನನೇಕ ಪಾಪಗಳನ್ನು ।
ತವಕ ಉದ್ಧರಿಸೋ ವಿಯತ್ಪತಿ ಜನಕ ೩

ಸಾಮಜಾಜಿನ ವಸ್ತ್ರ ಭಸ್ಮ ಭೂಷಿತ ದೇವ ।
ಸೋಮಶೇಖರನೆ ಬಿನ್ನಪವ ಕೇಳು ॥
ಪ್ರೇಮದಿಂದಲಿ ಭಾಗವತರ ಸಂಗತಿ ನಿತ್ಯ ।
ಶ್ರೀ ಮನೋರಮನ ಚರಿತೆ ಪಾಡಿಸುವದಯ್ಯ ೪

ಶ್ರೀಕಂಠ ನೀ ಪೇಳಿದನ್ಯಶಾಸ್ತ್ರಕೆ ಬುದ್ಧಿ ।
ಸೋಕದೆ ಗುರು ಮಧ್ವ ಮುನಿಮತವೇ ॥
ಬೇಕು ಜನುಮ ಜನುಮಕ್ಕೆನಿಸೋ ತ್ರಿಯಂಬಕ ।
ನಾ ಕೈಯ್ಯ ಮುಗಿವೆ ಪ್ರಾಣೇಶ ವಿಠಲದಾಸ ೫

## ೧೩೦

ಪಾರ್ವತೀ ಪತಿಪಾಹಿ ಹರಹರ ಪ

ಪಾರ್ವತೀಪತಿ ನೀನೊಲಿದು ಮನಸಿನೊಳು
ತೋರ್ವದು ಕೇಶವನ । ಹರಹರ ॥ಅ. ಪ॥

ವಿಜಯ ನಿನ್ನೊಳಗಂದು ವಿಜಯಿಸಲಸ್ತ್ರವ ।
ತ್ರಿಜಗವರಿಯ ಕೊಟ್ಟ ॥
ಮಜ ಭಾಪುರೆ ಅಂಬುಜ ಸುತ ನಂದನ ।
ಗಜ ಚರ್ಮಾಂಬರನೆ । ಹರಹರ ೧

ಜಾತವೇದಸ ಶಶಿ ತರಣಿ ನಯನ ।
ಮಾತರಿಶ್ವತನಯ ॥
ಭೂತ ಗಣಪ ಗುಣವ್ರಾತ ನಿನ್ನವರೊಳು ।
ಪ್ರೀತಿಯಿಂದಲೆ ಕೂಡಿಸು । ಹರಹರ ೨

ಕ್ಷಿತಿಧರ ಶರ ಮನ್ಮಥ ಪುರ ಹರಣ । ಪ್ರ
ಮಥಾಧಿಪ ಹರಿಣಾಂಕ ॥
ನತಿಸುವೆ ನಿನ್ನನು ಪ್ರತಿದಿನದಲಿ । ಸ
ನ್ಮತಿ ಕರುಣಿಸು ತ್ವರಿಯಾ ॥ ಹರಹರ ೩

ಸುರಸೇವಿತ ಪದ ಅರವಿಂದ ಅನಘ ।
ಮುರ ರಿಪು ಸುಖ ಕಪರ್ದಿ ॥

ಚರಣವ ನಂಬಿದವರ ಭಯವಾರಿದ ।
ಮರುತ ಕುಶ ನಂದನನೆ ॥ ಹರಹರ ೪

ಖಟವ ಪಾಣಿ ಖಳ ಆಟವಿ ವಹ್ನಿ ಧೂ ।
ರ್ಜಟ ಹರ ಪ್ರಾಣೇಶ ॥
ವಿಠಲನ ಭಜನೆಯು ಘಟಿಕ ತಪ್ಪದಲೆ ।
ಘಟನೆ ಮಾಡಿಸುವುದೋ ॥ ಹರಹರ ೫



## ೧೩೧

ಗಂಗಾಧರ ದೇವ ಜಯಗೀಷ ವ್ಯಾನಂಗಾರಿ ಗಿರಿಜಾಧವ ।
ಮಂಗಳ ಪ್ರದನೆ ಅಮಂಗಳ ಶೀಲ । ಭು
ಜಂಗ ರೂಪದಿ ಪಾಂಡು ।
ರಂಗ ಘಾಸಿಗೆಯಾದ ಪ

ವೈಕಾರಿಕಾಹಂಕಾರ ತತ್ವದೊಡೆಯ, ನಾಕುಮೊಗನ ಕುಮಾರ ।
ಶ್ರೀಕಂಠ, ಸ್ಥಾಣು, ವಿಶ್ವೋಜನಕ, ಚಂದ್ರಶೇಖರ, ಈಶ ಪಿನಾಕಿ ಭಕ್ತವತ್ಸಲ ।
ಶೋಕನಾಶಕ ಶಂಭು, ಪಶುಪತಿ, ಹೇ ಕರುಣಿ, ಸದ್ಗುಣ ಸುಖಾರ್ಣವ ।
ಪಾಕಶಾಸನ ಪ್ರಮುಖ ವಂದ್ಯ, ವಿಶೋಕ, ಎನ್ನಭಿಲಾಷೆ ಪೂರ್ತಿಸು ೧

ಪ್ರಾಣನಂದನ ತೈಜಸಾಹಂಕಾರಾಭಿಮಾನಿ ಶ್ರೀಶುಕ ದೂರ್ವಾಸ ।
ಕ್ಷೋಣಿ ಸಂಧೃತ ಧನ್ವಿ, ದಾನವಾಂತಕ, ಶೂಲಪಾಣಿ, ಪ್ರಮಥಾಧಿಪ ಬಾಣವರದಯನ್ನ ।
ಮಾನ ನಿನ್ನದು ಚಕ್ರಿ ಪದಕಂಜ ರೇಣು ತೋರಿಸು ತವಕದಿಂದಲಿ ।
ದ್ರೌಣಿ, ಶಿವ, ಪ್ರಣತ ಜನ ಸುಮನಸಧೇನು, ತವ ಪದ ಸಾರ್ವೆ ಸತತ ೨

ತಾಮಸಾಹಂಕಾರೇಶ ಸಂಕರ್ಷಣನಾ ಮಗನೇ ಕೊಡು ಲೇಸ ರಾಮನಾಮ ಮಂತ್ರ ।
ಪ್ರೇಮದಿ ಜಪಿಸುವ ಸ್ವಾಮಿ, ಅನಲ, ವಹ್ನಿ ಸೋಮಲೋಚನ ಹರ ।
ವಾಮದೇವ, ಕಪರ್ದಿ, ಭವ ಭಯ ಭೀಮ ಶ್ರೀ ಪ್ರಾಣೇಶ ವಿಠಲನ ।
ಪ್ರೇಮ ಪುಟ್ಟಿಸೋ ರೌಪ್ಯ ಪರ್ವತಧಾಮ ಶ್ರೀ ವಿರೂಪಾಕ್ಷ ಗುರುವೇ ೩

## ೧೩೨

ಮಹಾದೇವ ಶಿತಿಕಂಠ ದಾಸ ಕಲ್ಪ
ಮಹೀಜ ಬಿನ್ನವಿಪೆ ನಿರ್ದೋಷ ॥ಆಹಾ ॥
ಕುಹಕಾರಿ ಹರಿಪಾದ ಮಹಿಮೆ ಕೊಂಡಾಡಿಸೊ ।
ಗಹನ ವಿಕ್ರಮ ಭೀಮ ಮಹೀಧರಪ ಜಾಧವ ಪ

ಸ್ಫಟಿಕಾಭ ಶ್ರೀಕಂಠ ದಕ್ಷ ಧ್ವಂಸಿ ।
ನಿಟಿಲಲೋಚನ ಸುರಪಕ್ಷ ಹೇ ॥ ಧ್ರೂ ।
ಜಟಿಲ ಹೀನ ವಿಷಯಾಖ್ಯ ಕಕ್ಷ ವಹ್ನಿ ।
ಕುಟಿಲತ್ವ ಬಿಡಿಸತಿ ದಕ್ಷ ॥ಆಹಾ॥
ಕಠಿಣ ಸಂಸಾರದಿ ತ್ರುಟಿ ಮಾತ್ರ ಸುಖ ಕಾಣೆ ।
ವಟು ರೂಪಿ ಭಕುತರ ಕಟಕದೊಳಿರಿಸೆನ್ನ ೧

ಇಳಿರಥ ನಗಶರ ಸೋಮ ಮೌಳಿ ।
ನಳನಂದಿನಿಪ ಸುತ ರಾಮ ನಾಮಾ ।
ನಲಿದು ಪಾಡುವ ಗುಣಧಾಮ ರೌಪ್ಯಾ ।
ಬಲಾವಾಸಾನಂಗ ವಿರಾಮಾ ॥ಆಹಾ॥
ಹಲವರಾಶ್ರಯಿಸಿ ನಾ ಬಲು ನೊಂದೆನೋರ್ವರು ಕಾಯ್ವ ।
ಸುಳಿವು ಕಾಣೆನೋ ಹೇ ಗರಳಕಂಠ ಪೊರೆಯೆನ್ನ ೨

ಪಂಚ ಸುಸ್ಮಿತ ಯುಕ್ತ ವದನಾ ನಿಷ್ಪ್ರ ।
ಪಂಚ ಗಜಾಸುರ ಹನನಾ ಏಕ
ಪಂಚಾಸ್ಯ ಜನಕ ಕೇಶವನಾ ಪ್ರೀತಿ ।
ಮಂಚ ನೀನಾಹೆ ಖಳರನಾ ॥ಆಹಾ॥
ಹಿಂಚಾಗಿ ಅಳಿವಂಥ ಹಂಚಿಕೆಯಲಿ ವರ ।
ಮುಂಚೆ ಕರೆದು ಕೊಟ್ಟು ವಂಚಿಪೆ ಅತ್ರಿಜ ೩

ಅಹಂಕಾರಾಧೀಶ ನಭೇಶ ತಾತ ।
ಮಹಾ ಮುನಿ ವಂದ್ಯಾಮರಾಸ್ಯ ಚಂದ್ರ ।

ದಿನಪತೇಕ್ಷಣನೆ ಅಶೇಷಾ ಮೋದ ।
ಬಹು ಮೋದ ಸಕ್ತಾಯನ್ನಾಶಾ ॥ಆಹಾ॥
ದಹಿಸೊ ಜಠರ ಪೋಷ ವಹಿಸಿ ಬೆಂಡಾದೆನೊ ।
ಅಹಿ ಮಲಾಂಧಕಾಸುರ ಗುಹಹ ಅಶ್ವತ್ಥಾಮ ೪

ಶಕ್ರಾವರಜ ಶ್ರೀ ಪ್ರಾಣೇಶ ವಿಠ್ಠಲ ।
ನಕ್ರಾಹನಂಘ್ರಿಯನಿಶದಲ್ಲಿ ।
ವಕ್ರವಿಲ್ಲದೆ ಸೇವಿಪೀಶ ಹೇ ತ್ರಿ– ।
ವಿಕ್ರಮ ಕರ ವ್ಯೋಮಕೇಶ ॥ಆಹಾ॥
ಶುಕ್ರಪೂಜಿತ ಪಾದ ಅಕ್ರೂರಯನ್ನೊಳಿ ।
ದ್ದ ಕ್ರಮವೆಣಿಸದೆ ಸುಕೃತವೊದಗಿಸೊ ೫

## ೧೩೩

ಎಷ್ಟೋ ಹರಿ ಮರುತರ ಕೃಪಿ ನಿನ್ನಲ್ಲಿ ।
ಕೆಟ್ಟುದೇ ಭೂಷಣವಾಗಿಹುದೋ ಪಾರ್ವತೀ ರಮಣ ಪ

ವಿಷವನ್ನೆ ಭೋಜನ ಮಾಡಿ ಜೀರ್ಣಿಸಿಕೊಂಡಿ ।
ವಸನ ಬಿಟ್ಟು ಜಿನಸ್ಥಿ ಭಸ್ಮ ಧರಿಸಿ ॥
ವೃಷಭ ವಾಹನನಾಗಿ ಭೂತ ಪ್ರೇತಗಳೊಳು ಸ್ಮ ।
ರಿಸದ ಭೂಮಿಯೊಳಿರಲು ಪೂಜಿಪರು ಸುರರೆಲ್ಲ ೧

ತಂದೆ ತಲೆ ಕಡಿದುದಕೆ ಕುಂದು ಹೊಂದದಲಿದ್ದೆ ।
ನಿಂದಿತನ ಶಿರದ ಮೇಲಿರಿಸಿಯಿದ್ದೆ ॥
ಒಂದೊಂದೆ ನೀನೆ ಪರದೈವ ಎಂದು ಪೇಳ್ದೆ । ಗೋ
ವಿಂದನಿಂದರ್ಚನೆಯ ಕೊಂಡೆ ಭಳಿ ಭಳಿರೆ ಶಿವ ೨

ಗುರುವೆನಿಸಿಕೊಂಬೆ ಪ್ರಾಣೇಶ ವಿಠಲನೊಳು । ಮ
ತ್ಸರಿಸುತಿಹ ಖಳರಿಗೆ ಇದಲ್ಲವೇನೊ ॥

ಸರಿವಬ್ಬರಿಗೆ ಆಹೆನೆಂಬುವನು ಕೆಡುವ ನೀ ।
ಉರುಗನಂತಾಗಬೇಕೆಂದಾಗಿ ಮೆರೆದೆಲವೊ ೩

## ೧೩೪

ಶಿವಭಕ್ತನಾಗೋ ಪ್ರಾಣೀ । ಅವನಿಯಲ್ಲಿ ಪರದಲ್ಲಿ ॥
ವಿವಿಧ ಭೋಗಗಳ ಕಾಂಬೀ । ಶಿವಭಕ್ತನಾಗೊ ಪ್ರಾಣೀ ಪ

ಲಿಂಗಾಧಾರಣ ಮಾಡಿ ಜಂಗಮರಧಿಕಾರಾ ಸಾರೀ ।
ಹಿಂಗಿಕೊ ಭವಜನ್ಮ ದುಃಖ ॥
ಸಂಗಾವಾಗಿ ರುದ್ರಾಕ್ಷಿಯಂಗಾಳರ್ಚಿಸೂತಾ । ನಿಃ
ಸಂಗನಾಗೊ ದುರ್ವಿಷಯದೀ ೧

ಸುವಿವೇಕಿ ಮನಸಿಲಿಂದಾ ಶಿವಶಬ್ದವ ಶೋಧಿಸಿ ।
ಕವಿಗಳ ಮುಖದಿಂದ ತಿಳಿಯೋ ॥
ನವತ್ರಿಪತ್ರಯುಕ್ತ ಬಿಲ್ವಾ ಸಮರ್ಪಣೆ ಮಾಡೊ ।
ಸವೆಯಾದಂಥ ಪದವೈದೂವಿ ೨

ಭಜಿಸೋ ವೀಭೂತಿಯನ್ನು ದ್ವಿಜಸ್ತೋಮಾಕೆರಗಾದೀರೊ ।
ಪ್ರಜಗಳಿಗೆ ತೋರದಿರು ಭಾವಾ ॥
ಅಜ ಪ್ರಾಣೇಶ ವಿಠ್ಠಲಾನು ಅಜಿನಾಂಬರ ಸಮನೆನಬ್ಯಾಡಾ ।
ವಿಜಯವಂತನಾಗುವೀ ಜಗದೀ ೩

## ೧೩೫

ಶಿವ ಸತ್ತ ಎಂಥ ಆಶ್ಚರ್ಯವು ಇದು ನೋಡಿ ।
ಕವಿಗಳು ಮನಕ ತಂದು ॥

ಭುವನತ್ರಯಗಳಲ್ಲಿ ಪ್ರಖ್ಯಾತವಾಗಿದೆ ।
ಅವಿವೇಕಿಗಳ ಮಾತಲ್ಲಾ ಪ

ಅಧಮರು ಬಹು ಬಗೆಯಿಂದಲ್ಲಿ ಘಳಿಸೀದಾ ।
ಬದುಕು ವ್ಯರ್ಥವಾಹದು ॥
ಬುಧರ ಪದಾರ್ಥವು ಸಾರ್ಥಕವಾಹದೆಂಬು ।
ದಿದೆ ಸಾಕ್ಷಿ ಎನಬಹುದೂ ೧



ಭೂಭುಜರಿಗೆ ಭೂಷಣಾದವು ಆಯುಧ ।
ಈ ಭೂಮಿ ಪೊತ್ತ ವ್ಯಾಳಾ ॥
ಆ ಭಿಕ್ಷುಕನ ಕುಟುಂಬವ ರಕ್ಷಿಸುತಿಪ್ಪದು ।
ಶೋಭಿಸುತಿಪ್ಪ ಕಪಾಲಾ ೨

ಮಂದೀಯ ನಂಜಿಸುತಿಪ್ಪದು । ಆತನ
ಹಿಂದೆ ಮುಂದಿರುವ ಗಣಾ ॥
ನಂದೀ ಪಿತೃಗಳಿಗೆ ಕೈವಲ್ಯಾ ತೋರಿತು ।
ಸಂದೇಹವಿನಿತಿಲ್ಲವೂ ೩

ಸೋಮ ಕಂಣಾದ ಜಗತ್ತೆಕ್ಕ ದಿಕ್ಕಿಗೆ ।
ಸ್ವಾಮಿ ಎನಿಸಿದ ವಹ್ನೀ ॥
ಧೀಮಂತರಾತನ ಮಡದೀಯ ಪೂಜಿಸಿ ।
ಶ್ರೀಮಂತರಾಗೂವರೂ ೪

ಮೌನಿಗಳಿಗೆ ಚರ್ಮ ವೈಷ್ಣವರಿಗೆ ಭಸ್ಮ ।
ತಾನು ಪ್ರೀಯಕರಾದೀತು ॥
ಪ್ರಾಣೇಶ ವಿಠಲಾನೊಳರ್ಧಾಂಗ ವಾಗಭಿ ।
ಮಾನಿಯೊಳರ್ಧವಿಟ್ಟಾ ೫

೧೩೬

ಇಂದು ನೋಡಿದೆ ಹರಿಹರನ ದೈತ್ಯ ।
ವೃಂದಕ ಪ್ರಿಯನ ವರವ ಕೊಡುವನಾ ಪ

ಶಾಮವರ್ಣನ ವಿಷ ಹರನ ಪೂರ್ಣ ।
ಕಾಮನ ಶಿವನ ಕೇಶವನ ಶಂಕರನ ॥
ಕಾಮಿನಿಯರ ಮೋಹಿಸಿದನ ಚಂದ್ರ ।
ವ್ಯೋಮ ನದಿಯು ಮಸ್ತಕದೊಳೊಪ್ಪುವನ ೧

ಕರಿಬಾಧೆಯನು ಕಳೆದವನ, ಭಸ್ಮ ।
ಧರನ ಪೀತಾಂಬರ ನಿಭ ಚರ್ಮಾಂಬರನ ॥
ಅರಿಧರನ ಶೂಲಕರನ ಲಕ್ಷ್ಮೀ ।
ವರನ, ಗೌರಿಪನ, ರಕ್ಷಕನ, ಶಿಕ್ಷಕನ ೨

ಸ್ವಾಮಿ ಪ್ರಾಣೇಶ ವಿಠ್ಠಲನ ರಾಮ ।
ನಾಮವೇ ತಾರಕವೆಂದು ಪೇಳುವನ ॥
ಶ್ರೀ ಮಧ್ವ ಮುನಿಗೊಲಿದವನ ಪಾರ್ಥ ।
ಪ್ರೇಮಕೆ ಮೆಚ್ಚಿ ಬಾಣವನು ಕೊಟ್ಟವನ ೩

## ಪಾರ್ವತೀದೇವಿ ಸ್ತೋತ್ರ

೧೩೭

ಪಾರ್ವತಿ ದಕ್ಷಕುಮಾರಿ ನಿನ್ನ । ಸಾರ್ವೆ ಸಂತತ ಕುಜನಾರೀ ॥ಅಪ॥
ದೂರ್ವಾಸನರ್ಧಾಂಗಿ ಸರ್ವಜ್ಞೆ ಯನ್ನಯ ॥
ಚಾರ್ವಾಕ ಮತಿ ಕೀಳಿ ತೋರ್ವದು ಸುಪಥವ ಪ

ದುರ್ಗೆ ಭವಾನಿ ರುದ್ರಾಣಿ ಗೌರಿ । ಸ್ವರ್ಗಜಿನಾರಾಧ್ಯ-
ಮಾನಿ ॥ ಸೇರೆ
ದುರ್ಗುಣದವರ ಸುಜ್ಞಾನಿ । ಭಕ್ತವರ್ಗ ಪೋಷಕ ಶುಕ-
ವಾಣೀ ॥ಆಹಾ॥
ನಿರ್ಗುಣರಾದುತ್ತಮರ್ಗೆವೊಲಿವ ಅಪ ।
ವರ್ಗದ ನಾಳೆ ನರರ್ಗೆ ಮಣಿಸದಿರೆ ೧

ಚಂಡಿ ಕಾತ್ಯಾಯಿನಿ ಉಮ್ಮಾ ನಾಲ್ಕು । ಮಂಡೆಯವನ
ಸೊಸೆ । ಯಮ್ಮಾ । ನಾಡೆ
ಕಂಡು ಭಜಿಪೆ ನಿತ್ಯ ನಿಮ್ಮ । ಪಾದ ಪುಂಡರೀಕ ದ್ವಯ
ವಮ್ಮಾ ॥ಆಹಾ॥
ಉಂಡು ವಿಷವ ನಿನ್ನ ಗಂಡ ಬಳಲಿ ಕೈ ।
ಕೊಂಡೌಷಧ ತಂಡ ತಂಡದಲೆನಗೀಯೆ ೨

ಪಾವಕನೊಳು ಪೊಕ್ಕ ಪತಿವ್ರತೆ । ಯಾವಾಗ ಮಾನಿ
ಸತ್ಕಥೆ । ಯಲ್ಲಿ
ಭಾವನೆ ಕೊಡೆ ಪ್ರತಿ ಪ್ರತಿ । ಜಾವ ಜಾವಕೆ ಷಣ್ಮುಖ
ಮಾತೆ ॥ಆಹಾ॥
ಕೋವಿದರೊಡತಿ ಕೇಳಾವಾಗ ವೈರಾಗ್ಯ ।
ವೀವದು ದುರಾಪೇಕ್ಷೆ ನಾವೊಲ್ಲೆನೆಂದೆಂದೂ ೩

ಬೇಡಿದಭೀಷ್ಟವ ಕೊಡುವೆ । ದಯ ಮಾಡಿ ಭಕ್ತರ ಕರ
ಪಿಡಿವೆ । ದೋಷ
ಕಾಡುಳಿಯದಂತೆ ಸುಡುವೆ । ನಿನ । ಗೀಡೆ ಮಹದ್ಭಯ
ಕಡಿವೆ ॥ಆಹಾ॥
ರೊಢೀಶ ಶಿವನೆಂದು ಆಡಿಸದಿರು ಬುದ್ಧಿ ।
ಗೇಡಿ ದಾನವರಂತೆ ನೀಡು ಶ್ರೀಹರಿ ಸೇವೆ ೪

ಮೇಶ ಪ್ರಾಣೇಶ ವಿಠ್ಠಲನೆ । ಜಗದೀಶನೆಂಬುವ ದಿವ್ಯ-
ಜ್ಞಾನೆ । ಕೊಟ್ಟು ।

ಪೋಷಿಪುದೆನ್ನ ಸುಜಾಣೆ । ನೀನುದಾಸಿಸೆ ನಾನಾರ
ಕಾಣೆ ॥ಆಹಾ॥
ಈಶೆ ಪಂಚ ಮಹಾದೋಷಿ ಬಿಡದೆ ನಿತ್ಯಾ ।
ಈ ಶರೀರದೊಳಿಹ್ಯ ಘಾಸಿ ಮಾಡುವನನ್ನು ೫

## ೧೫೮

ಪಾಲಿಸೆ ಶ್ರೀ ಗೌರೀ ಎನ್ನನು ಪ

ಪಾಲಿಸೆ ನಿನ್ನಯ ಪಾಲಿಗೆ ಬಂದೆನು ।
ಬೀಳುವೆ ಸರ್ವದ ಕಾಲಿಗೆ ಕರುಣದೀ ಅ.ಪ.

ಶರಣೆಂದವರನು ಪೊರೆವಳು ಎಂಬುವ ।
ಬಿರಿದು ನಿನ್ನದು ಎಂದರಿದೆನು ತ್ವರದಿಂ ೧

ಸನ್ಮತ ಪುರುಷನ ಯಿನ್ನೆಲ್ಲಿ ಕಾಣೆನೋ ।
ಮನ್ಮಥನೆಂಬುವ ಬನ್ನಬಿಡಿಪ ಬಲು ೨

ಕಾಣೆನು ಶಾಂತಿಯ ಏನೆಂಧೇಳಲಿ ।
ಪ್ರಾಣೇಶ ವಿಠಲನು ತಾನೆಯೇ ಬಲ್ಲನು ೩

## ೧೫೯

ನಮೋ ನಮೋ ಪಾರ್ವತಿ ನಿನಗೇ ।
ಸಮೀರ ಜನಕ ಒಲಿಯಲೆನಗೇ ಪ

ಬಂದಾ ರಾಯರ ಶಕ್ತಿ ಬಂಧನ ಮಾಡಿ ಯೋಗಾ ।
ಸಂಧಿಸಿ ಕೊಡು ರಾಮಚಂದ್ರನಿಗೇ ೧

ಕ್ರೂರಾ ರಾವಣ ನಿಂತು ದೂರೆ ಮಾಡಿದ ಮಾತು ।
ಈ ರಾಯರಿಗೆ ಸ್ಮೃತಿ ಹಾರಿಸಮ್ಮಾ ೨

ಪ್ರಾಣೇಶ ವಿಠಲಾನೆ ಆಣುಮನಾದರೆ ।
ನಾನೆಂದು ಮರಿಯೆ ನಿನ್ನನು ದೇವಿ ೩

## ೧೪೦

ಮಾತು ಸುಳ್ಳಾಗೊದೆ ದುರಿತಾರಿ । ಯನ್ನ
ನಾಥನಿಂದಿಗೆ ರಕ್ಷಿಸೇ ಗೌರಿ ಪ

ಮಾತೆ ನಿನ್ನಯ ಪಾದ ಪ್ರೀತಿಂದ ಭಜಿಸಿದ್ದ ।
ಕ್ಕೀತ ಸಿಕ್ಕಿದ್ದನು ಚಾತುರ್ಯ ಪುರುಷ ೧

ಧಾತಾಜನಾಡೀದ ಮಾತೀಗೆ ಕೋಪಾದಿ ।
ಈ ತೆರ ಮಾಡಿದ ತಾತನು ನೊಂದೂ ೩

ಪೋರಾನಲ್ಲಮ್ಮಿವಾ ಆರೆಂದು ಹೇಳಾಲಿ ।
ಶೌರಿಯ ಮೊಮ್ಮಗ ನೀರಜ ನೇತ್ರೆ ೩

ಭೃತ್ಯಾರ ಅಭಿಮಾನ ಮತ್ಯಾಪಗುಂಟಲ್ಲೆ ।
ಅತ್ತತ್ತವಾದೀನೆ ಹೆತ್ತವ್ವ ನಿನಗೇ ೪

ಪ್ರಾಣೇಶ ವಿಠಲನು ಬಾಣನ ಶಿಕ್ಷಿಸಿ ।
ತಾನೆ ಯೀವಂದಾಗಿ ನೀನೊಲಿಯವ್ವಾ ೫

## ೧೪೧

ತಾಯಿ ಸೌಪರ್ಣೀದೇವೀ ನೀ ।
ಕಾಯದೆ ಜರಿಯಲನ್ಯರಾ ॥

ನಾನೆಲ್ಲೀ ಕಾಣೆನೆ ಧರೆಯೊಳು ।
ಮನಸಿರಲೀ ಶ್ರೀ ಅರಸನಲ್ಲೇವೇ ಕೇಳು ಪ

ಕ್ಷೋಣಿಯೊಳಗೆ ಕ್ರಿಯಸ್ತರ ।
ಆ ನೆಲ್ಲೀ ನೋಡೆ ನಿನ್ನಂತೆ ॥
ಆ ನಾಗರಾಜನ ಮಾತೆಯ ಸೇವೆಯೊಳಿದ್ದೆ ।
ನಾನೆಂತು ಮಾಡಲೆ ಸ್ತುತೀಯಾ ೧

ವಾರುಣೀ ಶ್ರೀ ರೇವತಿ ।
ಯಾ ರೂಪಿ ನಮಸ್ಕರಿಪೇ ॥
ನಾರಾಯಣನಾ ತೋರಿಸಮ್ಮಾ ದೋಷಗಳ ನೀ ।
ವಾರಿಸಿ ರಕ್ಷೀಸಬೇಕಮ್ಮಾ ೨

ಶ್ರೀ ಸತಿ ಪಾರ್ವತೀ ದಕ್ಷ ।
ಧ್ವಂಸೀ ಶುದ್ಧ ಪತಿವ್ರತೀ ॥
ಆ ಷಣ್ಮುಖನ ಜನನೀ । ಕಾಣಿಸು ಶ್ರೀ ಪ್ರಾ-
ಣೇಶ ವಿಠ್ಠಲಾನ ಕರುಣೀ ೩

## ಶ್ರೀತುಲಸೀದೇವಿ ಸ್ತೋತ್ರ

### ೧೪೨

ನಮೋ ನಮೋ ಶ್ರೀ ತುಲಸೀ । ಪಾಹಿ ಪಾಹಿ ।
ಕುಮತಿಯ ಪರಿಹರಿಸೀ
ಅಮಿತ ಮಹಿಮೆ ಸದ್ಗುಣ ಗಣ ಪೂರ್ಣೆ ಸು- ।
ಕಮಲೇಕ್ಷಣ ಮಧುಸೂದನನರಸೀ ಪ

ಅಂದಿನ ಕಾಲಲೀ ಹರಿ ಪದ ।
ವಂದಿಸಿ ಭಕುತಿಯಲೀ ॥

ಅಂದದಿ ವರ ಪಡೆದಿಂದಿಗು ಸರ್ವರ ।
ಮಂದಿರದೊಳಗಿಹೆ ಪೂಜೆಯ ಕೊಳುತಲಿ ೧

ಧನುವಂತರಿ ನಯನಾದಿಂದಿಳಿ ।
ದೊನಜೆ ಜಲಂಧರನಾ ಲ- ।
ಲನೆಯ ಉದ್ಧರಿಸಿದ ಪಾವನ ತರೆ ।
ಎನಗಸದಳ ವರ್ಣಿಸೆ ನಿನ್ನ ಗುಣಾ ೨

ನಾ ನಂಬಿದೆ ನಿನ್ನಾ ದೇವತೆ ।
ಮಾನಿನಿ ಮಣಿಯನ್ನಾ ॥
ಹೀನತೆಯಣಿಸದೆ ಕರುಣಿಸಿ ಸರ್ವದ ।
ಪ್ರಾಣೇಶ ವಿಠಲನ ಧ್ಯಾನದೊಳಿರಿಸೆ ೩

## ಷಣ್ಮಹಿಷಿಯರ ಸ್ತೋತ್ರ

### ೧೪೩

(ಶ್ರೀ ದಾಸರಾಯರ 'ಮುಯ್ಯದ
ಪದ ದಿಂದ ಆಯ್ದುಕೊಂಡ ಪದವಿದು)

ನಮೋ ನಮೋ ನಮೋ ಜಾಂಬವತೀ ।
ನಮೋ ಲಕ್ಷಣಾ ನೀಲಾ ಭದ್ರೀ ॥
ನಮೋ ನಮೋ ಶ್ರೀ ಮಿತ್ರವಿಂದಾ ।
ನಮೋ ನಮೋ ಹೇ ಕಳಿಂದಾ ೧

ಹರಿ ಪ್ರೀಯರೂ ನೀವವ್ವಾ ।
ಹರಿಭಕ್ತಿ ಪಾಲೀಸಿರವ್ವಾ ॥
ಹರುಷ ವೈದಿಸಿರೆವ್ವಾ ।
ದುರಿತ ಪರಿಹರಿಸೀರೆವ್ವಾ ೨

ಘನ್ನ ಬುದ್ಧೀ ಪಾಲಿಸಿರೆವ್ವಾ ।
ಯನ್ನ ಉದ್ಧರಿಸೀರೆವ್ವಾ ॥
ಬಿನ್ನಪವ ಕೇಳೀರವ್ವಾ ।
ಅನ್ನಿಗನೆನ ಬ್ಯಾಡಿರವ್ವಾ ೩

# ಕಾಮದೇವರ ಇಂದ್ರದೇವರ ಹಾಗೂ ಇನ್ನಿತರರ ಸ್ತೋತ್ರಗಳು

## ೧೪೪

ಶರಣು ಶರಣು ರತಿನಾಥ ।
ಸುರವರ ಅನಿರುದ್ಧನ ತಾತಾ ॥
ಕರುಣ ಪಯೋನಿಧೆ ರುಗ್ಮಿಣಿ ಜಾತಾ ।
ತ್ವರದಿಂ ಲಾಲಿಸು ಮಾತಾ ಪ

ಭರತನೆ ಸನತ್ಕುಮಾರಾ । ಸೂ
ದರುಶನ ಪರಮೋದಾರಾ ॥
ಹರ ನಂದನ ನತ ಬಂಧು ಕುಮಾರಾ ।
ಕರ ಪಿಡಿ ಕೃಷ್ಣ ಕುಮಾರಾ ೧

ತರುಣಿಯ ಬಿನ್ನಪ ಶಿವನಲಿ ಬಂದು ।
ಶರೀರವ ಕರಗಿಸಿದೆಂದೂ ೨

ಮೀನನ ಬಸುರೊಳು ಪೊಕ್ಕೆ । ಆ
ಮಾನವರ ಕೈಗೆ ಸಿಕ್ಕೆ ॥
ದಾನವನನ್ನು ಬಿಸುಟಿದೆ ಕುಕ್ಕೆ । ಆ
ನೊರಣಿಸಲಿಕ್ಕಿದು ಶಕ್ಯೆ ೩

ಭುವನಜ ಅಶೋಕ ಚೂತಾ । ಹೇ
ನವ ಮಲ್ಲಿಕುತ್ಪಲ ಧರಿತಾ ॥
ಪವನ ಉಡುಗಣಪ ವಸಂತ ಮಿಳಿತಾ ।
ಸುವಿಶಾಲ ಅದ್ಭುತ ಚರಿತಾ ೪

ಅಕಳಂಕನಂಗ ಮಾರಾ । ಹೇ
ಮಕರ ಧ್ವಜ ಶುಕದೇರಾ ॥
ಅಕುಟಿಲ ಪ್ರಾಣೇಶ ವಿಠಲನುದಾರಾ ।
ಸುಕಥೆ ಅರುಪು ಗಂಭೀರಾ ೫

## ೧೪೫

ನಮೋ ನಮೋ ಶಚಿ ವಲ್ಲಭತೇ ।
ರಮೆಯ ರಮಣನಲಿ ನೀಡು ಮತೆ ಪ

ಹತ್ತು ಕಲ್ಪಗಳಲ್ಲಿ । ಉತ್ತಮ ಶ್ಲೋಕನ ॥
ತತ್ವ ವಿಚಾರ ಮಾಡ್ದೆ । ಚಿತ್ತಶುದ್ಧದಿ ೧

ಮೂರೊಂದರ್ಧಾ ಕಲ್ಪ । ಚಾರು ತಪಸ್ಸು ಮಾಡಿ ॥
ನಾರಾಯಣನ ಕಂಡ । ಸೂರಿ ಗಮ್ಯಾ ೨

ಪ್ರಾಣೇಶ ವಿಠ್ಠಲನ । ನೀನೊಲಿಸೀದೆ ಪೊಗೆ ॥
ಯಾನುಂಡು ಕೋಟಿ ವತ್ಸರ ನಾಕದಿ ೩

## ೧೪೬

ನೀ ಸಾಹೆಯಾಗು ಯಮಗನುಗಾಲ ।
ಶೇಷಾದೇವರೆ ರೋಹಿಣಿ ಬಾಲಾ ಪ

ಮೂರುತಿಯಲ್ಲಿ ಪುಟ್ಟಿ । ನಾರಾಯಣನ್ನ ಕೂಡಿ ॥
ಚಾರು ಬದರಿಯಲ್ಲಿ ತೋರುತಿಹನೆ ೧

ದಶರಥನ ಮಡದಿ । ಬಸುರೀಲಿ ಜನಿಸೀದಿ ॥
ಕುಸುಮನಾಭನರ್ಚನೆ ಎಸಗಿದಿಯೋ ೨

ಪ್ರದ್ಯುಮ್ನ ಪರಿಯಂಕ । ರುದ್ರಾನಲಂಕಾರ ॥
ಭದ್ರ ಪ್ರದಾಯಕ ಭಕ್ತ ಪೋಷಾ ೩

ನೀಲಾಂಬರವನುಟ್ಟ । ತಾಳಾಂಕ ಬಿನ್ನಪ ॥
ಲಾಲೀಸೊ ನಿನ್ನವನೆಂದ ನಿಶಾ ೪

ಪ್ರಾಣೇಶ ವಿಠಲನ । ಧ್ಯಾನದೋಳಿರುವಂತೆ ॥
ನೀನೊಲಿವದು ದೂರು ನೋಡದಲೇ ೫

## ೧೪೭

ರಕ್ಷೀಸಬೇಕೆಮ್ಮನನುದಿನದಲ್ಲಿ ।
ಪಕ್ಷಿರಾಜನೆ ಹರೀಸ್ಯಂದನಾ ಸ್ವಾಮಿ ಪ

ಇಂದ್ರಲೋಕಕ್ಕೆ ಪೋಗಿ ಕಲಹ ಮಾಡಿ ಪೀಯೂಷ ।
ತಂದನುಜರಿಗಿತ್ತ ಧೀರನೆ ।
ಸಿಂಧೂವಿನೊಳಗಿದ್ದ ಕೂರ್ಮ ಗಜ ಮಂದಿಯಾ ।
ತಿಂದು ದಕ್ಕಿಸಿಕೊಂಡ ವೀರನೇ ೧

ಪಾದಪ ಮುರಿದು ವಾಲಖಿಲ್ಲ್ಯರ ಪೋಷಿಸಿ ।
ಮೋದದಿಂದ ವರವು ಪಡಿಯೋ ॥
ಮಾಧವನಂಘ್ರಿ ಕಮಲದೊಳಗೆ ಇಟ್ಟ ।
ಹೇ ದಯಾಂಬುಧಿ ನಿನಗೆಣೆ ಯಾರೋ ೨

ಅರುಣಾನುಜ ಮಾತೆಯ ಬಯಕೆ ಪೂರೈಸೀದ ।
ಪರಮ ಸಮರ್ಥ ಭಕ್ತವತ್ಸಲಾ ॥
ಉರಗಾಶನನೆ ನಿನ್ನ ಪ್ರಾರ್ಥಿಸುವೆನು ನಿತ್ಯ ।
ಹರಿಸೇವೆ ವಿನಹ ಮತ್ತೊಂದೊಲ್ಲೆನೊ ೩

ಪ್ಲವಗರ ಪಾಲಿಸಿದೆ ರಘುಜಾನ ಒಲಿಸಿದೆ ।
ತವಕ ಬಲಿವೈದ ಮುಕುಟ ತಂದೆ ॥
ದಿವಿಜರಿಗೆ ಸಹಾಯವಾದೆ ವಿಪ್ರರ ಕಾಯ್ದೆ ।
ಅವರಾರೇನರಿಯರೊ ನಿನ್ನ ಲೀಲೆ ೪

ಶ್ರೀನಾಥನ ಪಾದಾಬ್ಜದಲ್ಲಿ ನಿರತ ಮನ ।
ತಾನಿರುವಂತಾಗಲಿ ಖೇಚರಾ ॥
ಮೌನಿ ಕಶ್ಯಪ ಜಾತಾ ಲಾಲಿಸುವದೆನ್ನ ಮಾತಾ ।
ಪ್ರಾಣೇಶ ವಿಠಲನ ನಿಜದೂತ ೫

## ವ್ಯಾಸಕೂಟ, ದಾಸಕೂಟದವರ ಹಾಗೂ ಇತರ ಗುರುಗಳ ಸ್ತೋತ್ರಗಳು

### ೧೪೮

### ಶ್ರೀಮಧ್ವರಾಯರ ಸುವ್ವಾಲೆ

ಸುವ್ವಾಲೆ ಸುವ್ವಿ ಸುವ್ವಾಲೆ ಪ

ಗುರು ಮಧ್ವರಾಯರ ಭಾಗ್ಯ ।
ಹರ ಮುಖ್ಯ ನಿರ್ಜರರಿಂದ ವರ್ಣಿಸಲಸದಳವಮ್ಮ ॥ಅ.ಪ.॥

ಇಂದಿರೆ ಮೂರು ರೂಪದಿಂದ ತಾನೆ ಪಡೆದಳು ।
ಎಂದು ಪೇಳುವದಾವೇದ । ಸುವ್ವಿ ॥

ಮಂದಮತಿಗಳಿವರ ಮಂದಿಯಂತೆ ತಿಳಿದು ।
ಅಂಧ ಕೂಪದೊಳು ಬೀಳುವರೆ । ಸುವ್ವಿ ೧

ನೂರಾ ತೊಂಬತ್ತೆಂಟು ಘೋರ ತಾಪಸು ಮಾಡಿ ।
ಮೂರು ರೂಪವೀಗಾದನೆ । ಸುವ್ವಿ ॥
ಮೀರೆ ಈ ಕಲ್ಪವನು ವಾರಿಜಾಸನನಾಗಿ ।
ಈರೇಳು ಲೋಕವಾಳುವನೆ । ಸುವ್ವಿ ೨

ಎಪ್ಪತೊಂದು ಮಹಾಯುಗ ಇಪ್ಪ ಒಬ್ಬೊಬ್ಬ ಮನು ।
ಅಪ್ಪಪ್ಪ ಬಹಳಾಯುಷೆಂಬೊರೊ । ಸುವ್ವಿ ॥
ಸುಪ್ರಸಿದ್ಧವಾದ ದ್ವಿಸಪ್ತ ಮನುವು ಶೃತಸೋಮ ।
ನಪ್ಪನಿಗೊಂದೇ ದಿವಸವೆ । ಸುವ್ವಿ ೩

ಈ ರೀತಿ ನಾಮದಿಂ ನೂರು ವತ್ಸರ ಬಾಳಿ ।
ನಾರಾಯಣನ ಭಜಿಸುವ । ಸುವ್ವಿ ॥
ಘೋರ ಪ್ರಳಯ ಕಾಲಕ್ಕು ಮಾರಮಣನ ದಯದಿಂದ ।
ಬಾರದಜ್ಞಾನವೀತಂಗೆ । ಸುವ್ವಿ ೪

ಈತನಾಳಿಕೆಯೊಳು ಮೂವತ್ತೊಂಬತ್ತು ಕಲ್ಪಕ್ಕೆ ।
ಭೂತನಾಥಗೆ ಅಪರೋಕ್ಷ । ಸುವ್ವಿ ॥
ಆತನಾರಭ್ಯ ನಾರನಾಗ ಪರಿಯಂತ ಪರೋಕ್ಷ ।
ನೀತ ಕಲ್ಪಗಳಲ್ಲೆಹದೆ । ಸುವ್ವಿ ೫

ಎಲ್ಲ ದೇವರು ನಿತ್ಯದಲ್ಲಿ ಬಂದು ಬಂದೀತ ।
ನಲ್ಲಿ ಉಪದೇಶ ಕೊಂಡಾರೆ । ಸುವ್ವಿ ॥
ಖುಲ್ಲ ಮಾಯಿ ಸಮೂಹ ಗೆಲ್ದು ವೇದವ್ಯಾಸ ।
ನಲ್ಲಿ ಅದ್ಯಾಪಿಯಿಹರೆ । ಸುವ್ವಿ ೬

ಪಾನೀಯಜಾಜಾಂಡದೊಳು ।
ನಾನಾ ಜೀವರಿಗೆ ಚೇತನೀತನಿಂದಲೆಯೇ । ಸುವ್ವಿ ॥

ಏನು ಪೇಳಲಮ್ಮಾ ಈ ಪ್ರಾಣಿಯೊಲಿದರೆ ಶ್ರೀ ।
ಪ್ರಾಣೇಶ ವಿಠಲನೊಲಿದಂತೆ । ಸುವ್ವಿ ೭

## ೧೪೯

## ಶ್ರೀ ಪದ್ಮನಾಭತೀರ್ಥರ ಸ್ತುತಿ

ಒದಗಿ ಪಾಲಿಸೊ ಭವಾಂಬುಧಿಯ ದಾಟಿಸೊ ಪ

ಮದನ ಜಿತ ಭೂಸುರ ಶರಣ್ಯ ।
ಪದುಮನಾಭ ಯತಿವರೇಣ್ಯ ಅ.ಪ.

ಸದ್ಯ ದೊಡ್ಡ ಮಾತು ಅಪ್ರ ।
ಬುದ್ಧನಾ ನುಡಿಯೆ ಕೇಳು ॥
ಮಧ್ವ ದ್ವೇಷಿಗಳಲಿ ಎನ್ನ ।
ವಿದ್ಯೆ ತೋರಿ ಬದುಕದಂತೆ ೧

ಒಡಲಿನಾಸೆಗಾಗಿ ಕಂಡ ।
ಕಡೆಗೆ ತಿರುಗಿ ಪ್ರಾಪ್ತಿಯೆಂಬು ॥
ದುಡುಗಿ ಪೋಗಿ ಕೊನೆಗೆ ಮನೆಗೆ ।
ಮಿಡುಕಿಕೊಳುತ ಬರುವಧಮನ ೨

ಹಾನಿ ಲಾಭ ಕ್ಲೇಶ ಮೋದ ।
ವೇನು ಆವ ಕ್ಷಣಕೊದಗಲು ॥
ಪ್ರಾಣೇಶ ವಿಠಲ ಕರುಣೆಯಿಂದ ।
ತಾನೆ ಕೊಟ್ಟನೆಂಬ ಸುಮತಿ ೩

## ೧೫೦

### ಶ್ರೀಮಾಧವತೀರ್ಥರ ಸ್ತುತಿ

ನೋಡಿದೆ ನಾ ಧನ್ಯನಿಂದಿಗೆ । ನೋಡಿದೆ
ಗುರು ಮಾಧವ ತೀರ್ಥರ ವೃಂದಾವನವನ್ನು ಪ

ಗಂಗೇನು ಪ್ರಯೋಜನವಿಳೆಯೊಳು ಬಾಹದಕೆ ।
ಪಿಂಗಳಗೇನು ಜ್ಞಾನಿಗಳಿಗೇನು ॥
ತುಂಗ ಮಹಿಮೆಯಿಂದ ಅಜ್ಞ ಜನರ ಪಾಪ ।
ಹಿಂಗಿಸಬೇಕೆಂಬದಲ್ಲದೆ ಮನವೆ ೧

ನರಹರಿ ಗುರು ಸುತ ವರದ ಅಕ್ಷೋಭ್ಯ ಮುನಿ ।
ಕರ ಪೂಜಿತಾರವಿಂದ ನಾಭರಲ್ಲಿ ॥
ಧರಾ ಧರಜ ತೀರದಿ ಸತ್ಯ ಮುನಿಗಳಿಂದ ।
ನಿರುತಾರಾಧನೆ ಕೊಳುತಿರ್ಪರು ಮನವೆ ೨

ಏನು ಇವರ ಬಣ್ಣಿಸಲಿ ಎನ್ನಿಂದೊಶವಲ್ಲ ।
ಆನತ ಜನರಿಗೆ ಕರುಣಿಸಿ ॥
ಪ್ರಾಣೇಶ ವಿಠಲನ ಧಾಮ ತೋರಿಸುವರು ।
ಕ್ಷೋಣಿಯೊಳಗಪ್ರತಿಮ ಮಹಿಮರು ೩

## ೧೫೧

### ಶ್ರೀಅಕ್ಷೋಭ್ಯತೀರ್ಥರ ಸ್ತುತಿ

ರಕ್ಷಿಸೆನ್ನನು ದಯಾಂಬುಧೇ ರಕ್ಷಿಸೆನ್ನನು ಪ

ರಕ್ಷಿಸೆನ್ನನು ಪಾಪ ಶಿಕ್ಷಿಸಿ ಕರುಣದಿ ।
ಪಕ್ಷಿವಾಹನ ಪ್ರಿಯ ಅಕ್ಷೋಭ್ಯ ಮುನಿಪ ಅ.ಪ.

ಅನುಮಾನವಿಲ್ಲದೆ ಮಣಿದೆ ತವಾಂಘ್ರಿಗೆ ।
ಅನಘ ಶ್ರೀ ಮಾಧವ ಮುನಿ ಕರಜಾತ ೧

ಜಯ ಮುನಿ ವಂದಿತ ಜಯವಂತ ನೀನೆವೆ ।
ದಯ ಮಾಡಿದರೆ ದುಃಖ ಬಯಲಾಗಲರಿಯೆ ೨

ಪ್ರಾಣೇಶ ವಿಠಲನ ಧ್ಯಾನದೊಳಗೆ ಮನ ।
ತಾನಿರುವಂದದಿ ಪೋಣಿಸು ಜವದಿ ೩

೧೫೨

## ಜಯರಾಯರ ಸ್ತುತಿ

ವಿಜಯರಾಯರಂಘ್ರಿ ಜಲಜವ ।
ಭಜಿಸಿ ಜನರು ತಡೆಯದಲೆ । ಜವಾ ಗುರು ಪ

ಕುತರ್ಕಿಗಳ ಹತರ್ನುಗೈಸಿದ ।
ಶತ ಕೃತಾಲ್ಯರ ಸುತರಾದ । ಗುರು ೧

ವಸುಧಿಯೊಳಗನ್ಯ ವೇಷದಿಂ ಚ ।
ರಿಸಿದ ಲೇಸಾಗಿ ಸಾರಥಿ ಶ್ರೀಶನಾದ । ಗುರು ೨

ಖ್ಯಾತಿಯಿಂ ಲೋಕದಿ ವಾತಜನ್ನೊಲಿಸಿದ ।
ದಾತನ ಅರಿಯ ಜಗನ್ನಾಥನುಳಿದು । ಗುರು ೩

ದುಷ್ಟರ ಜರಿದ ವಿಶಿಷ್ಟರ ಪೊರೆದ ಶ್ರೀ ।
ಕೃಷ್ಣನ ಸಖನೋರ್ವ ಸೃಷ್ಟಿಯೊಳಗೆ । ಗುರು ೪

ಈಶಗೊಲಿದ ತುರುಗಾಸ್ಯನಾಳುಗಳೊಳು ।
ಈ ಸುಗುಣಿಗೆ ಕಾಣೆ ನಾ ಸರಿಯಾ । ಗುರು ೫

ತಾತನಾಲಯಕೈದಿ ನೂತನ ವಿದ್ಯಂಗ ।
ಳಾತುರದಲಿಯ್ಯೆದಿದಾತ ನೀತ । ಗುರು ೬

ಪ್ರಾಣೇಶ ವಿಠಲನು ತಾ ನುಡಿಸದೆ ತುಟಿ ।
ಯನು ಪೊಂದಿಸರಜ ಸ್ಥಾಣುವೆನುವ । ಗುರು ೭

೧೫೩

## ಶ್ರೀವ್ಯಾಸರಾಯರ ಸ್ತೋತ್ರ

ವ್ಯಾಸರಾಯರ ಬೇಸರದೇ ನೆನೆ ।
ದಾಸೆ ಪೂರ್ತಿಸಿಕೊಂಬೆ ನಾಂ ಪ

ದಾಸರಾಯರಿಗಾಸು ಮಂತ್ರೋಪ ।
ದೇಶ ಕರುಣದಿ ಮಾಡಿದ ॥
ದೇಶದೊಳಗೆ ವಿಶೇಷ ಮೆರೆದು ಅ ।
ಶೇಷ ಜನರುದ್ಧರಿಸಿದ ೧

ವಾಸುದೇವನ ದ್ವೇಷಿಗಳ ಅನಾ ।
ಯಾಸದಿಂ ನೀ ಕರಿಸಿದ ॥
ದಾಸ ವರ್ಗವ ಪೋಷಿಸಲು ನಿ ।
ರ್ದೋಷ ಗ್ರಂಥ ವಿರಚಿಸಿದ ೨

ಭಾಸುರ ಚರಿತ ಭೇಶ ಭಾಸ ಸು ।
ಕಾಷಾಯಾಂಬರ ಧರಿಸಿದ ॥
ವೀಶವಾಹನ ಕ್ಲೇಶಹ ಪ್ರಾ ।
ಣೇಶ ವಿಠ್ಠಲನೊಲಿಸಿದ ೩




## ೧೫೪

## ಶ್ರೀ ರಾಘವೇಂದ್ರ ತೀರ್ಥರ ಸ್ತುತಿ

ರಾಘವೇಂದರ ನಿನ್ನ ಪಾದ ಸರಸಿಜಕೆ ।
ಬಾಗುವೆ ಮನ್ಮನದರಿಕೆ ಪೂರೈಸೊ ಪ

ವಾಸುದೇವಾರ್ಚಕ ಭೂಸುರ ವಂದಿತ ।
ದೋಷವ ಕಳೆವದು ದೇಶಿಕವರ್ಯ ೧

ವಿಷಯಂಗಳೆಲ್ಲ ದಹಿಸಿ ಯೋಗ ಮಾರ್ಗದಿಂ ।
ವಸುದೇವ ಪುತ್ರನೊಲಿಸಿಕೊಂಡ ಶಕ್ತ ೨

ಭೂತ ಪ್ರೇತಗಳ ಬಲಾತುರದಲಿ ಕಳೆವಾ ।
ತುಂಗ ಮಹಿಮನೆ ಭೂತಲದೊಳಗೆ ೩

ಅಂಗಜ ಶರ ದೂರ ಮಂಗಳ ವಿಗ್ರಹ ।
ತುಂಗ ತೀರಾವಾಸ ಪಿಂಗಳ ತೇಜ ೪

ದಂಡ ಕಾಷಾಯ ಕಮಂಡಲಧರ ಪ್ರ ।
ಚಂಡ ಮಹಾತ್ಮ ಸುಪಂಡಿತರೊಡೆಯ ೫

ಸಾರುವ ಶರಣರ ಘೋರಿಸುತಿಪ್ಪ ಸಂ ।
ಸಾರ ಕಡಲಿಗೆ ಶರೀರ ಸಂಭವನೇ ೬

ಮರೆಹೊಕ್ಕು ದಾಸರ ಮರಿಯಾದೆ ಸಲಹಯ್ಯ ।
ಪರಮತ ಉರಗಕ್ಕೆ ಗರುಡನೆನಿಪನೆ ೭

ತಂದೆ ಪಾಲಿಸೊ ದಯಾಸಿಂಧು ಜಗದ್ಗುರು ।
ಮಂದಮತಿಗಳೆಂಬ ಇಂಧನಕ್ಕನಲ ೮

ವಟುವಮು ಪ್ರಾಣೇಶ ವಿಠಲನ ನಿಜದಾಸ ।
ಸಟೆಯಲ್ಲ ಸಂಸಾರ ಕಟಕಟಿ ಬಿಡಿಸೊ ೯

### ೧೫೫

## ಶ್ರೀ ವರದೇಂದ್ರ ತೀರ್ಥರ ಸ್ತುತಿ

ಹಿಂದಿನ ಸುಕರ್ಮವೇಸು । ಬಂದೊದಗಿದವೋ ವರ ।
ದೇಂದ್ರರಾಯ ಬಂದ ನಮ್ಮ । ಮಂದಿರಕಿಂದು ಪ

ಮುತ್ತಿನ ಅಂದಣದೊಳು । ಸತ್ತಿಗಿ ನೆರಳಲಿ । ಪ್ರ–
ಶಸ್ತವಾಗಿ ವೇದಶಾಸ್ತ್ರವೊತ್ತಿ ವೋದುವ ॥
ಉತ್ತಮ ಬುಧರ ಕೂಡ । ಭೃತ್ಯರ ಸಂಗಡ ಬಹು ।
ಹತ್ತೆಂಟು ಬಿರುದಾವಳಿಯುಕ್ತ ಬಂದರು ೧

ತಂಡ ತಂಡಕ್ಕೆ ಜನರು । ಹಿಂಡುಗೂಡಿ ಫಲಗಳ ।
ಕೊಂಡು ಬಂದು ಮಾಡುವರು ದಂಡ ಪ್ರಣಾಮ ॥
ಪಂಡಿತಾಗ್ರಗಣ್ಯರು ಭೂ । ಮಂಡಲದೊಳಾಗ ಶ್ರೀಯಾ ।
ಖಂಡಲನಂತೆ ತೋರ್ವಾ ಕಮಂಡಲಧರ ೨

ಶ್ರೀಕರ ಪ್ರಾಣೇಶ ವಿಠ್ಠಲನೇಕಾಂತದಿ ಒಲಿಸುವಲ್ಲಿ ।
ಈ ಕುಂಭಿಣಿಯೊಳಗೀತಗೆ ಕಾಣೆನೀಡ ॥

ನೀ ಕಾಯಬೇಕೆಂದವರ ಶೋಕವ ಪರಿಹರಿಸಿ ।
ಜೋಕೆ ಮಾಡುವ ನಿತ್ಯ ದೇಶಿಕ ಕುಲಪತಿ ೩

## ೧೫೬

ಶರಣು ನಿತ್ಯಾನಂದ ಸದ್ಗುಣ ಸಾಂದ್ರ, ನಿನ್ನ ।
ಚರಣ ಕಮಲಂಗಳಿಗೆ ಶ್ರೀ ವರದೇಂದ್ರ ಪ

ನಿನ್ನ ನಂಬಿದ ದಾಸರನವನಿಯೊಳು ಇಂಥ ।
ಬನ್ನ ಪಡಿಸುವುದುಚಿತವೆ ದಯಾಳು ॥
ಅನ್ಯರುಂಟೇ ನೀವಲ್ಲದುದ್ಧರಿಸಲು ಪ್ರ ।
ಪನ್ನ ಪೋಷಕ ಯನ್ನ ಬಿನ್ನಪ ಕೇಳು ೧

ನರರ ಪಾಡಿಸದಿರೊ ಯತಿರಾಯಾ ಹರಿ ।
ಸ್ಮರಣೆ ಮಾಡಲು ಮನಕೊಡು ಜೀಯ ॥
ಕರಕರೆ ಭಾವದೊಳಗೊಂದುಪಾಯ ಕಾಣೆ ।
ಹರಿಸಿ ಕ್ಲೇಶವ ಮೋದ ತೋರಿಸಯ್ಯ ೨

ಧರೆಗೆ ಪ್ರಸಿದ್ಧ ಪುಣ್ಯಾಲಯವಾಸ ಕಾಯೊ ।
ನೆರೆ ನಂಬಿದವರನ್ನ ರವಿಭಾಸ ॥
ಹರಿದಾಸರ ಕಾಡುವರನ್ನಾ ಭಾಸ ಮಾಡೊ ।
ಗುರು ಪ್ರಾಣೇಶ ವಿಠಲನ್ನ ನಿಜದಾಸ ೩

## ೧೫೭

ವಂದನೆ ಮಾಡಿರೈ ಗುರು ವರದೇಂದ್ರರ ಪಾಡಿರೈ ಪ

ಬಂದ ದುರಿತಗಳ ಹಿಂದೆ ಮಾಡಿ ಸುಖ ।
ತಂದುಕೊಡುವ ದಯಾ ಸಿಂಧು ಯತೀಂದ್ರರ ಅ.ಪ.

ಮರುತ ಮತಾಂಬುಧಿ ಸೋಮನೆನಿಪ ವಸುಧೇಂದ್ರ – ಸದ್ಗಣ ಸಾಂದ್ರ ।
ಗುರುಗಳ ಕರ ಕಮಲದಿ ಜನಿಸಿದ ಸುಕುಮಾರಾ – ಕುಜನ ಕುಠಾರಾ ॥
ನೆರೆ ನಂಬಿದ ಭಕುತರನನುದಿನದಲಿ ಪೊರೆವಾ – ದುರಿತವ ತರಿವಾ ।
ಧರೆಯೊಳು ತ್ಯಾಗದಿ ಕರ್ಣನ ಮರೆಸಿದ ನೋಡಿ – ವರಗಳ ಬೇಡಿ ೧

ಕರಿ ಹಿಂಡೊಳು ಹರಿ ಹೊಕ್ಕ ತೆರದಿ ವಾದಿಗಳ – ಕೀಳು ಮತಗಳ ।
ವರ ಶಾಸ್ತ್ರಗಳಲಿ ಗೆಲಿದು ಸುಬುದ್ಧಿಯ ವರದ – ಜಗದೊಳು ಮೆರೆದ ॥
ಶರಭಂಗ ವರದ ಚರಣ ಸರಸೀರುಹ ಭೃಂಗ – ವಿಷಯ ಅಸಂಗ ।
ಸ್ಮರಣೆಯ ಮಾಡೆ ಪಿಶಾಚ ರೋಗಗಳ ಭಯವೂ – ಮುಟ್ಟದಲಿಹವೂ ೨

ಸಾನುರಾಗದಲಿ ಶ್ರೀ ರಾಘವೇಂದ್ರರ ಸ್ತೋತ್ರ – ಮಾಳ್ಪ ಸುಪಾತ್ರ ।
ಜಾನಕಿಪತಿ ಆನಂದದೊಳಿವರಿಗೆ ಒಲಿವ – ಹೃದಯದಿ ಸುಳಿವ ॥
ದೀನ ದಯಾಳು ಅಪರಿಮಿತ ಮಹಿಮ ಗುಣಾಢ್ಯ – ವಾದದಿ ದಾರ್ಢ್ಯಾ ।
ಧ್ಯಾನಿಸೆ ಮನದೊಳು ಜ್ಞಾನ ಕೀರ್ತಿ ಸುಖ ಕೊಡುವ – ಅಘಗಳ ಕಡಿವ ೩

ವಿಷ್ಣುನ ಲೋಕ ಪ್ರವೇಶ ಮಾಡಿದ ಚರಿಯಾ – ಕೇಳಿರಿ ಪರಿಯಾ ।
ಶಿಷ್ಟ ಜನರು ವಿಶ್ವಾವಸು ನಾಮಕ ಅಬ್ದ – ಆಷಾಢ ಶುದ್ಧ ॥
ಷಷ್ಠಿಯು ಕುಜವಾಸರ ಉತ್ತರಾ ನಕ್ಷತ್ರಾ – ವರ ಪುಣ್ಯಕ್ಷೇತ್ರ ।
ನಟ್ಟ ನಡುವೆ ವೃಂದಾವನ ಮಧ್ಯದೊಳಿರುವಾ – ಸೌಖ್ಯವ ಸುರಿವಾ ೪

ಆನೆ ಹಂಡೆ ವಸನಗಳು ದ್ರವ್ಯವು ನಾನಾ – ಮಾಡಿದ ದಾನಾ ।
ಆ ನಗರದಿ ಬಹು ಮಂದಿಯು ಭಕುತಿಯಲಿಂದಾ – ಪೂಜಿಪ ಚಂದ ॥
ಸೂನು ಪಡೆದು ಸುಖ ಪಡುವರು ಸರ್ವರು ನಿತ್ಯ – ಈತನು ಸತ್ಯ ।
ನಾನೆಂತುಸಿರಲಿ ಪ್ರಾಣೇಶ ವಿಠಲನ ದಾಸಾ, ಮುನಿ ಉತ್ತಂಸಾ ೫

## ೧೫೮

ಗುರು ವರದೇಂದ್ರ ದಯಾಂಬುಧೇ ಶರಣಾಗತ ವತ್ಸಲ ಈಶ ।
ಚರಣ ಕಮಲ ಷಟ್ಪದ ಪಾಲಿಸು ಕಾಷಾಯ ವಸನ ಭೂಷಾ ಪ

ದುರ್ಮತ ಭುಜಗ ಕುಘರ್ಮ ವಿನಾಯಕ ಕರ್ಮ ಬದ್ಧ ವ್ರತಾ ।
ಶರ್ಮ ಶ್ರಿಧರ ಪ್ರಿಯ ಧರ್ಮಾಸಕ್ತನೆ ನಿರ್ಮಲ ಶುಭಚರಿತಾ ॥
ಭರ್ಮ ಸಮಾಂಗ ಅಧರ್ಮ ಶಿಕ್ಷ ಕರಿ ಚರ್ಮಾಂಬರ ಪ್ರೀತ ।
ಕಿರ್ಮೀರಾರಿ ಸುಶರ್ಮ ತೀರ್ಥ ಸಖ ಕರ್ಮಂದಿಪ ನಾಥ ೧

ಶ್ರೀ ಮನೋರಮ ಸು ತ್ರಿಧಾಮದೇವ ಶ್ರೀರಾಮ ಪದಾಸಕ್ತಾ ।
ಕಾಮಿತ ಫಲದ ಧರಾಮರ ವಂದಿತ ಸ್ವಾಮಿ ನಮಿಪ ಭಕ್ತ ॥
ಶ್ರೀ ಮಂದಾರ ಅನಾಮಯ ಸದ್ಗುಣಧಾಮನೆ ಸುವಿರಕ್ತಾ ।
ಪಾಮರ ದೂರ ಲಲಾಮ ವದಾನ್ಯ ಮಹಾಮಹಿಮನೆ ಶಕ್ತ ೨

ಮಾನಿ ಪೂಜ್ಯ ಸುಜ್ಞಾನಿ ಧೀರ ಸದ್ಭಾನುಚಂದ್ರ ಭಾಸ ।
ದೀನ ಪೋಷಕ ನಿಜಾನುಗ ಪಾಲಕ ಕ್ಷೋಣಿಪ ನಿರ್ದೋಷ ॥
ಸಾನುರಾಗದಲಿ ಪೋಣಿಸು ಸನ್ಮತಿ ಮೌನಿ ಕುಲಾಧೀಶ ।
ನೀನಲ್ಲದೆ ಶ್ರೀ ಪ್ರಾಣೇಶ ವಿಠ್ಠಲ ತಾನೊಲಿಯನು ಲೇಶ ೩

## ೧೫೯

ಗುರುವೇ ಶ್ರೀ ವಸುಧೇಂದ್ರ ಕರಜಾತ ಸದ್ಗುಣಸಾಂದ್ರ ।
ವರದೇಂದ್ರರಾಯ ಜಿತೇಂದ್ರ । ಮರುತ ಮತಾಬ್ಧಿ ಚಂದ್ರ ॥
ಶರಣು ನಿನ್ನಯ ಪದ ಸರಸಿಜ ಯುಗಗಳಿಗೆ ।
ಎರವು ಮಾಡದೆ ಕಾಯೊ ಪರಮ ದಯಾಳು ಪ

ದಾತಾ ಧರಿತ್ರೀ ಸುತೀನಾಥ ಶ್ರೀರಘುಪತಿ ।
ದೂತ ಭುವನದೋಳ್ ಖ್ಯಾತಿಯೋ ತವ ಸತ್ಕೀರುತಿ ॥
ಭೂತ ಭಯ ರೋಗವಾ ತಂದಟ್ಟುವಾ ।
ನಾಥ ರಕ್ಷಕ ಜಲಜಾತಾಂಬಕನೇ ೧

ದೋಷರಹಿತ ಯನ್ನ ಕ್ಲೇಶ ಹಿಂಗಿಸೊ ಸಂ ।
ನ್ಯಾಸ ಶಿರೋಮಣಿಯೆ ಮುನ್ನಾ ಆಶೆ ಬಿಡಿಸಿ ನಿನ್ನ ॥

ದಾಸನೆನಿಸಿಕೋ ಉದಾಸಿಸದಲೆ ಬಹು ।
ಘಾಸಿ ಮಾಡದೆ ರವಿಭಾಸ ಗುಣಾಢ್ಯ ೨

ಏನಾದರೇನು ಕೀಳು ಮಾನವರಾಶ್ರಯ ಧರೆಯೊಳು ।
ನಾನಿಚ್ಛಿಸೆನೊ ಕೃಪಾಳು ಮಾನ ನಿನ್ನದು ಕೇಳು ॥
ನೀನೆವೆ ಗತಿಯೆಂದು ಧ್ಯಾನ ಮಾಡುವರಿಗೆ ।
ಪ್ರಾಣೇಶ ವಿಠಲನ ಕಾಣಿಸಿಕೊಡುವಿ ೩

## ೧೬೦

ಪಾಲಿಸೋ ಪಾಲಿಸೋ ॥ ಕರು
ಣಾಲಯ ವರದೇಂದ್ರ ಮುನಿ ಸುಖ ಸಾಂದ್ರ ಪ

ಪುಣ್ಯ ಮಂದಿರ ವಾಸ । ಸನ್ನುತ ಜನಪಾಲ ॥
ಬನ್ನ ಪಡಿಸದಲೆ । ಯನ್ನನುದ್ಧರಿಸೋ ೧

ದೀನ ಸುರದ್ರುಮ । ಹೀನ ಪಂಕಜ ಸೋಮ ॥
ಮಾನಿ ಸುಜ್ಞಾನಿ ನಿ । ನ್ನೇನು ಬಣ್ಣಿಪೆನೋ ೨

ತ್ರುಟಿ ಮಾತ್ರ ಬಿಡದಲೆ । ಘಟನೆಯ ಮಾಡಿಸೊ ॥
ಸಟೆಯಲ್ಲ ಪ್ರಾಣೇಶ । ವಿಠಲನ ಸ್ಮರಣೆ ೩

## ೧೬೧

ತುತಿಸಲಳವೇ ಶ್ರೀ ವರದೇಂದ್ರನಾ ಅಮಿತ ಮಹಿಮ ।
ಕ್ಷಿತಿ ಸುರ ಗುರು ಸುಗುಣ ಸಾಂದ್ರನ ಮುನಿಪನ ಪ

ಭಾಗವತರ ಪ್ರಿಯನೆನಿಪನ ಪ್ರಣತ ಜನರ ।
ರೋಗ ಕಳೆದು ಸುಖ ಕೊಡುವನ ಕುಮತಗಳನು ।

ಬೇಗ ಗೆಲಿದು ಸುಮತಿ ಕೊಡುವನ ದಯಾ ಸಮುದ್ರ ।
ಯೋಗಿ ವರ್ಯ ರವಿ ಪ್ರಕಾಶನಾ ಅನಘನ ೧

ರಾಘವೇಂದ್ರರನುಗ್ರಹ ಪಾತ್ರನ ವೈಷಿಕದ ಕು ।
ಭೋಗ ತೊರೆದ ನಿಷ್ಪ್ರಪಂಚನ ದುರ್ಮತಿಗಳ ।
ಯೋಗಕೊಲಿಯದಿಪ್ಪ ಧೀರನ ಭವ ಭಯವನು ।
ನೀಗಿ ಹರಿಯ ಸದನವ ತೋರ್ಪನಾ ವರದನ ೨

ಕಲಿ ಮಲಾಪಹಾರ ಶಕ್ತನ, ಪ್ರಾಣೇಶ ವಿಠಲ ।
ನೊಲಿಸಿಕೊಂಡಮಿತ ಸಮರ್ಥನ ಮಾರುತ ಮತ ॥
ಜಲಧಿ ಪೆರ್ಚಿಸುತಿಹ ಚಂದ್ರನ ಬೃಹತ್ಸು ತಟ ನೀ ।
ನಿಲಯ ಶ್ರೀ ವಸುಧೇಂದ್ರ ಪುತ್ರನ ವಿರಕ್ತನ ೩

## ೧೬೨

ಗುರುರಾಯಾ ಗುರುರಾಯಾ ।
ತರಣಿ ಪ್ರಕಾಶ ಯತಿಪ ವರದೇಂದ್ರ ಪ

ಬೆಂದೆನೋ ಭವದೊಳು । ತಂದೆ ನೀ ಬಹು ತ್ವರೆ ॥
ಯಿಂದ ಕರಪಿಡಿಯೋ । ಮಂದ ದಯಾಳೋ ೧

ಆರೆನು ಮನುಜರು । ದೂರುವ ಮಾತನು ॥
ಆರಿಗುಸಿರಲಿ ನಿ । ವಾರಿಸೋ ಸ್ವಾಮಿ ೨

ನೀನೊಲಿಯಲು ಭಯ । ಕಾಣಿಸಿಕೊಂಬುದೆ ॥
ಹೀನ ಮತಾಟವಿ ಕೃ । ಶಾನು ಮಹಾತ್ಮ ೩

ಮೇದಿನಿಪರು ಬೆರ । ಗಾದರು ದಾನಕೆ ॥
ಮೋದಮುನಿ ಮತ ಮ । ಹೋದಧಿ ಚಂದ್ರ ೪

ಕಾಷಾಯ ವಸನಿ । ದೇಶಿಕ ವರ ಪ್ರಾ ॥
ಣೇಶ ವಿಠಲನವ । ರಾ ಸಲಹುವದೋ ೫

# ಇತರ ಯತಿಗಳ ಸ್ತೋತ್ರ

## ೧೬೩

## ಶ್ರೀಭುವನೇಂದ್ರತೀರ್ಥರ ಸ್ತುತಿ

ಗುರುಗಳ ನೋಡಿರೈ ಉತ್ತಮ ವರಗಳ ಬೇಡಿರೈ ಪ

ದುರುಳ ತಿಮಿರ ದಿನಕರ ಶರಣರ ಸುರತರು ।
ವರದೇಂದ್ರರ ಕರ ಪಂಕಜರುಹ ಅ.ಪ.

ಮಂಗಳ ವಿಗ್ರಹ ಮಧ್ವ ಮತಾಂಬುಧಿ ಸೋಮ ಸದ್ಗುಣಧಾಮ ।
ಪಿಂಗಳ ನಿಭ ಸನ್ಯಾಸ ಕುಲೋತ್ತಮನೀತಾ ಲೋಕ ವಿಖ್ಯಾತಾ ॥
ಸಂಗರಹಿತ ಕೌಪೀನ ಕಮಂಡಲಧರ ದೋಷ ವಿದೂರ ।
ಮಂಗಳೆ ಪತಿ ಪದಭಜಕ ಅಘೋರ ಗವೀಂದ್ರ ಶ್ರೀ ಭುವನೇಂದ್ರ ೧

ಜನ್ಮಾರಭ್ಯವು ಲೌಕಿಕ ಸ್ವಪ್ನದೊಳರಿಯಾ ಭೂಸುರ ವರ್ಯಾ ।
ಸುಮ್ಮನೆ ಈ ಪರಿ ಪದವಿಯು ಜಗದೊಳು ಬಹದು ಆರಿಗೆ ಅಹದು ॥
ಬೊಮ್ಮನ ಸಂತತಿಯಿದು ಪುಸಿಯಲ್ಲವು ಸತ್ಯಾ ಭಜಿಸಿರಿ ನಿತ್ಯಾ ।
ಯಮ್ಮ ಬಳಿಯೊಳಿಹ ದುಷ್ಟ ಮತೇಂಧನ ದಾವ ಸೌಖ್ಯವನೀವಾ ೨

ಧಾರುಣಿಯೊಳು ವಿಸ್ತರಿಸಿದ ಸ್ವಮತವ ಧೀರಾ ಗುಣಗಂಭೀರಾ ।
ಆರಿಂದೊಶ ಚರಿತೆಯ ಪೂರ್ತಿಸಿ ಪೇಳ್ವದಕೆ ಬಹು ಸುಖ ಮನಕೆ ॥
ಶ್ರೀ ರಾಘವೇಂದ್ರರನುಗ್ರಹ ಪಾರಾವಾರಾದೊಳಗೆ ವಿಹಾರಾ ।
ಘೋರಿಸುತಿಹ ಸಂಸಾರ ಸಮುದ್ರಕೆ ಮುನಿಯೂ ಯತಿ ಶಿರೋಮಣಿಯೂ ೩

ಚಿರಕಾಲ ಸುಕೃತ ದೊರಕಲು ವದಗುವುದೂ ಸೇವೆಯಿವರದು ।
ಮರಳೊಂದ್ಯೋಚಿಸದಲೆ ಶರಣಾಗತರಾಗೀ ಚಿಂತೆಯ ನೀಗೀ ॥
ಎರವಿಲ್ಲದೆ ದುಃಖವ ಪರಿಹರಿಪರು ಹತ್ತೇ ಕರೆವರು ಮತ್ತೇ ।
ಸಿರಿ ಪೂರ್ಣಾಯು ಸುತಾದಿ ವಿಷಯಗಳ ಕೊಡುವ ದುರಿತವ ತರಿವ ೪

ತವಕದೊಳಿವರ ಪದಾಬ್ಜವ ಸೇವಿಪ ಭಕ್ತಾ ಜೀವನ್ಮುಕ್ತಾ ।
ಕುವಲಯದೊಳಗೀಗಿವರಿಗೆ ಸರಿಯಾರಿಲ್ಲಾ ಕೇಳಿರಿ ಸೊಲ್ಲಾ ॥
ಅವನೀಶರು ಎಂಬಾಹ್ವಯ ತಿಳಿಯಲಿಕುಂಟೇ ಅಧಿಕರುವುಂಟೇ ।
ಇವರಿಗೆರಗದಿರೆ ಒಲಿಯನು ಶ್ರೀ ಪ್ರಾಣೇಶಾ ವಿಠಲನು ಲೇಶ ೫

## ೧೬೪

ಶ್ರೀ ಮಧ್ವಮತವೆಂಬ ಕ್ಷೀರ ಪಾರಾವಾರ ।
ಸೋಮನೆನಿಸುತಿಹ ವರದೇಂದ್ರ ಕರಸಂಜಾತ ।
ನೀ ಮಹಿಯೊಳಾವಾವ ಪರಿ ಕಾಣಿಸುವ ನೋಡಿ
ರಾಮ ಪದ ಜಲಜ ಭೃಂಗ ಪ

ಕುಂಡಲಿಯೊ ಭಾರತಿಯೊ ಈಶನೊ ಎಂದು ದ್ವಿಜ ।
ಷಂಡ ತುತಿಸುವುದು ಶ್ರೀ ಭುವನೇಂದ್ರ ರಾಯರಾ ।
ಕಂಡು ಪದಯುಕ್ತ ಪುರುಷಾಕಾರ ಶಿಖಾರಹಿತ ಕೂಡದಿದುಯೆನಲು ಪೇಳ್ವೆ ॥
ದಂಡಧರ ಯೋಗದಾರ್ಢ್ಯದೊಳು ತಾ ಅಹಿಯಂತೆ ।
ಪಂಡಿತೇಶನು ವಾಗ್ಬಲದಲಿ ಭಾರತಿಯಂತೆ ।
ರುಂಡಮಾಲಿಯ ತೆರದಿ ತೋರುವರು ವೈರಾಗ್ಯದಲಿ ನಿರುತ ಭಜಿಸುವರಿಗೆ ೧

ವಿಧಿಯೊ ಅರ್ಕನೊ ಇಂದ್ರನೋ ಎಂಬ ತೆರದಿಂದ ।
ಬುಧಜನಕೆ ತೋರ್ವ ನಾಲ್ಮೊಗ ಖಗ ಸಹಸ್ರಾಕ್ಷ ।
ಇದು ಯೆಂತು ಸಾಮ್ಯವೆನೆ ಸರ್ವಜನ ಯೋಗ್ಯತೆಯನರಿವಂತೆ ಧಾತನಂತೇ ॥
ಮದಡ ಜ್ಞಾನಾಖ್ಯ ತಮವಳಿವಲ್ಲಿ ರವಿಯಂತೆ ।

ಪದುಮೇಶನ ಗುಣವ ವಿಚಾರಿಸಲನೇಕಾಕ್ಷ ।
ಚದುರನೆನುವ ಬಗೆಯಿಂದೊಪ್ಪುತಿಪ ನಮ್ಮ ಗುರುವ ತುತಿಸುವೊದಕ್ಕೆನ್ನ ವಶವೆ ೨

ಕಡಲೊ ಸುರಧೇನವೊ ಹಂಸನೋ ಯೆಂಬಂತೆ ।
ಪೊಡವಿಗೆ ವಿರಾಜಿಸುವ ಉದಕಮಯವಾಗಿಹದು ।
ಕಡು ಚತುಷ್ಪಾದಿ ಅಂಡಜ ಜಂತು ಈ ಸಾಮ್ಯ ಸಲ್ಲದೆನೆ ಸಲ್ವ ವಿವರ ॥
ಒಡಲಿನೊಳು ಪ್ರಾಣೇಶ ವಿಠಲ ಮಣಿ ಪೊಳೆವುತಿದೆ ।
ಕೊಡುವ ಬೇಡಿದ ವರವ ಅಮರರಾಕಳಿನಂತೆ ।
ಕುಡಿವಂತೆ ಹಂಸ ಪಯ ಜಲವುಳಿದು ದೋಷವೆಣಿಸದೆ ಬಿನ್ನಪವ ಲಾಲಿಪ ೩

## ೧೬೫

ಪಾಹಿ ಪಾಹಿ ಜಿತಮಾರ ।
ಪಾಹಿ ಸುಬೋಧೇಂದ್ರ ಸಮೀರ ॥
ಮಹಾ ಮತಾಬ್ಧೀಂದು ದೀನಾಮರ ।
ಮಹಿಜ, ಸುಹಿತ, ಮಹಿತ ಪ

ನಿರ್ಮಲಾತ್ಮ ಸದ್ಗುರು ಧೀರ ।
ಕರ್ಮ ವಿಷಯಾಪೇಕ್ಷಾ ದೂರ ॥
ಧರ್ಮಾಸಕ್ತ ಲೋಕೋದ್ಧಾರ ಶರ್ಮ ಸು ।
ಶರ್ಮಾದ ಭರ್ಮಾಂಗ ಮರ್ಮಜ್ಞ ೧

ಅರ್ಕ ಮಹಿಮನೆ ಧೀಮಂತ ।
ಅರ್ಕಜನೊಲಿದಾನೀ ಶಾಂತ ॥
ಮರ್ಕಟ ದುರ್ವಾದಿ ಧ್ವಾಂತ ಅರ್ಕ ಕು ।
ತರ್ಕ ಸಂಪರ್ಕಾಹ ಅರ್ಕಾಭ ಪಾಹಿ ೨

ತೀರ್ಥ ಪಾಲಾ ಭಕ್ತಾಧೀನ ।
ತೀರ್ಥಾಂಘ್ರಿ ಪ್ರಾಣೇಶ ವಿಠಲನ ॥
ತೀರ್ಥದೂತ ನೀನಿದ್ದ ಸ್ಥಾನ ತೀರ್ಥವು ।
ತೀರ್ಥಪ ತೀರ್ಥಪ ತೀರ್ಥ ಮಾಂ ಪಾಹಿ ೩

## ೧೬೬

## ಶ್ರೀಸುಬೋಧೇಂದ್ರರ ಸ್ತುತಿ

ಅಭಯವೀಗಲೆ ಬೇಡೆ ಗುರು
ಸುಬೋಧೇಂದ್ರಾರ್ಯರ ನೋಡೆ ಸಖಿ ಪ

ಪಾಪ ಕಳೆವಳಾಕಾಶ ಗಂಗೆ ಬಹು ।
ತಾಪ ಕಳೆವ ದ್ವಿಜನಾಥ ।
ಆ ಪಾದಪ ದೈನ್ಯ ಹರೀ ಸುಗುಣವು ।
ಈ ಪುರುಷರಿಗೊಪ್ಪುವದಲ್ಲೇ ಸಖಿ ೧

ಮೀನ ಕೂರ್ಮ ದ್ವಿಜ ನೋಡಿ ಸ್ಮರಿಸಿ ಮುಟ್ಟಿ ।
ಸೂನುಗಳನು ಸಲಹುವ ತೆರದಿ ॥
ಸು ನೋಟದಿ ನೆನೆದು ಪಾದಸ್ಪರ್ಶ ವಿ ।
ತ್ತಾನತರನು ಪೊರೆವರು ಬಿಡದೆ ಸಖಿ ೨

ಈ ಸಂಯಮಿಗಳ ಕೃಪೆಯೊಂದಿರುತಿರೆ ।
ಏಸು ಸಾಧನ ಇನ್ನೇತಕೆಲೆ ॥
ನಾಶರಹಿತ ವೈಕುಂಠವೇ ಸರಿ, ಪ್ರಾ ।
ಣೇಶ ವಿಠಲನಿವರಲ್ಲಿಹದಕೆ ೩

## ೧೬೭

### ಶ್ರೀಧರತೀರ್ಥರ ಸ್ತುತಿ

ಚಿರಕಾಲ ಮರೆಯೆ । ನಿಮ್ಮ ಸ್ಮರಣೆ । ಶ್ರೀ
ಧರ ತೀರ್ಥ ಗುರುರಾಯ ಧೊರೆಯೆ ಪ

ಭವದೂರ ವೀತ ವಿಷಯ ಸಂಗ ಅವನಿಯೊಳು ಖ್ಯಾತ ।
ತವಕದಿಂದಲಿ ಲಾಲಿಸುವುದೆನ್ನ ಮಾತ ।
ಭುವನೇಂದ್ರ ಯತಿ ಕರಕಮಲ ಸಂಜಾತ ೧

ಮೃದ ಸಮ ಹೇಮಾದಿಗಳನು ಮಾಡಿದ ಜಿತಕಾಮ ।
ಬುಧ ಜನ ವಂದ್ಯ ಸದ್ಗುಣ ಗಣಧಾಮ ।
ಮುದ ತೀರ್ಥ ಮತ ಪಾರಾವಾರ ಸು ಸೋಮ ೨

ಪತಿತ ಪವಿತ್ರ ದಯಾಂಬುಧೇ ಶತ ಪತ್ರ ನೇತ್ರ ।
ವಿತರಣೆಯಲಿ ರವಿಜನೆ ಶುಭ ಗಾತ್ರ ।
ಪತಗಾಭ ದಂಡಾದಿಧರ ಸುಚರಿತ್ರ ೩

ನತು ಸುರಮಣಿಯೆ ನೀವಲ್ಲದೆ ಇತರರಿಗೆ ಮಣಿಯೆ ।
ಪ್ರತಿವಾದಿ ಮಹಾ ತಿಮಿರಕೆ ದಿನಮಣಿಯೆ ।
ಮತಿಯ ಪಾಲಿಸೊ ದುಃಖ ಪೃಷದಶ್ವ ಫಣಿಯೇ ೪

ಸಾಕೆನ್ನ ಕೀಳು ಬುದ್ಧಿಯ ಕಳೆದು ಜೋಕೆಯಿಂದ ಆಳು ।
ನೀ ಕೈಯ ಬಿಡಲು ಸಾಕುವರಿಲ್ಲ ಕೇಳು ।
ಶ್ರೀಕಾಂತ ಪ್ರಾಣೇಶ ವಿಠ್ಠಲನ ಆಳು ೫

## ೧೬೮

## ಯತಿಗಳ ಪರಂಪರಾ ಸ್ತೋತ್ರ ಪದಗಳು

(ಶ್ರೀ ಬ್ರಹ್ಮದೇವರಿಂದ ಶ್ರೀಮಧ್ವಾಚಾರ್ಯರವರೆಗೆ ಪರಂಪರಾ ಸ್ತೋತ್ರ )

ನಾಭಿ ಸಂಭವ ಸಂತ । ತೀ ಭಕ್ತಿಂದೊರ್ಣಿಸೂವೆ ।
ಈ ಭವ ಶರಧೀ ತ್ವರದಿಂದ ಕೋಲೆ ॥
ಈ ಭವ ಶರಧಿ ತ್ವರದಿಂದ ದಾಟಿಸಿ ।
ಈ ಭಾಗವತರಾ ಕೂಡಿಸಲು ಕೋಲೆ ಪ




ವಿಧಿಜಾತಾ ಸನಕಾದಿ ತದನಂತರಾ ದೂರ್ವಾಸ ।
ಅದರ್ಬಿಂದೆ ಜ್ಞಾನಾ ನಿಧಿಗಳ ಕೋಲೆ ॥
ಅವರ್ಬಿಂದೆ ಜ್ಞಾನಾ ನಿಧಿಯೂ ಗರುಡವಾಹನ ।
ಬುಧರೂ ಕೈವಲ್ಯಾ ತೀಥರೂ ಕೋಲೆ ೧

ಜ್ಞಾನೇಶ ಪರತೀರ್ಥ ಮೌನೀಶ ಸತ್ಯ ಪ್ರಜ್ಞಾ ।
ದೀನ ವತ್ಸಲರೂ ಪ್ರಾಜ್ಞ ತೀರ್ಥಾ ಕೋಲೆ ॥
ದೀನ ವತ್ಸಲರೂ ಪ್ರಾಜ್ಞಾ ಸೂತ ಪೋರಾಜ ।
ಜ್ಞಾನಿ ಅಚ್ಯುತಾಪ್ರೇಕ್ಷರೂ ಕೋಲೆ ೨

ಕ್ಷಿತಿಯೊಳಗೆ ದುರ್ಮತ ವತಿಶಯವಾದವೆಂದು ।
ಸ್ತುತಿಸಾಲು ಸುರರು ಮೊರೆ ಕೇಳಿ ಕೋಲೆ ॥
ಸ್ತುತಿಸಾಲು ಸುರರೂ ಮೊರೆ ಕೇಳಿ ಪಾಲಿಸಿದಾ ।
ಯತಿ ಶಿರೋಮಣಿಯ ಬಲಗೊಂಬೆ ಕೋಲೆ ೩

ಹರಿ ಸರ್ವೋತ್ತಮನಲ್ಲ ಬರಿದೆ ವಿಶ್ವವೆಲ್ಲ ।
ಎರಡಿಲ್ಲವೆಂದು ಪೇಳೋರು ಕೋಲೆ ॥
ಎರಡಿಲ್ಲವೆಂದು ಪೇಳ್ವಾ ಮಾಯ್ಗಳ ಗೆದ್ದಾ ।
ಗುರು ಮಧ್ವ ಮುನಿಗೆ ನಾ ಶರಣೆಂಬೆ ಕೋಲೆ ೪

ಮೂರು ದೇವರು ಸಮ ಆರೂ ಮಾತಾಗಳೆಂಬ ।
ಪೋರಾ ವಾದಿಗಳಾ ನಯದಿಂದ ಸೋಲಿಸಿದ ॥
ಪೋರ ವಾದಿಗಳ ನಯದಿಂದ ಸೋಲಿಸಿದ ।
ಭಾರತಿ ಪತಿಯ ಬಲಗೊಂಬೆ ಕೋಲೆ ೫

ಒಂದು ಇಲ್ಲಾವು ಎಂಬೊ ಮಂದಮತಿಯ ಮತ ।
ಒಂದೇ ಮಾತಿನಲಿ ಗೆಲಿದಾರು ಕೋಲೆ ॥
ಒಂದೇ ಮಾತಿನಲಿ ಗೆಲಿದಂಥಾ ಶ್ರೀಮದಾ ।
ನಂದಾ ತೀರ್ಥರನಾ ಬಲಗೊಂಬೆ ಕೋಲೆ ೬

ನಾನಾ ದೇವರು ಎಂಬಾ ಹೀನ ಮತಗಳೆಲ್ಲ ।
ಜಾಣೀಕಿಯಲ್ಲಿ ಗೆಲಿದಾರು ಕೋಲೆ ॥
ಜಾಣೀಕಿಯಲ್ಲಿ ಗೆಲಿದಂಥಾ ಕುಲಗುರು ।
ಪ್ರಾಣದೇವರಿಗೆ ಶರಣೆಂಬೆ ಕೋಲೆ ೭

ಇಲ್ಲಿ ಮಾತ್ರವು ಭೇದ ಅಲ್ಲಿ ಒಂದೆಂಬುವ ।
ಖುಲ್ಲಾರನೆಲ್ಲ ಮುರಿದಾರೂ ಕೋಲೆ ॥
ಖುಲ್ಲಾರನೆಲ್ಲ ಮುರಿದ ಸದ್ಗುರು ಪಾದ ।
ಪಲ್ಲವಗಳಿಗೆ ಶರಣೆಂಬೆ ಕೋಲೆ ೮

ತನುವೇ ನಾನೆಂಬುವ ಭಣಗು ಮತಗಳೆಲ್ಲ ।
ವಿನಯದಿಂದಲಿ ಗೆಲಿದರು ಕೋಲೆ ॥
ವಿನಯದಿಂದಲಿ ಗೆಲಿದಂಥಾ ಶ್ರೀ ಮಧ್ವಾ ।
ಮುನಿಯ ಪಾದಗಳ ಸ್ಮರಿಸೂವೆ ಕೋಲೆ ೯

ಇಪ್ಪತ್ತೊಂದು ಕುಭಾಷ್ಯ ತಪ್ಪಾನೆ ಸೋಲಿಸಿದ ।
ಸರ್ಪಶಯನನ ಒಲಿಸೀದ ಕೋಲೆ ॥
ಸರ್ಪಶಯನನ ಒಲಿಸೀದ ಗುರುಗಳ ।
ತಪ್ಪದೆ ನೆನೆವೇನನುದಿನ ಕೋಲೆ ೧೦

ಈತನ ಮಹಿಮೀಯ ಭೂತನಾಥನರಿಯ ।
ನಾ ತುತಿಸುವೆನೇ ಕಡೆ ಗಂಡು ಕೋಲೆ ।
ನಾ ತುತಿಸುವೆನೇ ಕಡೆ ಗಂಡು ಮರುತನ ।
ಮಾತು ಮಾತಿಗೆ ಸ್ಮರಿಸಿರೊ ಕೋಲೆ ೧೧

ಸರುವ ಕರ್ಮವ ಮಾಡೆ ಮರುತಾಂತರ್ಗತನೆಂದು ।
ಹರಿಗರ್ಪಿಸದಲೆ ಮುದದಿಂದ ಕೋಲೆ ॥
ಹರಿಗರ್ಪಿಸದಲೆ ಮುದದಿಂದಲಿರುವಾರು ।
ನಿರಯ ಭಾಗಿಗಳು ತಿಳಿವದು ಕೋಲೆ ೧೨

ಈ ನಮ್ಮ ಗುರು ಮೆಚ್ಚಾದೇನೂ ಸಾಧನ ಮಾಡಿ ।
ಪ್ರಾಣೇಶ ವಿಠಲಾನೊಲಿಸೋರಾ ಕೋಲೆ ॥
ಪ್ರಾಣೇಶ ವಿಠಲನೊಲಿಸವಂಥ ಜಾಣರ ।
ನಾನೆಲ್ಲಿ ಕಾಣೆ ಜಗದೊಳು ಕೋಲೆ ೧೩

## ೧೬೯

## ಶ್ರೀ ರಾಯರ ಮಠದ ಯತಿಗಳ ಸ್ತೋತ್ರ

ಗುರುಗಳನನುದಿನ ನೆನೆವೆ ನಾ ।
ದುರಿತ ದಟ್ಟುಳಿ ಸಾರೆ ಬಂದೀತಿನ್ನೇನಾ ಪ

ಪಾರ್ಥ ರಕ್ಷಕನ ಸೇ । ವಾರ್ಥ ಖಳರ ಕೊಂದು ।
ಕೀರ್ತಿ ಪಡೆದ ಸುಖ । ತೀರ್ಥರೆಂತೆಂಬಾ ೧

ನೀ ಪಾಲೀಸೆಂದೆನಲಾಪತ್ತು ಬಿಡಿಸುವ ।
ಮಾಪತಿ ನಿಜದೂತ । ಶ್ರೀ ಪದ್ಮನಾಭ ೨

ಕರಿಪತಿ ಬಳಿಯಿಂದ । ಧರಿಜ ಪತಿಯ ತಂದು ।
ಗುರುಗಳಿಗಿತ್ತೀಹ । ನರಹರಿ ತೀರ್ಥಾ ೩

ಬಾದರಾಯಣ ದಿವ್ಯ । ಪಾದ ಜಲಜ ಭೃಂಗ ।
ಭೂದೇವ ವಂದಿತ । ಮಾಧವ ತೀರ್ಥ ೪

ಇಕ್ಷುಚಾಪನ ಮ್ಯಾಳ । ಲಕ್ಷ್ಯೇ ಇಲ್ಲದೆ ಬಲು ।
ಪೇಕ್ಷೆ ಮಾಡಿದ । ಅಕ್ಷೋಭ್ಯ ಮುನಿಪ ೫

ದಯಮಾಡಿರೆಂದು ವಿ । ನಯದಿಂದ ಭಜಿಪರ ।
ಬಯಕೀ ಪೂರೈಸುವ । ಜಯತೀರ್ಥರೆಂಬ ೬

ಅದ್ವೈತ ಗಜ ಸಿಂಹ । ಮಧ್ವ ಮತೋದ್ಭವ ।
ಸದ್ವೈಷ್ಣವ ಪ್ರೀಯ । ವಿದ್ಯಾಧಿರಾಜ ೭

ಸಂದೇಹವಿಲ್ಲದೇ । ವಂದೀಪ ಜನರಾಸೆ ।
ತಂದುಕೊಡುವ ದಯ । ಸಿಂಧು ಕವೀಂದ್ರಾ ೮

ರಾಗ ವರ್ಜಿತ । ಭಾಗವತರ ಪಾಲ ।
ಯೋಗಿ ಶಿರೋಮಣಿ । ವಾಗೀಶ ಮುನಿಪ ೯

ಸಾರಿದ ಭಕುತರ । ಘೋರಿಪ ಅಘಗಳ ।
ದೂರ ಓಡಿಸುತಿಪ್ಪ । ಶ್ರೀ ರಾಮಚಂದ್ರ ೧೦

ಕು ಭವದೊಳಿರುವಾರ । ಸೊಬಗಿನಿಂದಲಿ ನೋಡಿ ।
ಅಭಯ ಕೊಡುತಿಪ್ಪ । ವಿಬುಧೇಂದ್ರ ತೀರ್ಥ ೧೧

ಭ್ರಾಮಕ ಜನ ಶಿಕ್ಷ । ಧೀಮಂತ ಜನ ಪಕ್ಷ ।
ಹೇಮ ವರಣಾಂಗ ಜಿ । ತಾಮಿತ್ರ ಮುನಿಪಾ ೧೨

ಬಗೆ ಬಗೆ ಭಜಿಸಲು । ಇಗಡ ಜನರನೊಲ್ಲ ।
ಬಗಿವಾನು ಸುಜನರ । ರಘುನಂದನಾರ್ಯ ೧೩

ಪೊಂದಿದವರ ನೋಯ । ದಂದದಿ ಸಲಹುವ ।
ಎಂದೆಂದು ಬಿಡದ ಶ್ರೀ ಸು । ರೇಂದ್ರಾಖ್ಯ ಮುನಿಪ ೧೪

ನಿಜಭಕ್ತಿಯಲಿ ಪಾದ । ಭಜಿಸೂವ ಅಗಣಿತ ।
ಸುಜನರ ಸಲಹುವ । ವಿಜಯಿಂದ್ರ ಮುನಿಪ ೧೫

ವೀಂದ್ರ ವಾಹನ ಯಾದ । ವೇಂದ್ರಾಂಘ್ರಿ ಭಜಿಸೂವ ।
ಸಾಂದ್ರ ಭಕ್ತಿಯಲಿ ಸು । ಧೀಂದ್ರಾಖ್ಯ ಮುನಿಪಾ ೧೬

ಧಾರುಣಿಯೊಳಗತಿ । ಚಾರು ವೃಂದಾವನ ।
ದೀ ರಾಜಿಸುತಿಪ್ಪ । ಶ್ರೀ ರಾಘವೇಂದ್ರಾ ೧೭

ಶ್ಲಾಘೀನ ಗುಣನಿಧಿ । ಮಾಗಧ ರಿಪು ದಾಸ ।
ರಾಘವೇಂದ್ರರ ಪುತ್ರ । ಯೋಗೀಂದ್ರ ತೀರ್ಥ ೧೮

ವೈರಾಗ್ಯ ಗುಣದಿಂದ । ಮಾರಾರೀಯಂದದಿ ।
ತೋರುವರನು ದಿನ । ಸೂರೀಂದ್ರ ತೀರ್ಥ ೧೯

ಕುಮತವೆಂಬಗಣೀತ । ತಿಮಿರ ಓಡಿಸುವಲ್ಲಿ ।
ಕಮಲಾಪ್ತನಂತೀಹ । ಸುಮತೀಂದ್ರ ತೀರ್ಥ ೨೦

ಸಲ್ಲಾದ ಸುಖಗಳ । ನೆಲ್ಲಾವು ಜರಿದು ಶ್ರೀ ।
ನಲ್ಲಾನ ಭಜಿಸಲು । ಬಲ್ಲ ಉಪೇಂದ್ರಾ ೨೧

ಮೋದ ಮುನಿ ಮತ ಮ । ಹೋದಧಿ ಚಂದ್ರ ವಿ ।
ದ್ಯಾದಿ ದಾನಾಸಕ್ತ । ವಾದೀಂದ್ರ ತೀರ್ಥ ೨೨

ಬಿಸಜನಾಭನ ದೂತ । ವಸುಧಿಯೊಳಗೆ ಖ್ಯಾತ ।
ಕಿಸಲಯೋಪಮ ಪಾದ । ವಸುಧೀಂದ್ರ ತೀರ್ಥ ೨೩

ಪರ ಮತೋರಗ ವೀಪ । ಕರುಣೆ ವಿಗತ ಕೋಪ ।
ವರ ವೇದ ಸುಕಲಾಪ । ವರದೇಂದ್ರ ಭೂಪ ೨೪

ಸುವಿವೇಕಿಗಳಿಗಿಷ್ಟ । ತವಕದಿಂದಲಿ ಈವ ।
ಕವಿಭಿರೀಡಿತ ಪಾದ । ಭುವನೇಂದ್ರ ತೀರ್ಥ ೨೫

ಶಬರೀ ವಲ್ಲಭನಂಘ್ರಿ । ಅಬುಜಾಳಿ ಸೂರ್ಯ ಸ ।
ನ್ನಿಭ ವಾದಿ ಗಜಸಿಂಹ ಸುಬೋಧೇಂದ್ರ ತೀರ್ಥ ೨೬

ಪ್ರಾಣೇಶ ವಿಠಲನ । ಕಾಣಬೇಕಾದರೆ ।
ಈ ನಮ್ಮ ಗುರುಗಳ । ಧ್ಯಾನದೊಳಿಹದೂ ೨೭

## ೧೭೦

(ಶ್ರೀ ವ್ಯಾಸರಾಯರ, ಶ್ರೀ ಮದುತ್ತರಾದೀ ಮಠದ ಯತಿಗಳ ಸ್ತೋತ್ರ)

ಗುರುಗಳ ಪದ ಪಂಕಜ । ಸ್ಮರಿಸುವೆ ನಿತ್ಯಾ ॥
ದುರಿತೌಘಗಳನು । ಓಡಿಸುವನತ್ತತ್ತ ಪ

ರಾಜೇಂದ್ರ ತಪೋನಿಧಿ । ಶ್ರೀ ಜಯಧ್ವಜ ತೀರ್ಥ ॥
ರಾಜಿತ ಪುರುಷೋತ್ತಮ । ಬ್ರಹ್ಮಣ್ಯ ತೀರ್ಥ ೧

ಮಧ್ವಸಿದ್ಧಾಂತ ಸಂಸ್ಥಾಪಕ ವ್ಯಾಸರಾಯ ಪ್ರ ।
ಸಿದ್ಧ ಶ್ರೀನಿವಾಸ ಶ್ರೀ ಲಕ್ಷ್ಮೀಕಾಂತಾ ೨

ಬಲ್ಲೀದ ಶ್ರೀಪತಿ ರಾಮಚಂದ್ರ ಲಕ್ಷ್ಮೀ ॥
ವಲ್ಲಭ ಶ್ರೀ ಲಕ್ಷ್ಮೀನಾಥರೆಂತೆಂಬಾ ೩

ಶ್ರೀ ಲಕ್ಷ್ಮೀಪತಿ ತೀರ್ಥ ಲಕ್ಷ್ಮೀನಾರಾಯಣ ॥
ನೀಲೇಶ ಭಜಕರು ಶ್ರೀನಾಥ ತೀರ್ಥ ೪

ರಘುನಾಥ ಜಗನ್ನಾಥ ಕರಜಾತ ॥
ಸುಗುಣ ವಿದ್ಯಾನಾಥ ಶ್ರೀ ವಿದ್ಯಾಪತಿಯಾ ೫

ಶ್ರೀ ವಿದ್ಯಾನಿಧಿ ರಘುನಾಥ ಶ್ರೀ ರಘುವರ್ಯ ॥
ಕೋವಿದ ವಿನುತ ರಘೂತ್ತಮ ತೀರ್ಥ ೬

ವ್ಯಾಸ ವಿದ್ಯಾಪತಿ ವಿದ್ಯಾಧೀಶ ತೀರ್ಥ ॥
ಶ್ರೀ ಸತ್ಯವ್ರತರ ಶ್ರೀ ಸತ್ಯನಿಧಿಗಳ ೭

ಗುರು ಸತ್ಯನಾಥ ಶ್ರೀ ಸತ್ಯಾಭಿನವ ತೀರ್ಥ ॥
ವರ ಸತ್ಯಪೂರ್ಣ ಶ್ರೀ ಸತ್ಯ ವಿಜಯರಾ ೮

ಸತ್ಯ ಪ್ರೀಯರ ಸತ್ಯಬೋಧ ಸತ್ಯ ಸಂಧ ॥
ಸತ್ಯ ವರರ ಸತ್ಯಧರ್ಮಾಖ್ಯ ಮುನಿಪಾ ೯

ಈ ನಮ್ಮ ಗುರುಗಳ ಅನುದಿನ ಸ್ಮರಿಸೂತ ।
ಪ್ರಾಣೇಶ ವಿಠಲನ ಕರುಣವ ಪಡೆವೆ ೧೦

## ೧೭೧

(ಅಕ್ಷೋಭ್ಯತೀರ್ಥರ ಮಠದ ಯತಿಗಳ ಸ್ತೋತ್ರ)

ವಂದಿಸುವೆ ಗುರು ಸಂತತಿಗೆ ಪ್ರತಿದಿನಾ ।
ನಂದ ತೀರ್ಥರ 'ಮತೋದ್ಧಾರರಿವರಹುದೆಂದು,* ಪ

ಶ್ರೀಮದಕ್ಷೋಭ್ಯ ಮುನಿ ತ್ರೈಲೋಕ್ಯ ಭೂಷಣರ ।
ಧೀಮಂತ ಲೋಕವಂದಿತ ತೀರ್ಥರ ॥
ರಾಮಪದ ಜಲಜಾಳಿ ಸುಲಭ ರಘುಪುಂಗವರ ।
ಶ್ರೀಮಂತ ರಘುನಾಥ ರಘುವರ್ಯ ರಘುಸುತಗೆ ೧

* ಮತಾಂಬುಧಿಗೆ ವಿಧುಯೆಂದು.

ವಿದ್ಯಾನಿಧಿ ಮುನಿ ರಘುಪತಿಯ ನಾರಾಯಣರ ।
ಮಧ್ವ ಭಕ್ತಾಗ್ರಣಿ ಮುಕುಂದ ತೀರ್ಥರ ॥
ಅದ್ವೈತ ಗಿರಿ ಕುಲಿಶ ರಾಮ ರಘುಪತಿ ತೀರ್ಥ ।
ಸದ್ವೈಷ್ಣವರ ಪಾಲ ರಾಮಚಂದ್ರಾರ್ಯರಿಗೆ ೨

ಶ್ರೀ ರಘೋತ್ತಮ ತೀರ್ಥ ರಘುರಾಜ ರಘುಪತಿಯ ।
ಶ್ರೀರಾಮಚಂದ್ರ ತೀರ್ಥಾರ್ಯರ ಪದ ॥
ವಾರಿಜಯುಗಳವ ಭಕ್ತಿಪೂರ್ವಕದಿ ಸ್ಮರಿಸುವೆನು ।
ಮಾರಮಣ ಪ್ರಾಣೇಶ ವಿಠಲ ಕರುಣಿಸಲೆಂದು ೩

## ೧೭೨

(ಶ್ರೀ ಮಧ್ವಾಚಾರ್ಯರು ಯತಿಗಳಿಗೆ ಮೂರ್ತಿಗಳನ್ನಿತ್ತ ವಿವರ)

ಸುಖತೀರ್ಥರೆದುವರನ ಸ್ಥಾಪಿ ।
ಸ್ವೊಂಬತ್ತೆತಿಗಳನು ಮಾಡಿ ಅವರವರಿಗೆ ॥
ಅಕಳಂಕ ನಾಮಗಳ ಮೂರ್ತಿಗಳ ಕೊಟ್ಟ ।
ವಿವರ ಬಣ್ಣಿಸುವೆ ಸುಜನರು ಕೇಳಿ ಪ

ಶ್ರೀ ಪದ್ಮನಾಭ ಹೃಷಿಕೇಶ ।
ನರಹರಿ ಜನಾರ್ದನ ಯತಿ ॥
ಉಪೇಂದ್ರ ತೀರ್ಥ ಪಾಪಘ್ನ ವಾಮನ ಮುನಿಪ ।
ವಿಷ್ಣು ಯತಿ ರಾಮತೀರ್ಥದೋಕ್ಷಜ ತೀರ್ಥರು ॥
ಈ ಪೆಸರಿಲೊಂಬತ್ತು ಮಂದಿ ರಘುಪತಿ ।
ಕಾಳೀ ಮಥನ ವಿಠ್ಠಲನೆರಡೆರಡು ॥
ಭೂಪತಿ ನರಸಿಂಹ ವಿಠ್ಠಲ ಹೀಗೆ ।
ಒಂಬತ್ತು ಮೂರ್ತಿಗಳನು ಕೊಟ್ಟು ೧

ಪದುಮನಾಭರಿಗೆ ರಾಮನ ಕೊಟ್ಟು ।
ಸಕಲ ದೇಶವನಾಳಿ ಧನ ತಾ ಎನುತಲೀ ।
ಅದರ ತರುವಾಯ ಹೃಷಿಕೇಶ ತೀರ್ಥರಿ ।
ಗೊಂದು ರಾಮಮೂರ್ತಿಯನು ಕೊಟ್ಟು ॥
ಬುಧಜನಾರ್ಚಿತ ನೃಸಿಂಹಾರ್ಯರಿಗೆ ।
ಕಾಳಿಯ ಮರ್ದನನಾದ ಶ್ರೀ ಕೃಷ್ಣಮೂರ್ತಿ ।
ಹೃದಯ ನಿರ್ಮಲ ಜನಾರ್ದನ ತೀರ್ಥರಿಗೆ
ಕಾಳೀ ಮಥನ ಶ್ರೀ ಕೃಷ್ಣಮೂರ್ತಿಯ ಕೊಟ್ಟು ೨

ಯತಿವರ ಉಪೇಂದ್ರರಾಯರಿಗೆ ವಿಠ್ಠಲನ
ವಾಮನ ತೀರ್ಥರಿಗೆ ವಿಠ್ಠಲನಾ ।
ನತ ಸುರದ್ರುಮ ವಿಷ್ಣುತೀರ್ಥರಿಗೆ ವರಹ–
ಶ್ರೀರಾಮ ತೀರ್ಥರಿಗೆ ನರಸಿಂಹ ॥
ಅತಿ ಸುಗುಣ ಅಧೋಕ್ಷಜ ತೀರ್ಥರಿಗೆ ವಿಠಲ ।
ನಿಂತು ಒಂಬತ್ತು ಮೂರ್ತಿಗಳ ಕೊಟ್ಟು ।
ಕ್ಷತಿಯೊಳಗೆ ತಾಪ್ಯಪೀಠ ಪುರಸ್ಥ
ಪ್ರಾಣೇಶ ವಿಠ್ಠಲನ ಅರ್ಚನೆಗಿಟ್ಟರು ಕೇಳಿ ೩

## ಶ್ರೀ ಜಗನ್ನಾಥದಾಸರ ಸ್ತೋತ್ರ

### ೧೭೩

ತಂಗಿ ನೋಡಿದೆಯೇನಿಂದು । ಕಂಗಳು ದಣಿಯ ಗುರು–
ರಂಗನೊಲಿದ ದಾಸರಾಯರ ಪ

ಶ್ರೀಪತಿಯೊಲಿಯಲೆಲ್ಲ ಪ್ರಾಪುತಿಯೆಂಬುವ ಪ್ರಮಾಣ ।
ವೀ ಪುರುಷರಲ್ಲಿಯೆ ಒಪ್ಪುವದೇ । ತಂಗೀ ॥

ಶಾಪಾನುಗ್ರಹ ಸಮರ್ಥರೀ ಪೊಡವಿಯೊಳು ನಿತ್ಯ ।
ಕಾಪಾಡುವರೆಮ್ಮನೆಲ್ಲರ ತಂಗೀ ೧

ಶಿಖೆಯೊಳಿದ್ದ ಪೀಯೂಷ ಸುಖದಿ ಪಿತೃಗಳುಂಡರು ।
ಅಕಟಾ ಕಾಣರೀ ಜನವೆಂದೂ । ತಂಗೀ ॥
ಸಕಲ ಗ್ರಂಥವ ಶೋಧಿಸಿ ಯುಕುತಿಯಿಂ ಹರಿಕಥಾಮೃತ ।
ಸಕಲರಿಗಿತ್ತು ಸಲಹುವರೇ ತಂಗೀ ೨

ಕಾಶಿ ಪ್ರಯಾಗ ವಾರಣಾಸಿಯಿಂದಧಿಕ ಹರಿ ।
ದಾಸರಾಯರಿದ್ದಾ ಸ್ಥಾನವೂ । ತಂಗೀ ॥
ನಾಶವಾಗುವದಘ ಮನ ಮೀಸಲಾಗುವದು ಶ್ರೀ ಪ್ರಾ ।
ಣೇಶ ವಿಠ್ಠಲ ಕೈ ಸೇರುವ ತಂಗೀ ೩

## ೧೭೪

ತಿಳಿಯನು ಎಂದೆಂದಿಗನ್ಯ । ರಂಗ
ಒಲಿದ ದಾಸರು ಜಗನ್ಮಾನ್ಯ ॥
ಅಲವ ಮಹಾತ್ಮರೆಂಬ ಪುಣ್ಯ । ಕೀರ್ತಿ
ಗಳ ನಿತ್ಯ ಕೇಳ್ವ ನರ ಧನ್ಯ ಪ

ಹಿರಣ್ಯಕಶ್ಯಪುಜ ಸಹ್ಲಾದನೇವೇ ।
ಎರಡನೆ ಜನ್ಮ ಶಲ್ಯನಾದ ॥
ಗುರು ವಾದಿರಾಜರನರ್ಚಿಸಿದ ।
ಪುರಂದರ ದಾಸರಾಯರಲ್ಲುದಿಸಿದ ೧

ಅಯ್ದನೆಯ ರೂಪವೀಗಿಂದಂತೆ ।
ಬಹುದು ಏಳು ಜನ್ಮ ಮುಂದಂತೆ ॥
ಮೋದಾಭಿವೃದ್ಧಿಗೇನೋ ಅಂತೇ ಎಂಬ ।
ವಾದಿಗಿದೆಲ್ಲ ಅಂತಿಗಂತೆ ೨

ದಾಸಕೂಟಸ್ಥರಿಗೀ ಮಾತು ಕೆಲವು ।
ದೇಶಗಳಲ್ಲಿ ಅನುಭವವಾಯ್ತು ॥
ಈ ಸುಕಥಾಲಾಪ ವಲ್ಲಾಯಿತು ಶ್ರೀ ಪ್ರಾ ।
ಣೇಶ ವಿಠಲನಲ್ಲಿಹನಾತು ೩

## ೧೭೫

ಶ್ರೀಕಾಂತೊಲಿದ ದಾಸ । ರೀ ಕಲಿಯುಗದಲ್ಲಿ ।
ಲೇಖಾಂಶರಹುದೇ ತಂಗೀ ॥
ಶೋಕ ಬ್ಯಾಡೆಲೆ ನರಲೋಕ ಉಳಿದರೆಂದು ।
ಈ ಕಂಭದೊಳಗಿಹರೇ ಹೇ ನೀರೇ ಪ

ಆ ಸೇತೂ ಮೊದಲಾದ ಹಿಮಾಶೈಲ ಪರಿಯಂತ ।
ಸೂಸಿಹದಿವರ ಕೀರ್ತಿ ॥
ಯೇಸು ಬಗಿಯಲಿಂದ ಸೋಸಿ ನೋಡಿದರನ್ನ ।
ಪಾಸಟಿ ಯನಿಸದಲ್ಲೇ । ಯೇ ನಲ್ಲೇ ೧

ನರ ಮೋಹನಾರ್ಥವಾದರು ಲೌಕೀಕೆಂಬುದೂ ।
ಅರಿಯಾರು ಸ್ವಪ್ನದಲ್ಲೀ ॥
ಧರಿಯೊಳಖಿಲ ಸಜ್ಜನರು ಪರೀಕ್ಷಿಸಿಹರು ।
ಬರಿದೆ ಸ್ತವನವಲ್ಲಾವೆ । ಕೇಳಲವೇ ೨

ಹರಿಕೃಪಿ ನೋಡು ಇವರಿಗೆ ಜನರು ಎಷ್ಟು ।
ಜರಿದಾರು ಮನ್ನಿಪರೂ ॥
ಕರಣತ್ರಯದ ಶುದ್ಧರೆರಡು ಮಾರ್ಗವ ಬಲ್ಲ ।
ವರು ನಿತ್ಯಾಚರಿಸಿದರೂ । ಹಿರಿಯಾರೂ ೩

ಇವಗಂದ ನುಡಿಯನು ಭವಕೆ ತಂದರೆ ಲೇಶ ।
ಭವ ದುಃಖವಾಗದಲ್ಲಾ ॥

ಜವ ದೂರವದು ಮುಕ್ತಿ ಜವನ ಬಾಧಿಲ್ಲಾಶು ।
ಕವಿಕುಲ ತಿಲಕರಿಗೇ । ನೀ ಯರಗೇ ೪

ಖಳಹ ಪ್ರಾಣೇಶ ವಿಠ್ಠಲನ ಚರಿತೆ ಪದ
ಗಳಲಿ ಬಣ್ಣಿಸಿ ಸಂತತೀ ।
ನಿಲಸಿ ಜ್ಞಾನಿಗಳನ್ನು ತಲಿ ತೂಗಿಸಿದರು ಪೇ ।
ಳಲು ಎನ್ನ ಮತಿ ಸಾಲದೂ । ಸತ್ಯವಿದೂ ೫

## ೧೭೬

## ಶ್ರೀ ಮೋಹನದಾಸರ ಸ್ತೋತ್ರ

ಪಾಹಿ ಪಾಹಿ ಗುರು ಮೋಹನರಾಯಾ ಪಾಹಿ ಪಾಹಿ ಪ

ಪಾಹಿ ಪಾಹಿ ಗುರು ಮೋಹನ ಸಿಂಧುರ ಹರಿಪಾದ
ಪಂಕೇರುಹ ಮಧುಪಾ ಅ.ಪ.

ನವ ವಿಧ ಭಕುತಿ ಎಂಬೊ ನವ ನವ ಸರಪಳಿಯೊಳು ।
ನವ ನವ ರೂಪದಿ ನಲಿವ ಸುಧೀರಾ ೧

ಪದುಮನಾಭನ ಧ್ಯಾನವ ಮದವೇರಿ ।
ಪದೋ ಪದಿಗೆ ಹರಿ ಪದಾವಗಾಹಿ ೨

ವಿಜಯರಾಯರ ಪಾದರಜವ ಧರಿಸಿ ನೀ– ।
ರಜ ಪ್ರಾಣೇಶ ವಿಠಲನಲ್ಲೆರಗಿದೊ ೩

೧೭೭

## ಶ್ರೀಪುರಂದರರದಾಸರ ಸ್ತೋತ್ರ

ರಾಯರ ಭಾಗ್ಯವಿದು ।
ಪುರಂದರ ರಾಯರ ಭಾಗ್ಯವಿದು ।
ಶ್ರೀಯರಸನ ಪ್ರಿಯ ।
ಪುರಂದರ ರಾಯರ ಭಾಗ್ಯವಿದು ಪ



ನಾರದ ಮುನಿವರ ಕರದಲಿ ವೀಣಾ ।
ಧಾರಿಯಾಗಿ ಧರಾತಳದೊಳಗೆ ॥
ಶ್ರೀ ರಮಣನ ವಿಸ್ತಾರ ಮಹಿಮೆಯನು ।
ಬೀರುತ ಭವ ಮಂದಿರ ಪೊಕ್ಕ ೧

ತೊಡೆಯಲಿಟ್ಟು ನಿಜ ಮಡದಿಯ ತಾ ।
ತಡೆಯದೆ (ವಟದೆಲೆಯಲಿ) ವಿವಿಧ ಮುನಿಗಳಿಂದ ॥
ಸಡಗರದಲಿ ಸಂಸ್ತುತಿಸಿಕೊಂಬ ಬ್ಹಾಂ ।
ಜಡೆಯನು ಕಂಡವನಡಿಗೆರಗಿದನು ೨

ಚರಣಾಂಬುಜಕ್ಕೆರಗಿದ ಮುನಿಪನ ।
ಕರವಿಡಿದೆತ್ತಿ ಸಂರಂಭಿಸುತ ॥
ವರ ನಯ ವಾಕ್ಯಗಳಿಂದ ಕುಶಲವ ।
ಕ್ಕರದಲಿ ಕೇಳಿದ ಸುರಮುನಿಯ ೩

ಬಂದ ಕಾರಣವೇನೆಂದು ಪೇಳಲು ಮು ।
ನೀಂದ್ರನು ತವ ಚರಣಾಂಬುಜದ ॥
ಸಂದರುಶನ ಹೊರತೊಂದು ಕಾರ್ಯವಿ ।
ಲ್ಲೆಂದು ನುಡಿದನಾನಂದ ಬಾಷ್ಪದಲಿ ೪

ಈ ತೆರದಲಿ ನುಡಿದಾ ತರುವಾಯದಿ ।
ಪೀತಾಂಬರ ಬಿಗಿದಪ್ಪಿ ವಿಧಿ ॥
ಜಾತನ ಕರುಣದಿ ಶ್ರೀ ತರುಣೇಶನ
ಖ್ಯಾತಿಯ ತೋರವ ತರಿಸಿ ಧರೆಯಲೆಂದ ೫

ಈ ನುಡಿಯನು ಕೇಳ್ಯಾ ನಾರದ ಮುನಿ ।
ಧೇನಿಸಿ ಶ್ರೀಹರಿ ವರದಿಂದ ॥
ಈ ನಾಡಿನೊಳಗೆ ಪುರಂದರ ಪೊಳಲೊಳ ।
ಮಾನವರೊಳಗುದ್ಭೂತನಾದ ಗುರು ೬

ವ್ಯಾಸ ಮುನಿಯನುಪದೇಶದಿ ತತ್ವಜ್ಞ ।
ಭಾಸುರ ಮತ ಹೊಂದೆವತರಿಸಿ ॥
ಶ್ರೀಶನ ಗುಣ ಕೀರ್ತನೆಯ ಕೀರ್ತಿಸಿ ವಿ ।
ಭಾಸ ಮಾನ ಮಹಿಮೆಯಲಿಂದೊಪ್ಪುವ ೭

ದಾಸ ಜನರ ಪೋಷಿಸುತಲಿ ತದಭಿ ।
ಲಾಷೆಗಳೀವುತ ನಿರುತದಲಿ ॥
ಮೀಸಲ ಮನದಲ್ಲಖಿಳ ಪದಾರ್ಥ ರ ।
ಮೇಶನಿಗರ್ಪಿಸಿ ನಲಿ ನಲಿದಾಡುವ ೮

ದಾಸೋತ್ತುಮರ ವಿಶೇಷ ಮಹಿಮೆಗಳ ।
ನೇಸು ಜನ್ಮದಿ ಪೇಳಲೊಶವಲ್ಲ ॥
ವಾಸುದೇವ ಪ್ರಾಣೇಶ ವಿಠ್ಠಲ ಪ್ರ ।
ಕಾಶಿಪ ಮನದಲ್ಲಿವರ ನಂಬಿದರ ೯

## ಶ್ರೀ ಪ್ರಾಣೇಶದಾಸರ ಲೋಕನೀತಿಯ ಹಾಡುಗಳು

### ೧೭೮

ಮನವೆ ಸ್ಮರಿಸೊ ಕಂಡ್ಯಾ ಹರಿಯಾ । ಶ್ರೀ ರೂ ।
ಗ್ಮಿಣಿ ನಾಥಾ ಭಕುತರನೆಂದೆಂದು ಮರಿಯಾ ಪ

ಮರುಳೆ ಕೇಳಿದನಾನವರತ । ಒಂದೆ ।
ಯರಳಿ ಜನ್ಮವ ತಾಳಿ ಬಂದನಾ ಭರತಾ ॥
ಧರವೆ ವಿಷಯಾಪೇಕ್ಷೆ ನಿರುತಾ । ನೀ ಎ ।
ಚ್ಚರಿದು ಪೂಜಿಸು ತಾನೆ ಒಲಿವಾ ಶ್ರೀಭರತಾ ೧

ಒಡಲು ನಿಶ್ಚಯವೆನ್ನಬ್ಯಾಡೋ । ಧರ್ಮಾ ।
ತಡಿಯವೆ ಹಗಲಿರಳೆನ್ನದೆ ಮಾಡೋ ॥
ಕಡು ತ್ಯಾಗಿ ರವಿಜಾನ ನೋಡೋ । ಭೀಮಾ ।
ನುಡಿದು ಧರ್ಮಜಗಾದಾಲೋಚನೆ ಮಾಡೋ ೨

ಕುಲಗುರು ಸುಖತೀರ್ಥರೆಂದೂ । ಸ್ಪಷ್ಟಾ
ತಿಳಿದು ಪ್ರಾಣೇಶ ವಿಠಲಸಂಘ್ರಿ ಪೊಂದು ॥
ಹಲವು ದೋಷ ಪೋಪವು ಬೆಂದೂ । ಶಿರಿ ।
ನಿಲಯ ಕೊಡುವ ನಿನ್ನಾ ಬಯಕೀಯ ತಂದೂ ೩

### ೧೭೯

ಬೇಡೂವರೋ ಸುಖ । ಬೇಡರೋ ಕಷ್ಟವ ।
ಮಾಡರೋ ಅದರ ಉಪಾಯವಾ ॥ ಜನ ಪ

ಕಿಟ್ಟಾ ತುಳಿದು ಕುರ । ಳೊಟ್ಟೊವರೊಂದಿನ ॥
ಕುಟ್ಟಾರೋ ರಂಗವಾಲಿಯನೂ ೧

ಬಟ್ಟೆ ಕೊಂಬುವರು । ಯಥೇಷ್ಟ ದೇವರುಗಳು ॥
ಪೆಟ್ಟಿಗಿಯೊಳು ಬತ್ತಲಪ್ಪವೂ ೨

ಸಾಲೂ ಸಾಲೆಮ್ಮಿಯ । ಸೋಲಾದೆ ತೊಳೆವರು ॥
ಸಾಲಿಗ್ರಾಮಕ್ಕೀಸು ನೀರಿಲ್ಲಾ ೩

ಇದ್ದ ಪದಾರ್ಥವನ್ನೆ ಬುದ್ಧಿ । ಪೂರ್ವಕವಾಗಿ ॥
ಮದ್ವೇಶಗರ್ಪಿಸಿ ಭುಂಜಿಸರೋ ೪

ತುಕ್ಕೂವರೂರು । ಮೂಕ್ಕೂಕಾಳಿಗೆಂದದ್ದು ॥
ಮುಕ್ಕುಂದನಾ ಸುತ್ತಿ ನಮಿಸಾರೋ ೫

ಬೀಗರೂಟಕನೇಕ । ಭೋಗಾವು ಜೋಳದ ॥
ವಾಗಾರ ಬ್ರಹ್ಮರ ಯಡಿಯೊಳಗೇ ೬

ತಮ್ಮನಿಯವರಿಗೆ । ಖಮ್ಮಾನ ತುಪ್ಪವು ॥
ಖಮ್ಮಟು ದೇವ ಬ್ರಾಹ್ಮರೀಗೆ ೭

ಹಾಳು ಸುದ್ದಿಗೆ ಕಿವಿಗಾಳು । ಕೊಟ್ಟಿಪರೊಮ್ಮೆ ॥
ಕೇಳಾರೋ ಸತ್ಕಥಿಗಳನೂ ೮

ಕೆಟ್ಟದ್ದು ತಾವ ಮಾಡಿ । ಬಿಟ್ಟೆಮ್ಮನು ಪ್ರಾಣೇಶ ॥
ವಿಠ್ಠಲನೆಂದು ಮಿಡುಕೂವರೋ ೯

## ೧೮೦

ನಂಬು ಹರಿಯ ಪಾದವಾ । ಮನವೆ,
ಹಂಬಲಿಸದೆ ಹಲವಾ । ಮನವೆ ಪ

ಸತಿ ಸುತರುಣಲೆಂದು । ಆಸಿಗೆ
ಸತತ ಹಾಕುವಿ ತಂದೂ ॥
ಮತಿಯೆ ಯಮನು ಕೊಂದು । ವೈತಿರೆ
ಸತಿ ಬಿಡಿಸೊಳೆ ಬಂದು ಮನವೇ ೧

ಧರಣಿ ವೆಗ್ಗಳ ಘಳಿಸೀ । ಬಹುದಿನ
ಇರುವೆನೆಂಬುವೆ ಬಯಸೀ ॥
ಧರಿಯಲರು ಪೂರೈಸೀ । ದರೆ ಸುಮ್ಮ
ನಿರು ಮಾಧವನ ಸ್ಮರಿಸೀ, ಮನವೇ ೨

ಧನ ಸಂಪಾದಿಸ ಬ್ಯಾಡೋ । ಖಳ ಸುಯೋ
ಧನನು ಯೇನಾದ ನೋಡೋ ॥
ಘನ ಮಹತ್ಮರ ಕೂಡೋ । ಪ್ರಾಣೇಶ ವಿಠಲನ
ನಿರುತ ಪಾಡೋ, ಮನವೇ ೩

## ೧೮೧

ಭಯ ಉಂಟೆ ಮನುಜ ಶ್ರೀಪತಿಯೆ ಗತಿಯೆಂದವರಿಗೆ ।
ಪಯಗಡಲ ನಿಲಯ ಭಕುತರ ಮರೆಯನೂ ಪ

ದಂಡು ಬಹು ಬರಲಿ, ತನು ರೋಗದಲಿ ಬಳಲಲೀ ।
ಕಂಡು ಒಬ್ಬರು ಮಾತನಾಡದಿರಲೀ ॥
ಹೆಂಡತಿಯು ತುಚ್ಛ ಮಾಡಲಿ, ಮಗನು ಜೋಗಳಲೀ ।
ಕೆಂಡ ತೃಣ ನ್ಯಾಯ ಹರಿಸ್ಮರಣೆಗಿನಿತೂ ೧

ಅರಸುಗಳು ಕೋಪಿಸಲಿ, ವರುಷಗಳು ತಡೆಯಲೀ ।
ಹರಿದು ವ್ಯಾಘ್ರಗಳು ಮ್ಯಾಲೆ ಹರಿದು ಬರಲೀ ॥
ಉರಗ ನಿರ್ಜರ ವದನ ಚೋರ ಭಯವಾಗಲೀ ।
ಶರಧಿ ಋಷಿ ನ್ಯಾಯ ಅನಘನ ಸ್ಮರಣೆಗೇ ೨

ಗ್ರಾಸ ದೊರಕದಲಿರಲಿ, ಬಂಧುಗಳು ಜರಿಯಲೀ ।
ನಾಶವಾಗಲಿ ಫಳಿಸಿದಂಥ ಬದುಕೂ ॥
ಶ್ರೀಶ ಪ್ರಾಣೇಶ ವಿಠ್ಠಲನೆ ನೀ ಗತಿ ಎನಲು ।
ವೀಶಾಹಿ ನ್ಯಾಯ ಈ ಭಯಗಳೆಲ್ಲ ೩

## ೧೮೨

ಸತತ ಹರಿಯ ಸ್ಮರಿಸುತಿರಬೇಕು ಮನವೇ ।
ಇತರ ಚಿಂತೆಗಳು ಗಣಿಸದಲೆ ಇರಬೇಕು ಪ

ಸತಿ ಸುತ ಬಳಗವನ್ನು ಪಾಲಿಸುತಲಿರಬೇಕು ।
ಸತತ ಮಾಡುವುದೆಲ್ಲ ಸ್ವಾಮಿ ಸೇವೆನಬೇಕು ।
ಅತಿಥಿಗಳು ಬರಲು ಕರೆದು ಉಣಿಸುತಿರಬೇಕು ॥
ಮತಿಹೀನರ ಸಂಗ ಬಿಡಬೇಕು, ಮೂಜಗ ।
ತ್ಪತಿ ಯಾಜ್ಞದವರು ಶ್ರೀಪ್ರಮುಖರೆನಬೇಕು ೧

ಗುರು ಹಿರಿಯರ ಚರಣಕೆ ಬಾಗಿ ನಡೆಯಲಿ ಬೇಕು ।
ಪರಮ ವೈಷ್ಣವರ ಗೆಳೆತನವ ಮಾಡಲಿಬೇಕು ।
ಪರವಾದಿಗಳ ಮತವ ನಿಂದಿಸುತಲಿರಬೇಕು ॥
ವರ ಮಂತ್ರಗಳ ಜಪಿಸಬೇಕು । ತನು ನಿಮಿಷ
ಸ್ಥಿರವಲ್ಲವೆಂದು ನಿಶ್ಚಯ ತಿಳಿಯಬೇಕು ೨

ಪ್ರಥಮ ಚರಣದಲಿ ಗುರುಕುಲ ವಾಸವಿರಬೇಕು ।
ದ್ವಿತೀಯದಲಿ ಹರಿಸುರಾರ್ಚನೆ ಮಾಡಲಿಬೇಕು ।
ತೃತೀಯದಲಿ ತೀರ್ಥಯಾತ್ರೆಗಳ ಚರಿಸಲಿಬೇಕು ॥
ಚತುರ್ಥದಲಿ ಹರಿ ಸ್ಮರಿಸಬೇಕೂ । ವರುಷ
ಶತ ಹೀಗೆ ಸತ್ಕರ್ಮದಲಿ ಕಳಿಯಬೇಕೂ ೩

ಮಾನಾಪಮಾನಾದಿ ಸಮನ ತಿಳಿಯಲಿಬೇಕು ।
ಜ್ಞಾನಿಗಳು ಮನುಜರಲ್ಲೆಂದು ಪೂಜಿಸಬೇಕು ।
ಶ್ರೀನಿವಾಸನ ರೂಪಕೈಕ್ಯ ಚಿಂತಿಸಬೇಕು ॥
ಹೀನ ಗುಣವನು ಬಿಡಲಿಬೇಕೂ । ಭಗವಂತ
ಏನು ಕೊಟ್ಟದೆ ಪರಮ ಸೌಖ್ಯವೆನಬೇಕೂ ೬

ಹೇಮ ಲೋಷ್ಟಾದಿಗಳು ಸಮನ ನೋಡಲಿಬೇಕು ।
ಶ್ರೀ ಮಧ್ವಮುನಿ ಮತಕೆ ಸರಿಯಿಲ್ಲವೆನಬೇಕು ।
ಶ್ರೀ ಮಾಧವನ ದಿನದಿ ಉಪವಾಸವಿರಬೇಕು ॥
ನಾಮಕಥೆಯನೆ ಕೇಳಬೇಕೂ । ಸತತ ನಿಷ್ಕಾಮ
ಪ್ರಾಣೇಶ ವಿಠ್ಠಲನು ಎನಬೇಕೂ ೭

## ೧೮೩

ಹರಿ ಹರೀ ಎಂದು ಅನವರತ ಸ್ಮರಿಸೋ ।
ನರ ವಿಷಯ ಲಂಪಟವ ಮುಂಚೆ ತ್ಯಜಿಸೋ ಪ

ಹೋಮಾನ್ನದಿಂದುದಿಸಿ । ವನ ಚರಿಸಿ ಕಪಿ ನೆರಸಿ ।
ಕಾಮಿನಿಯ ಕೊಂದು, ಶರನದಿಯ ದಾಟೀ ॥
ತಾಮರಸ ಮುಖಿಯ ಸಂತೋಷ ಪಡಿಸುತ ಎಲ್ಲ ।
ತಾಮಸರ ಸದೆಬಡೆದು, ಅಸುರಗೊಲಿದಾ ೧

ಬಲಿ ತಿಂದ, ಪುವು ತಂದ, ವಿಷ ಉಂಡ, ಮಡು ಬಿದ್ದ ।
ತುಳಿದ ಸರ್ಪನ, ಶರಿಯವರ ಬಿಡಿಸಿದಾ ॥
ಖಳ ಬಕನ ಕೊಂದರಸಿ ಊಳಿಗವ ಮಾಡಿ, ಶಶಿ ।
ಕುಲದೊಳವತರಿಸಿ, ಧಾರುಣಿ ಸಲಹಿದಾ ೨

ಯತಿಯಾದ ಪ್ರಾಣೇಶ ವಿಠ್ಠಲನ ದ್ವಿಜವರಗೆ ।
ಸುತನಾಗಿ ಸದ್ಗ್ರಂಥ ವಿರಚಿಸಿದನಾ ॥

ಧೃತ ಕಮಂಡುಲ ದಂಡ, ಕಾಷಾಯ ಬದರಿಯಲಿ ।
ಸತತ ನಿಲಿಸಿಹ ಜಗಚ್ಛೇಷ್ಟರಾದಾ ೩

## ೧೮೪

ಹರಿಯನ್ನಬಾರದೆ, ಎಲೆ ಮನವೆ ಆವಾಗಲೀ ।
ಮರಳೊಂದು ವಿಷಯದಾಪೇಕ್ಷ ತೊರದೂ ಪ

ಸಂಸಾರವೆಂಬುದು ದುಃಖಸಾಗರವೊ, ಒಂ ।
ದಂಶವಾದರು ಸುಖವು ಇದರೊಳಿಲ್ಲಾ ॥
ಹಿಂಸಿಸಿಕೊ ದುರ್ಗುಣವ ಇಂದಿನಾರಭ್ಯ ನಿಃ ।
ಸಂಶಯದಿ ಸಜ್ಜನರ ಸಂಗ ಪಿಡಿದೂ ೧

ತನುವು ಸ್ಥಿರವಲ್ಲ ದಾನವ ಮಾಡುವದಕರ್ಥ ।
ಕ್ಷಣ ಮಾತ್ರಕಾಲಸ್ಯ ಮಾಡಸಲ್ಲಾ ॥
ಧನ ಮನವು ಇದ್ದಾಗೆ ಸತ್ಪಾತ್ರರಿಗೇವೆ ಕೊಡು ।
ನಿನ ಗತಿಗೆ ಪಾಥೇಯವೆಂದು ತಿಳಿದೂ ೨

ಶ್ರೀಕಾಂತ ಪ್ರಾಣೇಶ ವಿಠಲ ಮೆಚ್ಚೂವಂತೆ ।
ನೂಕು ದಿನ ಸುಖ ದುಃಖ ಸಮನ ಮಾಡೀ ॥
ಈ ಕು ನರರನ್ನ ಸೇವಿಸದೆ ಸದ್ಭಕ್ತಿಯಲಿ ।
ಶ್ರೀಕಾಳಿಕಾಂತನೇ ಮುಖ್ಯ ಗುರುವೆಂದೂ ೩

## ೧೮೫

ಹರಿಭಕ್ತರಾದವರಿಗಾವ ಭಯವೇನೋ ।
ಪೊರೆವ ಅವರನು ತಾನೆ ಕ್ಷಣ ಕ್ಷಣದಲೀ ಪ

ವಾರುಣೇಂದ್ರನು ಮಡುವಿನೊಳಗೆ ನಕ್ರನ ಬಾಧೆ ।
ಗಾರದಲೆ ಕೂಗಲಾಕ್ಷಣ ಕರುಣದೀ ।
ಶ್ರೀ ರಮಣ ತವಕದಲಿ ಬಂದು ಆ ದುರಿತವನು ।
ತಾರಿಸಿ ಸುಗತಿ ಕೊಟ್ಟಿದ್ದಿಲ್ಲೆ ನೋಡಿ ೧

ಅರಗಿನಾಲಯದಲ್ಲಿ ಕುಂತಿ ತನಯರ ಪೊಗಿಸಿ ।
ಉರಿಯಿಕ್ಕೆ ಕೌರವರು ಕಪಟದಲ್ಲೀ ॥
ಉರುಗ ಶಯನನ ಕರುಣ ಪೂರ್ಣವಿದ್ದುದರಿಂದ ।
ಹೊರ ಹೊರಟು ಬಂದು ಬದುಕಿದರು ಕೇಳಿ ೨

ಧರಿಪತಿ ಕುವರನ್ನ ಶಂಖಲಿಖಿತರು ಕೂಡಿ ।
ಮರಳುವಾ ತೈಲದೊಳು ಹಾಕಲವನೂ ॥
ಸುರವಂದ್ಯ ಪ್ರಾಣೇಶ ವಿಠಲನೇ ಎನಲಾಗಿ ।
ಪರಮ ತಣ್ಣೀರಾಯಿತೆಣ್ಣೆ ನೋಡೀ ೩

## ೧೮೬

ಹರಿಭಕ್ತರಾದ ಬಳಿಕ ದುಃಸ್ವಭಾವದ ।
ನರರ ಕೊಂಡಾಡೂವರೆ ।
ಸರಸೀಜಾಂಬಕನೆ ಕೃಪಾಂಗದಿಂದೀಸೆ ।
ಮರಳೊಂದು ಯೋಚನೆಯೇ ಪ

ಉತ್ತಮ ಏಕಾದಶಿಯ ವ್ರತವಿರಲಾಗಿ ।
ಮತ್ತೊಂದು ವ್ರತಗಳ್ಯಾಕೆ ।
ಸತ್ಯವಂತರ ಸನ್ನಿಧಾನದಲ್ಲಿರುತಿರೆ ।
ಪ್ರತ್ಯೇಕ ಕ್ಷೇತ್ರವ್ಯಾಕೇ ॥
ಪತ್ನಿ ಸಂಗವ ಬಿಟ್ಟು ದುಷ್ಟಬುದ್ಧಿಯಲ್ಲಿಪ ।
ತೊತ್ತಿನ ಸಂಗತಿಯೇ ।

ಪಿತ್ತದ ಗಿರಿ ತನ್ನ ಕೈವಶವಾಗಲು ।
ಹತ್ತೆಂಟು ಹೊನ್ನಿನಾಸೇ ೧

ವರ ಗಾಯಿತ್ರಿಯ ದಿವ್ಯ ಮಂತ್ರ ಜಪಿಸಲು ।
ಶರೀರಕ್ಕೆ ಮೈಲಿಗೆಯೇ ।
ಸುರಗಂಗೆಯೊಳು ಪೊಕ್ಕು ಸ್ನಾನ ಮಾಡಿದ ಮ್ಯಾಲೆ ।
ಹರಿವೊ ಹಳ್ಳದ ಪೊರವೇ ॥
ಗರುಡ ದೇವರ ಮಂತ್ರ ಕಲಿತುಕೊಂಡವನಿಗೆ ।
ಉರುಗಾನ ಹಾವಳಿಯೇ ।
ಅರಸಿನ ಕರುಣಾವೆ ಪೂರ್ಣವಿದ್ದರೆ ಮಿಕ್ಕ ।
ಪರಿಚಾರಕರ ಭಯವೇ ೨

ಕುಂತಿ ನಂದನನ ನಿರಂತರ ಭಜಿಸಲು
ಅಂತಕನುಪಟಳವೇ ।
ಚಿಂತಿತ ಫಲವೀವ ಸುರತರುವಿರಲಾಗಿ ।
ತಿಂತ್ರಿಣಿ ಬಯಸುವರೇ ॥
ಸಂತತ ಸತ್ಕಥಾ ಶ್ರವಣವಾಗುತಲಿರೆ ।
ಮಂತ್ರಗಳಾಸಕ್ತಿಯೇ ।
ಕಂತುಪ ಪ್ರಾಣೇಶ ವಿಠಲಾನ ಪೊಂದಾಲು ।
ಚಿಂತೀಯ ಮಾಡುವರೇ ೩

## ೧೮೭

ಏನು ಸಾರ್ಥಕಾ ಬದುಕಿ ಏನು ಸಾರ್ಥಕಾ ।
ಜಾನಕೀಶನ ಧ್ಯಾನ ಮಾಡದೆ ನಾನು ಎಂಬುವ ಹೀನ ಬದುಕಿ ಪ

ಎಳೆ ಎಳಿದೆನಿಯ ತುಳಸಿ ।
ದಳ ತಂದು ಭಕುತಿಯಿಂದ ॥

ಜಲಜನಾಭನ ಚರಣಕಮಲ ।
ಗಳಿಗೆ ಅರ್ಪಿಸದವನು ಬದುಕಿ ೧

ಹೊತ್ತರೆದ್ದು ಕ್ರಮದಲಿಂದ ।
ಮೃತ್ತಿಕೆ ಶೌಚಾದಿ ಕರ್ಮ ॥
ನಿತ್ಯ ಮಾಡದ್ವರಟಿ ಬಡದು ।
ಹೊತ್ತುಗಳೆವುತಿಪನು ಬದುಕಿ ೨

ಪತ್ನಿ ಜರಿದು ಅನ್ಯ ಸತಿಯ ।
ರತ್ನ ಸಮನ ತಿಳಿದು ಹರಿಯ ॥
ನರ್ತ್ನದಿಂದ ಪಾಡಿ ಸುಗತಿ ।
ಯತ್ನ ಮಾಡದವರು ಬದುಕಿ ೩

ಮಾತೃ ಪಿತೃಗಳಿಗೆ ಮೀರಿ ।
ಭ್ರಾತೃಗಳೊಳು ವಂಚಿಸುತಲಿ ॥
ಶ್ರೋತ್ರಿಯರನು ಹಳಿದು ನಿರಯ ।
ಪಾತ್ರನಾಗುವವನು ಬದುಕಿ ೪

ಡಂಬಕದಲಿ ಮಡಿಯ ಮಾಡಿ ।
ನಂಬಿದವರ ಕೆಡಿಸಿ ತಾನೆ ॥
ಉಂಬುವದಕ್ಕೆ ಪರರ ಹಾನಿ ।
ಹಂಬಲಿಸುತಲಿಹನು ಬದುಕಿ ೫

ಭೇದಮತವ ಪೊಂದದಲೇವ ।
ಮೇಧ್ಯ ಮೇಧ್ಯ ಭಕ್ಷಿಸುತ ಕು ॥
ಚೋದ್ಯದಿಂದ ತಂದಿ ತಾಯಿ ।
ಶ್ರಾದ್ಧ ಮಾಡದವನು ಬದುಕಿ ೬

ಕಾರ್ತಿಕಾದಿ ಸ್ನಾನ ಹೋಮ ।
ಪಾರ್ಥ ಸಖನ ದಿವ್ಯವಾದ ॥

ಮೂರ್ತಿಗಳಿಗೆ ಧೂಪ ಮಂಗ ।
ಳಾರ್ತಿ ಮಾಡದವನು ಬದುಕಿ ೭

ಮಾಧವನ್ನ ರೂಪಗಳಿಗೆ ।
ಭೇದವಿಲ್ಲವೆಂದು ತಿಳಿದು ॥
ಸಾದರದಲಿ ಪೂಜಿಸಿ ಪ್ರ ।
ಸಾದ ಉಣ್ಣದವನು ಬದುಕಿ ೮

ಪ್ರಾಣೇಶ ವಿಠಲ ಪೇಳಿದದನು ।
ಧ್ಯಾನಕೆ ತರದೆ ಅನ್ಯಶಾಸ್ತ್ರ ॥
ಸಾನುರಾಗದಿ ಕೇಳಿ ಸುಖಿಪ ।
ಹೀನ ಬುದ್ಧಿ ನರನು ಬದುಕಿ ೯

## ೧೮೮

ನಾಲಿಗಿದ್ದಾತಕೆ ಲಕುಮಿಲೋಲನ ನೆನಿಯದೆ ।
ಮೂಲೋಕದೊಡಿಯ ಕೇಶವನ ಗುಣ ।
ತಿಳಿದು ಸತತ ಸ್ಮರಣೆ ಮಾಡದೆ ಪ

ಅಜ ಶಿವಾದಿ ದಿವಿಜರಿಂದ ।
ಭಜಿಸಿಕೊಂಬ ಅಖಿಲ ಮಹಿಮ ॥
ತ್ರಿಜಗ ಕ್ಷಣಕೆ ಸ್ವೇಚ್ಛೆಯಿಂದ ।
ಸೃಜಿಪನೆಂದು ಸ್ಮರಣೆ ಮಾಡದೆ ೧

ವ್ಯಾಪಿಸೇಳು ಲೋಕ ಕೆಳಗಿ ।
ನೇಳು ಲೋಕ ನಮ್ಮ ಹರಿಗೆ ॥
ಸ್ಥೂಲ ರೂಪವೆಂದು ವೇದ ।
ಪೇಳುವವೆಂದು ಸ್ಮರಣೆ ಮಾಡದೆ ೨

ಉರಗ ಪರ್ವತದಲಿ ನಿಂದು ।
ಧರಣಿಯೊಳಗೆ ಭಕತ ಜನಕೆ ॥
ಕರದು ಕೊಡುವ ಪ್ರಾಣೇಶ ವಿಠಲ ।
ವರಪು ಎಂದು ಸ್ಮರಣೆ ಮಾಡದೆ ೩

## ೧೮೯

ಕೆಡುಬ್ಯಾಡ ಕೆಡುಬ್ಯಾಡವೆಲ ಪ್ರಾಣೀ । ಇನ್ನು
ಬಿಡು ನಿನ್ನ ದುರ್ಬುದ್ಧಿ ಕಡಿಗಾಣೀ ಪ

ಸತ್ಯ ಮೂರು ಮಾತು ಕೇಳಲ್ಯಾ । ಜ್ಞಾನ
ಭಕ್ತಿ ವೈರಾಗ್ಯವ ಘಳಿಸು, ಕಾಲಾ ॥
ವ್ಯರ್ಥ ಕಳಿಯದೆ ದಿನದ ಮಾಲಾ । ಏನ್ನು
ಮೃತ್ಯು ಎಣಿಸುವುದು ತಿಳಿ ಮೂಲಾ ೧

ಚೇತಾನ ಒಂದೆನ್ನ ಬಾರದೇ । ಜೀವ
ಆತುಮ ಪಂದ್ವರಡಿಪ್ಪುದೋ ॥
ಸೀತೇ ಸಮಾ ಸಮುವೆಂಬೋದೋ । ನ್ಯೂನ
ಧಾತಾದಿಗಳು ಎಂದು ತಿಳಿಪ್ರೋದೋ ೨

ಮಧುರಿಪು ಸ್ವಾತಂತ್ರಾದಿ ಗುಣಾ । ಜೀವ
ತದಧೀನ ಸ್ವಾತಂತ್ರ ವರ ಕಾಣೋ ॥
ಮದಡಾರ ಮಾತಲ್ಲಾ ಶ್ರುತಿ ಗಾನಾ । ಮಾಡು
ತಿದೆ ಬಿಡು ನಿನ ಮತದಭಿಮಾನಾ ೩

ತಿಳಿಸುವೆ ಜಡ ಚೇತನಗಳಲ್ಲೀ । ಶಿರಿ
ನಿಲಯ ನಿಪದು ನೋಡು ಮನದಲ್ಲೀ ॥
ಜಲಧಿಯೊಳಿಪ್ಪ ನದಿ ತೆರದಲ್ಲೀ । ಈ
ಪಲವು ಜಗತ್ತಿಪ ಧರಿಯಲ್ಲೀ ೪

ಶೇವ್ಯ ಪ್ರಾಣೇಶ ವಿಠ್ಠಲ ಜಿತಾ । ಕಾಮ
ಅವ್ಯಕ್ತ ಮಹಿಮ ಅಪರಿಮಿತಾ ॥
ಸವ್ಯಸಾಚಿಗೆ ಭಗವದ್ಗೀತಾ । 'ಕಶ್ಚಿ
ನ್ಮಾಂವೇತ್ತಿ ತತ್ವಾತ ಯೇನ ದೆ ತಾ ೫

## ೧೯೦

ವ್ಯರ್ಥ ವೈಷ್ಣವನಂತೆ ನೋಡಿ ಶೋಣಿತ ಮಾಯ ।
ಗರ್ತದೊಳಗೇ ಪೋಗಿ ಬೀಳಬೇಕಯ್ಯೋ ಪ

ಮಧ್ವರಾಯರ ನೂರು ಕಲ್ಪ ಸಾಧನನಾಮ ।
ಬುಧ್ಧಿವಂತರಿಂದ ತಿಳಿಯಲಿಲ್ಲಯ್ಯೋ ೧

ಪ್ರಾಣಯಾಮವು ಮೂರೊಂದಾಶ್ರಮವು ಅಜ ।
ಮಾನ ಮಾಡುವ ವಿಧಿ ತಿಳಿಯಲಿಲ್ಲಯ್ಯೋ ೨

ಪ್ರಾಣೇಶ ವಿಠಲೊಂದು ಮೂರು ರೂಪದಿ ಯಮ ।
ಸೂನುಯೆಂತಾದ ನೆಂದರಿಯಲಿಲ್ಲಯ್ಯೋ ೩

## ೧೯೧

ಹೀಗನುದಿನದಲಿ ಆಚರಿಪರು ಸದ್ವೈಷ್ಣವರೂ ।
ಹ್ಯಾಗಂದರೆ ಅಪನಿತು ಪೇಳುವೆನು. ಕೇಳ್ವುದು ಸಜ್ಜನರು ಪ

ಕೊಡೋದಿಲ್ಲ ಶೈವರಿಗೆ ದಾನವನು । ಓಡೋದಿಲ್ಲವರದು ॥
ಅಡೋದಿಲ್ಲ ಹರಿಗಲ್ಲದ ವಿಷಯಕೆ । ಹಿಡೋದಿಲ್ಲ ಮನಸು ॥
ಸುಡೋದಿಲ್ಲ ಪರರನ್ನವ ಹಮ್ಮಿಗೆ । ಪಡೋದಿಲ್ಲ ಖ್ಯಾತಿ ॥
ನಡೊದಿಲ್ಲವಧಮರ ಸ್ಥಾನಗಳಿಗೆ । ವಡೋದಿಲ್ಲ ತತ್ವ ೧

ತಡೋದಿಲ್ಲವನ್ಯಾಯ, ಪ್ರವರ್ತಕ । ಬಡೋದಿಲ್ಲ ದೈನ್ಯಾ ॥
ಕಡೋದಿಲ್ಲ ವೃಥ ಪಣಾದಿಗಳನು । ತೊಡೋದಿಲ್ಲ ಸ್ವರ್ಣಾ ॥
ಇಡೋದಿಲ್ಲ ನಾಳಿಗೆ ದಿವ್ಯಾಂಬರ । ಉಡೋದಿಲ್ಲ ಬಯಸೀ ॥
ಜಡೋದಿಲ್ಲ ಭೋಗದ್ರವ್ಯಂಗದಿ । ನುಡೋದಿಲ್ಲಪದ್ಧ ೨

ಹೊಡೋದಿಲ್ಲ ಪ್ರಾಣಿಗಳ ಅನರ್ಪಿತ । ಮುಡೋದಿಲ್ಲ ಶಿರದೀ ॥
ಶಡೋದಿಲ್ಲ ಬಲ್ಲವರಾವೆಂದೂ । ತೊಡೋದಿಲ್ಲ ಮುದ್ರೀ ॥
ಕುಡೋದಿಲ್ಲ ಸಪ್ತಾಂಬು ಕುಶಾಸ್ತ್ರದಿ । ನಡೋದಿಲ್ಲ ಬುದ್ಧಿ ॥
ಬಿಡೋದಿಲ್ಲ ಪ್ರಾಣೇಶ ವಿಠಲನ ದಿನ । ಕೆಡೋದಿಲ್ಲವೆಂದೂ ೩

## ೧೯೨

ಆದದ್ದಾಯ್ತಿನ್ನಾದರು ಒಳ್ಳೇ ।
ಹಾದಿ ಹಿಡಿಯೊ ಪ್ರಾಣೀ ॥
ಈ ದುರ್ನಡತಿಂಧೋದರಿಹಪರದಿ ।
ಮೋದೆಂದಿಗು ಕಾಣೀ ಪ

ನೆಲಾ ಸತೀ ಧನ । ದೊಳಾನವರತ ।
ಹುಳಾಗಿ ಇರುವೆಲ್ಲೋ । ಹಲಾ ಪಿಡಿದು ವಿಧಿ ।
ಕುಲಾಚರಣೆ ಬಿಡೆ । ಪಲಾ ತರುವರಲ್ಲೊ ।
ಸ್ಥಳಾಸ್ಥಳರಿಯದೆ । ಕಲಾಪ ಮಾಡೆ ಫ ।
ಕೊಳಾಗುವುದು ಸಲ್ಲೊ । ಎಲಾ ಕೇಳುವಂ ।
ತಿಲಾ ಮಾತ್ರ ನೀ ಗೆಲಾಹ ಬಗೆ ಇಲ್ಲೋ ೧

ಶಿಲಾದಿ ವಿಗ್ರಹ । ಥಳಾಸೆ ಹರಿಯಂ ।
ಬೆಲಾ ಕೇವಲ ಸುಳ್ಳೋ ॥ ಚಲಾ ಪ್ರತಿಮಿ ಪದ ।
ಗಳಾರ್ಚಿಸದಲೆ । ಮಲಾ ತಿನುತಿಹ್ಯಲ್ಲೋ ॥
ಕಳಾ ಬಿಡದಿರೆ ಅ । ನಿಳಾನ ಹರಿಮನಿ ।

ಮೊಳಾಗಿಹದಲ್ಲೋ । ನಳಾ ಭರತ ಮುಖ ।
ಇಳಾಣ್ಮರಂದದಿ । ಭಲಾ ಯನಿಸಲಿಲ್ಲೋ ೨

ಬಿಲಾ ಸೇರಿ ತಲಿ । ಕೆಳಾಗಿ ತಪಿಸಲು ।
ಫಲಾ ಲೇಸಿತಿಲ್ಲೋ ಖಳಾರಿ ದಿನ ಬಿಂ ।
ಜಲಾ ಕುಳ್ಳೆನೆಂ । ಭಲಾ ಮಾಡಲಿಲ್ಲೋ ॥
ಬಲಾದರದಲಿಂ । ತುಲಾದಿ ಸ್ನಾನ ಮೊ ।
ದಲಾದ ವ್ರತವಲ್ಲೋ । ಬಲಾರಿನುತ ।
ಪ್ರಾಣೇಶ ವಿಠ್ಠಲನ । ಬಲಾ ಘಳಿಸಿಕೊಳ್ಳೋ ೩

## ೧೯೩

ಇಂಥಲ್ಲಿರಬೇಕು ಜನ್ಮ ಸಾರ್ಥಕ ಮಾಡುವ ನರನೂ ।
ಎಂಥೆಂತಲ್ಲೆಂದರೆ ಕೇಳ್ವದು ಸುಜನರು ಪೇಳ್ವೆನದನೂ ಪ

ಭಾಗವತಾದಿ ಪುರಾಣ ಸಾತ್ವಿಕರು ಪೇಳುವ ಸ್ಥಳದಲ್ಲಿ ।
ಭಾಗೀರಥಿ ಮೊದಲಾಗಿಹ ಸತ್ತೀರ್ಥಗಳಿಹ ಭೂಮಿಯಲೀ ॥
ಯಾಗ ಮಾಡುವಲ್ಲಿ ನಾಗಪಾಲಕನ ಆಲಯವಿದ್ದಲ್ಲೀ ।
ಯೋಗಿ ಜನರು ಅಹರ್ನಿಶಿಯಲಿ ಭಗವಧ್ಯಾನ ಮಾಡುವಲ್ಲೀ ೧

ಸತ್ಯ ವಚನವಿದ್ದಲ್ಲಿ, ದುರ್ವಿಷಯ ಬಿಟ್ಟ ಪುರುಷರಲ್ಲೀ ।
ಮತ್ತರಾಗದಲೆ ಬ್ರಹ್ಮಚಾರಿ ಮಾತ್ರಕ ನಮಿಸುವರಲ್ಲೀ ॥
ವಿತ್ತ ರಾಶಿ ಕಸಕುಪ್ಪಿ ಸಮನೆಂದರಿತು ಇಹರಲ್ಲೀ ।
ಮರ್ತ್ಯರಾಶ್ರಯಿಸಿ ಬಂದು ಕಾಲಕುಪಜೀವಿಸದವರಲ್ಲಿ ೨

ತತ್ವವರಿತು ನೋಳ್ಪರಿಗೆ ಹುಚ್ಚರಂದದಿ ಇದ್ದವರಲ್ಲೀ ।
ಉತ್ತಮವಾಗಲಿ ಕೆಟ್ಟದೆ ಆಗಲಿ ನಗುತಲೆ ಇಹರಲ್ಲೀ ॥
ಕತ್ತಿಯೆ ಮೊದಲಾಗಿಹ ಪ್ರಾಣಿಗಳಲಿ ಸಮ ಕರುಣಿದ್ದಲ್ಲೀ
ಸತ್ಯರಮಣ ಪ್ರಾಣೇಶ ವಿಠ್ಠಲನ ಮೂರ್ತಿ ಕಾಂಬರಲ್ಲೀ ೩

## ೧೯೪

ಯಾಕೆ ಸಾಧುಗಳ ಸೇವಿಸಲೊಲ್ಲೀ ।
ಸಾಕುವರೆ ಕಾಕು ಮನವೆ ಪ

ನಿರುತ ಮನಸಿನಲ್ಲಿ । ಹರಿಪಾದ ಕಮಲವ ॥
ಸ್ಮರಿಸುವರಿರಲಾಗಿ । ಮರುಳೊಂದು ಕ್ಷೇತ್ರೆ ೧

ಬಲ್ಲೀದ ಮುಷ್ಟೀಕ । ಮಲ್ಲಾರಿ ಮಹಿಮಿಯ ॥
ಬಲ್ಲಾವರವಯವ । ಎಲ್ಲಾರಂತೇ ೨

ಶಿರ ಕಾಸಿ, ಗಯಾ ನೇತ್ರ । ವರ ಕಾಂಚೀ ನಾಸೀಕ ॥
ಶರಣಾರ ವದನವೇ । ಶಿರಿ ಜಗನ್ನಾಥಾ ೩

ಹೃದಯಾವೆ ವೈಕುಂಠ । ಉದರ ಶ್ವೇತ ದ್ವೀಪ ॥
ಪದ ಸರ್ವ ವಪು ಶೇಷಾ । ಸದನವು ಕೇಳೋ ೪

ಪ್ರಾಣೇಶ ವಿಠಲಾನ । ಧ್ಯಾನಾವ ಮಾಳ್ಪಾರ ।
ಮಾನವರೆಂದರೇ । ಹೀನ ಗತಿಯೋ ೫

## ೧೯೫

ಸೊಕ್ಕಿಲಿ ಇರಬ್ಯಾಡವೆಲ ಹುಚ್ಚ ಪ್ರಾಣೀ ।
ಸೊಕ್ಕಿಲಿ ಇರಬ್ಯಾಡಾ ಪ

ಧೊರಿತನ ಬಂದಾಗ ಕೇವಲ ಬಡವರ ।
ಕರಕರಿ ಬಡಿಸುವಿ ತಿಳಿಯದಲೇ ॥
ಸ್ಥಿರವಲ್ಲ ಸೌಭಾಗ್ಯ ಪೋಗಲು ಬಳಲುತ ।
ತಿರಿಕಿಯ ಬೇಡೂವದಿಟ್ಟಿಹದೆಲವೋ ೧

ಪ್ರಾಯದ ಕಾಲಕ್ಕೆ ಮದದಿಂದ ತಿರುಗುವೀ ।
ತಾಯಿ ತಂದೆ ಗುರುಗಳು ಯನದೇ ॥
ಕಾಯ ಮುಪ್ಪಾಗಲು ಮುನುಗುತ ಮೂಲಿಗೆ ।
ಬಾಯಿ ಮುಚ್ಚಿಕೊಂಡು ಬೀಳುವ್ಯೊ ಮರುಳೇ ೨

ಇಪ್ಪತ್ತು ಸಾವಿರ ಹೊನ್ನಿನ ಬಿಗಿವಿಲಿ ।
ವಪ್ಪಿಲ್ಲದುರಿವಿ ಆ ಧನವು ಕಾಳೀ ॥
ದರ್ಪಹ ಪ್ರಾಣೇಶ ವಿಠಲನ್ಯರಿಗೆ ಕೊಡೆ ।
ಲಪ್ಪಯಮ್ಮ ಎಂದು ಹೊಡಕೊಂಬಿ ಮರುಳೇ ೩

## ೧೯೬

ಹುಚ್ಚು ಸೇರಿತೆ ನಿನಗೆ ಮಂದಮತಿ ಮನವೆ ಕೇಳು ।
ಎಚ್ಚರಿಕೆ ಇಲ್ಲೆ ಶೃತಿ ಸಾರುತಿಹದೂ ಪ

ಪರಮಾತ್ಮ ಆವಾಗ ಏನು ಮಾಡುವನೊ ಯಮ ।
ಗರಿಕಿಲ್ಲವೆಂಬುವರು ಬ್ರಹ್ಮಮುಖರೂ ॥
ಬರಿದೇ ನೀ ಸದನ ಸತಿ ಸುತರು ಎನ್ನವರೆಂದು ।
ಕರಕರಿಗೆ ಒಳಗಾಗಿ ಕೆಡುತಿಹೆಲೊ ವ್ಯರ್ಥಾ ೧

ಈ ತನುವು ನೆಚ್ಚಬಾರದು ನೀರಗುಳ್ಳಿ ಯಂ ।
ದೂ ತುಚ್ಛ ಮಾಡುವರು ಕವಿಗಳೆಲ್ಲಾ ॥
ಪ್ರೀತಿಯಿಂದಲಿ ಅಶನ ಉಂಡು ಸೊಕ್ಕಿದೆ ಒಮ್ಮೆ ।
ಸೋತೆ ಉಪವಾಸದಲಿ ಎಂದು ಮಿಡುಕುತಿ ಯಲವೋ ೨

ಹಿಂದಿನವಗುಣವು ಪೋಗಲಿ ಶುದ್ಧ ಭಕುತಿಯಲೀ ।
ಇಂದು ಪ್ರಾಣೇಶ ವಿಠ್ಠಲನ ಪಾದಾ ॥
ವಂದಿಸುತ ದುರ್ವಿಷಯದಾಪೇಕ್ಷ ಜರಿದು, ದ್ವಿಜ ।
ನಂದನನ ಸ್ನೇಹ ಸಂಪಾದಿಸು ತ್ವರಾ ೩

## ೧೯೭

ಧಿಕು ಧಿಕು ನರಪತಿ ಊಳಿಗವು ।
ಬೇಕು ಬೇಕು ಸಿರಿಪತಿ ವಾಲಗವು ಪ

ಕರದಾಕ್ಷಣ ಸ್ವಾಮಿ ಪರಾಕು ಎಂದು
ಕರವ ಮುಗಿದು ನಿಲ್ಲಲಿ ಬೇಕು ೧



ಸಮೂಹಕೊಂದಾಜ್ಞಾಪಿಸಲೂ ತಾ
ಮಮತೆಯಲಿ ಮಾಳ್ಪುದು ಬಹಳೂ ೨

ಹಳಿದರು ನಗತಲೆ ಇರಬೇಕೂ ತನ
ಕುಲದಭಿಮಾನವ ಬಿಡಬೇಕು ೩

ಇಷ್ಟಾದರು ಉಣಲನ್ನಿಲ್ಲಾ । ಗೇಣೂ
ಘಟ್ಟಿ ವಸ್ತ್ರ ಸ್ವಪ್ನದೋಳಿಲ್ಲಾ ೪

ಹೀನವಿದೆಂದು ತಿಳಿದಧಮರೂ ಶ್ರೀ
ಪ್ರಾಣೇಶ ವಿಠ್ಠಲನವರೆನಿಸರೂ ೫

## ೧೯೮

ಒಲ್ಲೇ ಈ ಕುವೃತ್ತಿಗಳ ಒಲ್ಲೇ ಒಲ್ಲೇ ।
ಎಲ್ಲಾ ಸಜ್ಜನರಿಗೆ ಬಾಗೀ ಬೇಡಿಕೊಂಬೆ ಪ

ಕುಜನರೊಳಗೆ ಸ್ನೇಹ ಎಂದಿಗೆಂದಿಗೇ ಒಲ್ಲೇ ।
ಸುಜನರ ಅಸಂತೋಷ ಬಡಿಸಲೊಲ್ಲೆ ॥
ರಜತಾದ್ರಿ ನಿಲಯ ಸರ್ವೋತ್ತುಮಾನೆನಲೊಲ್ಲೆ ।
ಭುಜಗ ಶಯನಗೆ ಸಮರು ಉಂಟೆನಲಿವಲ್ಲೆ ೧

ಪರಿದಿನಸದಲುಂಬೋರ ಮೊಗವ ನೋಡಲಿವಲ್ಲೆ ।
ಹಿರಿಯಾರರ್ಚಿಸದವರಾ ನೆರಿಯಾ ನೊಲ್ಲೆ ॥
ಪರ ಪೀಡೆಯನು ಸ್ವಪ್ನಾದಲ್ಲಿ ನೆನಿಸಾಲೊಲ್ಲೆ ।
ನರ ಸ್ತೋತ್ರವನು ಮಾಡೀ ಬದುಕಾವಲ್ಲೇ ೨

ಪ್ರಾಣೇಶ ವಿಠಲಾ ಕೊಟ್ಟದನುಪೇಕ್ಷಿಸಲೊಲ್ಲೆ ।
ಏನೂ ಕೊಡದೀರಲಾಪೇಕ್ಷಿಸಲಿವಲ್ಲೇ ॥
ಹೀನಾ ವಿಪ್ರಕುಲಕೆ ಎಂದು ಚಿಂತಿಸಲೊಲ್ಲೆ ।
ಮೀನಾಂಕನ ಮ್ಯಾಳಾ ಒಲ್ಲೇ ಒಲ್ಲೇ ೩

## ೧೯೯

ನಗಿ ಬರುವದೋ ಮನವೆ ನೀನು ಮಾಡುವಾ ।
ಹಗರಣಾಕಿದು ಘನವೇ ॥
ಜಗಪತಿಗೆ ಕರ ಮುಗಿಯದಲೆ ಸದ ।
ವಗತನದೊಳಗೆ ತಗಲಿಕೊಂಡೀ ಪ

ಶೃತಿ ಸಾರುತಿಹದು ಕೇಳೋ । ಈ ಶರೀರವು ।
ಸತಿ ಪುತ್ರಾದಿ ಧನಂಗಳೂ । ಅಸ್ಥಿರವೆಂದೂ ।
ಮತಿಯಿಲ್ಲೆ ತಿಳಿದು ಬಾಳೂ । ನಿಂದಿಸದೆ ತಾಳೂ ॥
ಪ್ರತಿ ದೀನಾ ಮರಿಯದೆ । ಅತಿಥಿಗಾಳುಣಿಸೀ । ಸ
ದ್ಗತಿಯ ಪಡೆವದೋ ದು । ರ್ಮತಿಯಾ ಹರಿಕಥಿಯೊಳ ।
ಗತಿ ನಿರತಕನೆನಿಸಿಕೋ ಯಿ । ನಿತು ಮನಕೆ ಬರಲಿ ।
ತವಕದಿ ಮನ್ಮಥನ ಆಟಕೆ ತೊಡಕಿ । ನಿರಯ
ಸ್ಥಿತನೆನಿಸುವದು । ಹಿತವೆ ನಿನಗೇ ೧

ನರರಾಶ್ರಯಿಸುವದ್ಯಾಕೆ । ಭಕ್ತಿಯಲಿ ಶ್ರೀ ।
ನರಪರಿಯ ಸ್ತುತಿಸಬೇಕೋ । ಇನಿತೂ ಭಾಗ್ಯ ।
ಯರವೆಂದು ತಿಳಿಯಬೇಕೂ । ಮತ್ಸರಾ ಬಿಟ್ಟೂ ।

ಹಿರಿಯರಿಗೆರಗಬೇಕೋ । ಆಸೀಯೂ ಯಾಕೋ ॥
ಧರಿಯೊಳು ಬಹುಮಂದೀ । ಅರಸಾರಿದ್ದರು ಹಿಂದೆ ।
ಅರಿಯಾ ತಮ್ಮ ಕೂಡ ವೈದರೆ । ಸ್ವಲ್ಪ ಸುಖಗಳಾ ।
ಹರಿ ದಿನದಿ ಜಾಗರ ಮಾಡಿ ಇ । ತರನ ಬಯಸದೆ ।
ನಿರುತ ಅಧರ್ಮದಿ ನಿರತನಾಗದೆ । ಬೆರಸುತಿಹೆ ನೀ ।
ಚರೊಳು ಸ್ನೇಹವ । ಮರುಳು ಮನುಜಾ ೨

ಎಷ್ಟು ಹೇಳಲಿ ಸಜ್ಜನಾ । ಭಜಿಸೀ ವಿ ।
ಶಿಷ್ಟಾನೆನಿಸೋ ದುರ್ಜನಾ । ರೊಡನೆ ಮಾತೂ ।
ಬಿಟ್ಟು ಫಳಿಸೋ ವಿಜ್ಞಾನಾ । ಹೀಂಗಿರೆ ದೋಷಾ ।
ನಷ್ಟಾವೊ ಉಳಧಿತೇನಾ । ನಿಶ್ಚಯ ಪ್ರಮಾಣಾ ॥
ಬಿಟ್ಟು ಭಾರತಿಕಾಂತಾಗಿಷ್ಟು । ನಿಂದಿಸಿದಾವಾ ।
ಕೆಟ್ಟ ಕೆಟ್ಟನು ಯನ್ನೊ । ಇಟ್ಟು ದ್ವಾದಶನಾಮ ।
ಮುಟ್ಟದಿರು ಪರರಿಟ್ಟ ಒಡವಿಯಾ ।
ಧಿಟ್ಟಿಸುತ ಮನ । ಸಿಟ್ಟು ಸ್ತ್ರೀಯರ ದೃಷ್ಟಿಸದೆ ಜಗ ।
ಜಟ್ಟಿ ಪ್ರಾಣೇಶ ವಿಠಲನ । ಸಂತುಷ್ಟಿ ಬಡಿಸೋ ೩

## ೨೦೦

ಕೆಡುವರೂ ವ್ಯರ್ಥ ಈ ಬ್ರಹ್ಮಣ್ಯ ಜನ್ಮ ।
ಪಡೆದು ಸಾಧನ ಮಾಡಿಕೊಳ್ಳಾರೋ । ವ್ಯರ್ಥ ಪ

ಅಧಮರ ದಾಸೆಂದರಾನಂದಾ । ಶಿರಿ
ಸದನನ ದಾಸೆಂದರತಿ ದುಃಖ ॥ ದಿವ್ಯ
ಎದಿಯಲ್ಲಿ ಚರ್ಮಗಳಾನಂದಾ । ತುಲಸಿ
ಪದುಮಾಕ್ಷಿ ಧರಿಸಲಿಕ್ಕತಿ ದುಃಖಾ ೧

ಸೂಳೀಯ ಬಳಿಪೋಗಲಾನಂದಾ । ಪಾತ್ರ
ರಾಲಯಖೋಗುವದತಿ ದುಃಖ । ತನ್ನ

ಏಳೆಮ್ಮಿ ತೊಳಿವದಕ್ಕಾನಂದಾ । ಒಂದು
ಸಾಲಿಗ್ರಾಮದ ಪೂಜೆಗತಿ ದುಃಖಾ ೨

ಬಳುವಾಗ ಶಗಣೀಯನಾನಂದಾ । ಪುಷ್ಪ
ಗಳ ನೋಡಿ ತಾಹೋದಕ್ಕತಿ ದುಃಖಾ ॥ ಬಹು
ಕಲ ಭಾಷೆ ಮಗನೋಳಾನಂದಾ । ನಾಮ
ಗಳ ಉಚ್ಚರಿಸುವುದಕ್ಕತಿ ದುಃಖಾ ೩

ಸತಿಗಂಬರವ ಕೊಂಬದಾನಂದಾ । ನಮ್ಮ
ಚ್ಯುತಗೊಂದು ಗೇಣೋಸ್ತ್ರಕ್ಕತಿ ದುಃಖಾ ॥ ನಿತ್ಯ
ಪತಿತರಿಗೀವುದಕ್ಕಾನಂದಾ । ಸಂಭ
ವಿತರಿಗೆ ಕೊಡುವುಕ್ಕತಿ ದುಃಖ ೪

ಏಸೂರೂ ತಿರುಗೂವದಾನಂದಾ । ಕ್ಷೇತ್ರ
ವಾಸೇಕ ರಾತ್ರೀಗೆ ಅತಿದುಃಖಾ ॥ ಇಂಥ
ದೋಷಕಾರಿಗಳಿಗಿಲ್ಯಾನಂದಾ । ಶ್ರೀ ಪ್ರಾಣೇಶ
ವಿಠ್ಠಲಲ್ಲೀವತಿ ದುಃಖ ೫

## ೨೦೧

ಬಳಸ ಬ್ಯಾಡಿರೊ ಇಂಥಾ ಖಳರ ಸ್ನೇಹವಾ ।
ಹಲವು ಬಗೆಯಿಂದ ನೋಡಿ ।
ತಿಳಿದುಕೊಂಡು ಬಾಳಿರೆಣ್ಣ ಪ

ಖಿನ್ನರಾಗ ಬ್ಯಾಡಿ ಮುಂದೆ ।
ಯನ್ನ ಕಾರ್ಯ ಬರಲಿ ನಿಮ್ಮ ॥
ನುನ್ನತರನ ಮಾಳ್ಪೆನೆಂದು ।
ಅನ್ನ ಕಳವ ಪಾಪಿ ಕೂಡ ೧

ಮೊದಲ ಸ್ನೇಹಕಿಂದು ನಮ್ಮ ।
ಕಧಿಕ ಪ್ರಾಪ್ತಿ ಆಹದೆಂದು ॥
ಒದಗಿ ಬಂದವರಿಗೆ ಊರ ।
ಕದಕೆ ಅಪ್ಪಣಿಲ್ಲವೆಂಬ ೨

ಕಲುಷ ನಾಶ ದ್ವಿಜರ ಪಾದ ।
ನಳಿನ ಪಾಂಸು ಸ್ಪರುಶವೆಂದು ॥
ತಿಳಿಯದೆಮ್ಮ ಮನಿಯು ಸ್ವಲ್ಪ ।
ಬಳಿಯ ಗ್ರಹದೋಳಿಹ್ಯದು ಯಂಬ ೩

ಹಲವು ಬೇಡಿದದನು ಕೊಟ್ಟು ।
ಬಲು ಉದಾರಿ ಎಂದು ತೋರಿ ॥
ಶಳದು ಕೊಂಬ ಸಕಲ ವಿದ್ಯ ।
ಸುಲಿವ ಹಣ ಉಪಾಯದಿಂದ ೪

ಕಾಸಿನಾಸಿಗಾಗಿ ಯಿಂಥ ।
ದೋಷಿ ಸಂಗ ಮಾಡಿ ವ್ಯರ್ಥ ॥
ಮೋಸವಾಗ ಬ್ಯಾಡಿ ಪ್ರಾಣೇಶ ।
ವಿಠಲನಂಘ್ರಿ ಭಜಿಸಿ ೫

## ೨೦೨

ಘಾಸಿ ಮಾಡನು ಯಮನು । ಘಾಸಿ ಮಾಡನೂ ॥
ವಾಸುದೇವನಂಘ್ರಿ ಯುಗಳ । ಬ್ಯಾಸರದಲೆ ಭಜಿಸುವರಿಗೆ ಪ

ಎರಡು ಆರು ಪುಂಡ್ರ ತುಲಸಿ ।
ಸರಸಿಜಾಕ್ಷ ಮಾಲಿ ಧರಿಸಿ ॥
ಶಿರಿ ರಮಣನ ಗುಣಕಥನವ ।
ಇರಳು ಹಗಲು ಸ್ಮರಿಸುವರಿಗೆ ೧

ಅಲವ ಬೋಧರುಕ್ತಿಯಂತೆ ।
ಮಲ ವಿಸರ್ಜನಾದಿ ಕರ್ಮ ॥
ಗಳನು ತಪ್ಪದಲೆ ನಡಿಸುತ ।
ಭಳಿರೆ ಎನಿಸಿಕೊಂಬುವರಿಗೆ ೨

ಪನ್ನಗಾರಿಧ್ವಜನ ದಿನದೊ ।
ಳನ್ನ ನಿದ್ರಿಗಳನು ತೊರದು ॥
ಅನ್ಯ ಶಾಸ್ತ್ರಗಳನು ಕನಸಿ ।
ಲೆನ್ನ ನೆನಿಸದಿದ್ದವರಿಗೆ ೩

ಪಂಚತೀರ್ಥ ಕರದೊಳರಿತು ।
ಪಂಚಕರ್ಮಗಳನು ಮಾಡಿ ॥
ಪಂಚ ಅಗ್ನಿಗಳಲಿ ನಿರುತ ।
ಪಂಚ ಆಹುತಿ ಕೊಡುವರಿಗೇ ೪

ತಾರತಮ್ಯ ರೂಪಗಳನು ।
ಸೂರಿಗಳ ಮುಖದಲಿ ಕೇಳಿ ॥
ವಾರಣಾಸಿ ಪ್ರಮುಖ ಯಾತ್ರಿ ।
ಭಾರೆ ಭಾರೆ ಮಾಡುವರಿಗೆ ೫

ಯಾದವೇಶನಿಚ್ಛೆಯಿಂದ ।
ಲಾದ ದೇವೆ ಲಾಭವೆಂದು ॥
ಮೋದ ಬಡುತಲಿದ್ದು ಪಂಚ ।
ಭೇದ ತಿಳಿವ ಜ್ಞಾನಿಗಳಿಗೆ ೬

ಹೀನ ಬಹು ಉತ್ತುಮನು ಯೆಂದು ।
ಪ್ರಾಣಿಗಳೆಂತರಿವರೊ ಅಂತೆ ॥
ಕಾಣಿಸಿಕೊಂಬ ಪ್ರತ್ ಪ್ರತ್ಯೇಕ ।
ಪ್ರಾಣೇಶ ವಿಠಲನೆಂಬುವರಿಗೆ ೭

## ೨೦೩

ವೈರಾಗ್ಯವೇ ಜಪ ತಪ, ಮಖ ಯೋಗ ಯಾತ್ರಿ ಧರ್ಮಾದಾನ ।
ಮಾರಮಣನ ಪ್ರೀತಿದರಿಂದಾಹದು ಎಂಬುವನೇವೇ ಪ್ರವೀಣಾ ಪ

ಉಂಡು ಉಂಡು ನಾ ವುಂಡಿಲ್ಲೆಂಬದೆ ಮಹ ವೈರಾಗ್ಯ ।
ಕಂಡು ಕಂಡೂ ನಾ ಕಂಡಿಲ್ಲೆಂಬದೆ ಬಲು ವೈರಾಗ್ಯ ॥
ಹೆಂಡತಿ ಸಂಗವ ಮಾಡಿ ಮಾಡಿಲ್ಲೆಂಬದೆ ವೈರಾಗ್ಯ ।
ಹಿಂಡೂ ಬಳಗದೊಳು ಇದ್ದೂ ಇದ್ದೂ ಇಲ್ಲೆಂಬದೆ ವೈರಾಗ್ಯ ೧

ನಡದು ನಡದು ನಾ ನಡೆದೇ ಇಲ್ಲೆಂಬದೆ ವೈರಾಗ್ಯ ।
ನುಡಿದು ನುಡಿದು ನಾ ನುಡಿದೇ ಇಲ್ಲೆಂಬದೆ ನಿಜ ವೈರಾಗ್ಯ ॥
ಹಿಡಿದು ಹಿಡಿದು ನಾ ಹಿಡಿದೇ ಇಲ್ಲೆಂತಿಪ್ಪದೆ ವೈರಾಗ್ಯ ।
ಉಡಿಗಿ ಉಟ್ಟು ನಾ ಉಟ್ಟೇ ಇಲ್ಲೆಂತೆಂಬದೆ ವೈರಾಗ್ಯ ೨

ಬಿಟ್ಟೂ ಬಿಟ್ಟೂ ನಾ ಬಿಟ್ಟೆಯಿಲ್ಲೆಂಬದೆ ವೈರಾಗ್ಯ ।
ಕೆಟ್ಟೂ ಕೆಟ್ಟೂ ನಾ ಕೆಟ್ಟಿಲ್ಲವೆಂಬುದೇ ಘನ ವೈರಾಗ್ಯ ॥
ಕೊಟ್ಟೂ ಕೊಟ್ಟೂ ನಾ ಕೊಟ್ಟೆಯಿಲ್ಲೆಂತೆಂಬದೆ ವೈರಾಗ್ಯ ।
ಅಷ್ಟೂ ಶ್ರೀ ಪ್ರಾಣೇಶ ವಿಠ್ಠಲಗರ್ಪಿತವೆಂಬದೆ ವೈರಾಗ್ಯ ೩

## ೨೦೪

ಸ್ವರ್ಗ ನರ್ಕವೆಂಬುದು ಬ್ಯಾರಿಲ್ಲಾ ।
ತಿಳಕೊಳಲಿಕ್ಕರಿಪರಧಮರೂ ॥
ದುರ್ಗಾ ರಮಣನ ಗುಣ ಕೊಂಡಾಡುವ ।
ರಿಲ್ಲೇ ಉಂಟೆಂಥೇಳುವರೂ ಪ

ಅರುಣೋದಯಕೇಳುತ ಭಕ್ತಿಂಧರಿ ।
ಸ್ಮರಣೆಯ ಮಾಡುತಿಹದೆ ಸ್ವರ್ಗಾ ॥

ತುರುಕರ ಬಿಡಿ ಶಗಣಿಯ ಬಳಿ ಕುರ್ಚಿಗಿ ।
ಸರವಿಯ ತಾ ಯಂಬದೆ ನರ್ಕಾ ೧

ನಳಿನಿ ಪ್ರಮುಖ ನದಿಗಳ ತಾರತಮ್ಯವ ।
ತಿಳಿದು ಸ್ನಾನ ಮಾಳ್ಪುದೆ ಸ್ವರ್ಗಾ ॥
ಹಳಸ ಮೋರಿಯಿಂಧರಟಿಕೊಳುತ ಊ– ।
ರೊಳು ಸಂಚರಿಸುವದೇ ನರ್ಕಾ ೨

ದ್ವಾದಶ ನಾಮವ ಮುದ್ರಿ ತುಲಸಿ ಸರ ।
ಸಾದರದಿಂ ಧರಿಪದೆ ಸ್ವರ್ಗಾ ॥
ತಾ ದುರ್ಬುದ್ಧಿಯಲಿಂದಲಿ ಮತ್ತೇ ।
ನಾದರು ಧರಿಸುವದೇ ನರ್ಕಾ ೩

ಜಲಜಾಕ್ಷನ ಪೂಜಿಸಿ ನೈವೇದ್ಯಂ ।
ಗಳ ದ್ವಿಜಗಿತ್ತುಂಬುದೆ ಸ್ವರ್ಗಾ ॥
ಹುಲಿಗಿಯಲ್ಲಿ ಪೊಲ್ಕಮ್ಮ ಕಂಭ ಗೋ ।
ದಲಿಗರ್ಪಿಸಿ ತಿಂಬದೆ ನರ್ಕಾ ೪

ದರುಶನ ಗ್ರಂಥಾರ್ಥವ ಸಾದರದಿಂ ।
ನಿರುತದಿ ಕೇಳುತಿಹದೆ ಸ್ವರ್ಗಾ ॥
ಪರಕಥಿ ಕೇಳುತ ಪ್ರಾಣೇಶ ವಿಠಲನ ।
ಮರದು ಬದುಕುತಿಹದೇ ನರ್ಕಾ ೫

## ೨೦೫

ಜಾರ ಪುರುಷಾರಾಡೋ ನುಡಿಯು । ಶ್ರೀ ಸ
ಮೀರನ ಭಕ್ತರು ಕೇಳಿ ಛೀ ಯನ್ನಿರಿ ಪ

ಮೊನ್ನೆ ನಾ ನದಿಯೊಳು ಸ್ನಾನಕ್ಕೆ ಪೋಗಿರೆ ।
ಹೆಣ್ಣೊಂದು ಬಂದಿತ್ತು ವಗಿಯಲಿಕ್ಕೆ ॥
ಅಣ್ಣಾ ನಾ ಏನು ಹೇಳಲಿ ಯಂವಿ ಇಕ್ಕಾದೆ ।
ಯನ್ನನೇ ನೋಡುವಳೆಂದು ಪೇಳುವನೊಬ್ಬ ೧

ದಾರಿಯೊಳ್ ಬರುತಿರೆ ಗಜಗಮನ್ಯೊಬ್ಬಳು ।
ಸಾರಿ ಸಾರಿಗೆ ಬಂದು ನಗುತ ನಿಮ್ಮಾ ॥
ಊರಾವದೆಂಬಳು ಬಿಡಿ ಬಿಡಿ ಮಾತೀಲಿ ।
ನಾರಿ ಹಂಬಲ ಮರಿಯಿನೊ ತಮ್ಮ ಎಂಬೊಬ್ಬ ೨

ಆ ತರುಣಿಯ ಚಲ್ವಿರೆಯ ನೋಡಿ ಬೆನ್ನಿಗೆ ।
ಆರೂ ಪೋಗಲು ಕೋಣಗುದಗ ಗಂಡೂ ॥
ಜಾತಿಗಳಿಗೆ ನಾಚಿಕಿಲ್ಲೆಂದು ಬೈವಳ ।
ಮಾತೀನ ಸವಿಯೇನು ಹೇಳಲೆಂಬನೊಬ್ಬನು ೩

ಬಿಳಿ ಜಾಡರೋಣಿಯೋಳ್ ಬರುವಾಗ ಪ್ರಾಯದ ।
ವಳು ಕಂಡು ಎದುರಿಗೆ ಪೋಗಲಾಗೀ ॥
ಲಲನೆ ಹಿಂದಕ್ಕೆ ದಬ್ಬಿದರೆ ಗೋಡಿಗಾತೆ ಕೈ ।
ಸಳದದ್ದೆ ಎಚ್ಚರಿಕಿಲ್ಲವೆಂಬುವನೊಬ್ಬ ೪

ಜಾಣಾರು ಬಹುಮಂದಿ ಇರಲಾಗಿ ಬೇಕಂತ ।
ಓಣಿಯೊಳಗೆ ತೊಂಬಲದ ರಸವಾ ॥
ಮೀನಾಕ್ಷಿ ಉಗುಳೀದಳೆನ ಮ್ಯಾಲೆ ಸುಳ್ಳಲ್ಲ ।
ಪ್ರಾಣೇಶ ವಿಠಲನ ಆಣೆಂಬೊಬ್ಬ ವಿವೇಕಿ ೫

## ೨೦೬

ಅನ್ಯ ಸತಿಗೆ ಒಲಿಯಬಾರದೂ ।
ಅನ್ಯ ಸತಿಗೆ ಒಲಿದರೊಂದು ॥

ಘನ್ನತನವ ಕಾಣೆ ಜನರು ಮನ್ನಣೆಡರು ಸದ್ಗತಿಲ್ಲ ।
ಸಣ್ಣ ಮನುಜನಾಗಬ್ಯಾಡ ಪ

ತಂದಿ ತಾಯಿ ಅಣ್ಣ ತಮ್ಮ ।
ಬಂಧು ಬಳಗ ತೊರಿಸಿ ತನ್ನ ॥
ಹೊಂದಿಕೊಂಡ ಶ್ವಾನನಂತೆ ।
ಹಿಂದೆ ಮುಂದೆ ತಿರುಗಿಸುವಳು ೧

ಸ್ನಾನ ಮೊದಲು ಕರ್ಮ ಮಾಡಿ ।
ಏನು ಉಂಬಿ ಫಲವ ದೇಹ ।
ಕ್ಷೀಣಗೊಳಿಸಬ್ಯಾಡವೆಂದು ।
ಹೀನ ಬುದ್ಧಿ ಪ್ರೇರಿಸುವಳು ೨

ಎನ್ನ ಪತಿಯು ಒಬ್ಬ ಮೇಲೆ ।
ನಿನ್ನ ಸಂಗವಲ್ಲದಿತರ ॥
ಕಣ್ಣನೆತ್ತಿ ನೋಡೆನೆಂಬ ।
ಳನ್ಯಕಾರಿ ಜಾರಿ ಕುಲಜೆ ೩

ಪ್ರಾಣದೊಲ್ಲಭನ್ನಕಿಂತ ।
ನೀನೆ ಅಧಿಕವೆಂದು ಬಹಳ ॥
ಆಣೆ ಕೊಟ್ಟು ವಗತನವನು ।
ಹಾನಿ ಮಾಡಿ ತೋರಿಸುವಳು ೪

ಸತಿಯ ಸೇರದಂತೆ ಮಾಡಿ ।
ಸತತ ಚೋದ್ಯ ಮಾತನಾಡಿ ॥
ಹಿತವ ತೋರಿ ಮತಿಯ ಕೆಡಿಸಿ ।
ಅತಿಯಭಾಸ ಮಾಡಿಸುವಳು ೫

ಧನವ ಕೊಡುವತನಕ ಎನ್ನ ।
ತನುವು ನಿನ್ನದೆಂದು ದಕ್ಕಿ ॥

ಕೊನಿಗೆ ರಿಕ್ತತನವು ಬರಲು ।
ಮನಿಯ ಕಡಿಗೆ ಸುಳಿಯಗೊಡಲು ೬

ಇದನು ಮನಕೆ ತಂದು ದಯಾ ।
ಉದಧಿ ಪ್ರಾಣೇಶ ವಿಠಲನಂಘ್ರಿ ॥
ಹೃದಯದಲ್ಲಿ ನೆನೆದು ಚಿಂತೀ ।
ಸುವದು ಸತತ ಸುಖಿಸೊ ಮನುಜ ೭

## ೨೦೭

ಹೋಗೂವಳಗಸೀಯಾ ಪರಿಯಂತಾ । ಭ್ರಾಂತ
ಳಾಗಿ ಬಂದೆಂಬಳ್ ಸೊಸೆಗೆ ಹೀಗಂತಾ ಪ

ಹರಿಯಾತ್ರಿ ಘೋಹ ಜನರ ಕಂಡು ಬ್ಯಾಗ ಮೈ ।
ಮರದು ನೋಡುವೆನೆಂಬ ಹರುಷದಿಂದುಬ್ಬೀ ೧

ನೆರಮನಿಯವರಿಗೆ ಮೊರ ಪುಟ್ಟಿ ಗಿದ್ದಾನ ।
ಯರವು ಎಂದಿಗೂ ಕೊಡದಿರು ಕಂಡ್ಯಾ ಎಂದೂ ೨

ಸುಟ್ಟೀತು ಕೊಳವಿ ಮತ್ತಿಷ್ಟು ಬಾಯಿಲೆ ಊದಿ ।
ಅಟ್ಟುಣ್ಣು ನಿನ್ನಯ ಹೊಟ್ಟೆಗೇ ಎಂದೂ ೩

ತಪ್ಪತಾರ ತಿಂದು ತಿಪ್ಪಿಘಾಕಲಿ ಬ್ಯಾಡ ।
ಒಪ್ಪತ್ತೆ ತಿನುತ ಬಾ ಸಪ್ಪಟಿ ಯಂದೂ ೪

ಮಂದಿ ಕಂಡು ದೀಪ ಮಂದಿರಕಿಡಬ್ಯಾಡ ।
ಮಂದ ತುಟ್ಯಾದೀತು ಮುಂದೆಣ್ಣಿ ಎಂದೂ ೫

ಸಡಗರದಲಿ ಠಾಂವು ಕೊಡು ಎಂದು ಕೇಳ್ಯಾರು ।
ಪಡಸಾಲಿಯೊಳು ತಂದು, ಇಡು ಬಾನವೆಂದೂ ೬

ಭಿಕ್ಷಾದವರಿಗೆ ಮಂತ್ರಾಕ್ಷತಿಗಿಲ್ಲೆನ್ನು ।
ನಾ ಕ್ಷಮಿಸೆ ನೀಡಿದರೆ ಶಿಕ್ಷಿಪೆನೆಂದೂ ೭

ಕುರುಳು ತಾ ಬೆಂಕಿ ಹೊತ್ತಿಸಿ ಕೊಡುವೆನೆಂದು ।
ಮುರಿದು ಹೊತ್ತಿಸಿಕೊಡು ನೆರೆಯವರಿಗೆಂದೂ ೮

ಹೆತ್ತವರೂರಿಂದ ಹಸ್ತು ಬಂದವರೀಗೆ ।
ಅತ್ತೆವರೆಯಿಲ್ಲೆಂದು ಉತ್ತರ ಕೊಡೆಂದು ೯

ಬಿಸಿಲಿಗೆ ಹಾಕು ದವಸಗಳ ಮಾಳಿಗಿ ಸಾ ।
ರಿಸಿ ಕಡ್ಡಿ ಬುಡ್ಡಿಯ ಹಸಮಾಡ್ಯುಣ್ಣೆಂದೂ ೧೦

ಪ್ರಾಣೇಶ ವಿಠಲಾನು ಧೇನಿಸಲಿಲ್ಲಿಹ ।
ನಾನ್ಯಾಖೋಗಲಿ ಎಂದು ತಾ ನಿಂತಳಬಲೆ ೧೧

## ೨೦೮

ಮಧ್ವಮತ ಪೊಂದದವ ದೈತ್ಯ । ಮನ
ಶುದ್ಧವಿಲ್ಲದೆ ಶೀಲ ಮಾಳ್ಪನೆ ವ್ರಾತ್ಯ ಪ

ರವಿ ಬಾರದಿರಲರ್ಘ್ಯ ಕೊಡುವವ ಧನ್ಯ ।
ದಿವದಿ ಕರ್ಮವ ಬಿಟ್ಟು ಮಲಗೂವ ಠೊಣ್ಣ್ಯಾ ॥
ದಿವಿಜೇಶಾರ್ಪಿತವಲ್ಲದುಂಬಾವ ಅನ್ಯಾ ।
ಅವದಾನಾ ಕೊಡುವವ ಅಗ್ರಗಣ್ಯಾ ೧

ತಾರತಮ್ಯ ತಿಳಕೊಳದವ ನಷ್ಟಾ ।
ಮೀರದೇ ಹಿರಿಯರನರ್ಚಿಸುವನೇ ನಿಷ್ಠಾ ॥
ನಾರಿಯರಿಗೆ ಮನಸಿಡುವವ ಭ್ರಷ್ಟಾ ।
ಸೂರಿಗಳಿಗೆ ಎರಗುವನೆ ವಿಶಿಷ್ಟಾ ೨

ಕಾಮಕ್ರೋಧಂಗಳ ಗೆದ್ದವ ವೀರಾ ।
ಈ ಮೊಣ್ಣು ದೇಹ ಪೋಷಿಸಿಕೊಂಬ ಚೋರ ॥
ಧಾಮಾದಿಗಳು ಎನ್ನದೆನದವ ಧೀರಾ ।
ಆ ಮಹಾತ್ಮರ ನಿಂದಿಸುವನೇವೆ ಪೋರ ೩

ಮೂಲಾವತಾರೈಕ್ಯವೆನದವ ಖೋಡಿ ।
ಕಾಲವಿಲ್ಲದೆ ಸುಳ್ಯಾಡುವನೇವೆ ಪೀಡೀ ॥
ಆಳಲಾರದೆ ಸತಿ ಬಿಡುವ ಹೇಡಿ ।
ಶ್ರೀ ಲೋಲ ಪರನೆನ್ನದವ ಕುಲಿಗೇಡಿ ೪

ತಿಥಿ ತ್ರಯ ಸತಿ ಸಂಗ ಮಾಳ್ಪಾನೇ ಹೊಲಿಯಾ ।
ಮತಿಗೆಟ್ಟು ಯಮನಲ್ಲಿ ತಿಂಬೂವ ಕೊಲಿಯಾ ॥
ಕ್ಷಿತಿಯೊಳು ತನ ಭಾವ ಜನಕೆ ತೋರದಿಪ್ಪನೆ ।
ಕೃತಿಪತಿ ಪ್ರಾಣೇಶ ವಿಠಲಾಗೆ ಗೆಳೆಯಾ ೫

## ೨೦೯

ಸರವಾದೀ ಪರವಾದೀ
ಪರಮಾತ್ಮನೆ ನೀನೆಂಬುವರೇನೋ ಪ

ಕ್ಲೇಶ ಮೋದಗಳು ಶ್ರೀಶಗೆಲ್ಲಿಹವೊ ।
ನೀ ಸೋಸುತಲಿಹೆ ಏಸು ಜನ್ಮದಲಿ ೧

ನಿತ್ಯ ತೃಪ್ತನವ ಹೊತ್ತು ತಿಂಬಿ ನೀ ।
ಎತ್ತ ಆತ ನೀನೆತ್ತಲೊ ಮರುಳೇ ೨

ಒಂದೆ ಎಂಬೊ ಮತದಿಂದ ಸಹೋದರಿ ।
ಗಿಂದಿಲಿಂದ ಸತಿ ಎಂದು ಕರವದೋ ೩

ಕಲಿಯಲಿ ಸಲ್ಲದು ಜಲಜಜ ವಿದ್ಯವ ।
ಹಳಿಯ ತಟ್ಟಲಿಯ ಹೊಲಿ ಅನುದಿನದೀ ೪

ಶುದ್ಧ ಸ್ವಭಾವದೋಳಿದ್ದಿಯೊ ಅಥವಾ ।
ಮದ್ಯ ಕುಡಿದರೇ ಬುದ್ಧಿಯೊ ತಿಳಿಯದು ೫

ನೀನಾಡುವದಕೆ ಹೀನಗತಿಯೆ ಧ್ರುವ ।
ಪ್ರಾಣೇಶ ವಿಠಲನ ಆಣೆಲೊ ಕೇಳೂ ೬

## ೨೧೦

ನೀತಿ ಕೆಟ್ಟಿತು ಕಲಿಯುಗದಲಿ ಕೇಳಿ ।
ಮಾತುಳಾಂತಕನ ಮಹಿಮೆಯು ಹೀಂಗದೇ ಪ

ನೀಚ ಕುಲದವನು ದೊರೆ ಬುಧನವರ ಸೇವಕರು ।
ಚೋಚುವಳು ಹೆಂಡತಿಯು ತನ್ನ ಪತಿಯಾ ॥
ಆಚಾರ ಮಾಡುವರೆ ತೊತ್ತು ಹುಡಿಕ್ಯಾಡುವರು ।
ನಾಚಿಕಿಲ್ಲದೆ ಸತತ ಬೇಡುತಿಹರೂ ೧

ತನಗಾಗಬೇಕೆಂದು ಪರಹಿಂಸೆ ಮಾಡುವರು ।
ಧಣಿಯ ಮಾತನು ಮೀರುವನು ಭೃತ್ಯನೂ ॥
ಘನ ಗರ್ವದಿಂದ ಗುರುಗಳ ನಿಂದಿ ಮಾಡುವರು ।
ಮುಣಿಗೆ ಹೋಯಿತು ಹರಿದಿನದ ನಿರ್ಜಲಾ ೨

ಹೆಣ್ಣು ಮಾರುವರು ಉತ್ತಮರು ತಮ್ಮಾದವನು ।
ಅಣ್ಣನಿಗೆ ಕಠಿಣ ವಾಕ್ಯವನಾಡುವಾ ॥
ಇನ್ನೊಂದು ಜನುಮ ಕರಿಯರು ಹೆತ್ತವರ ಸೇವಿ ।
ಸಣ್ಣ ನಡತಿಯಲೆ ಇರುವರು ಸರ್ವರೂ ೩

ಸುಳ್ಳನಾಡುವರು ಪಂಡಿತರು ಪ್ರಭುತನದವನು ।
ಕೊಲ್ಲಿಸುವ ತನ್ನ ರಾಜ್ಯದ ಪ್ರಜೆಗಳಾ ॥
ಇಲ್ಲಧೋಯಿತು ಬ್ರಾಹ್ಮಣರಲ್ಲಿ ಮಂತ್ರದ ವೀರ್ಯ
ಬಲ್ಲವರೆ ಅವಿವೇಕ ಪಥ ಪಿಡಿವರೂ ೪

ಶ್ರೀಶನುತ ಪ್ರಾಣೇಶ ವಿಠಲನಂ ತಿಳಿದು ಕಾ ।
ಳೀಕಾಂತನಲ್ಲಿ ಭಕ್ತಿ ಮಾಡರೂ ॥
ಕಾಕುಲಾತಿಯ ಬಿಟ್ಟು ನಿಃಸಂಗಿಯನಿಸರೂ ।
ನೂಕುವರು ಹಸಿದು ಬಂದರೆ ವಿಪ್ರರಾ ೫

# ಶ್ರೀಪ್ರಾಣೇಶದಾಸರ
# ತಾತ್ತ್ವಿಕ ಹಿನ್ನೆಲೆಯ ರಚನೆಗಳು

(ಸುಳಾದಿಗಳು, ಉಗಾಭೋಗಗಳು ಮತ್ತು ಹಾಡುಗಳು)

೨೧೧ - ೨೩೯

೨೧೧

## ಸುಳಾದಿ – ೧

### ಧ್ರುವತಾಳ

ಶ್ರೀವಿಷ್ಣುವಿನ ದಿವ್ಯಶ್ರವಣಮನನಧ್ಯಾನ । ಈ ವಿಧವಾದ ವಿಚಾರವನು । ಈ ವಸುಧಿಯೊಳು ತ್ರಿವಿಧಾಧಿಕಾರಿಗಳು । ಭಾವ ಶುದ್ಧಿಯಲ್ಲಿ ಬಹು ಬಗೆ ವಿಚಾರಿಸಿ । ಶ್ರೀವರ ಕರುಣೆಸಿ ತನ್ನ ಫರೋಕ್ಷವಿತ್ತು । ಸ್ಥಾವರ ಚೇತನ ಜಗಕೆ – ಜನ್ಮಾದಿ ಕರ್ತ । ಜೀವಭಿನ್ನನು ಕಾಣೊ ಸರ್ವೇಶ । ಪಾವನವಾದ ನಾಲ್ಕು ವೇದ ಭಾರತವರ । ಭಾವುಕ – ಪಂಚರಾತ್ರ ಮೂಲರಾಮಾಯಣ । ಈ ವಿಧವಾದ ಶಾಸ್ತ್ರ ಕಗಮ್ಯ । ಆ ಉಪಕ್ರಮ ಉಪಸಂಹಾರ ಅಭ್ಯಾಸ । ಕೇವಲವಾದ ಉಪಪತ್ತಿ ಮೊದಲಾದ ಲಿಂಗದಿಂದ । ಯಾವದ್ವೇದಾರ್ಥವ ವಿಚಾರಿಸೆ । ಆವಾವ ಬಗೆಯಿಂದ ಹರಿಯೇ ಸರ್ವೋತ್ತಮ । ಭಾವಜ್ಞ ಜನರೆಲ್ಲ ತಿಳಿದು ನೋಡಿ । ಈ ವಿಧವಾದ ಈ ಕ್ಷತೆ ಕರ್ಮನೆನಿಸುವ । ಈ ವಾಸು ದೇವಗೆ ಸಮಸ್ತ ಶಬ್ದ ವಾಚ್ಯ । ತ್ವವ ಪೇಳದಪಾಪಿಗೆ ಏನೆಂಬೆ । ದೇವೇಶನಾದ ಪ್ರಾಣೇಶ ವಿಠ್ಠಲನ । ಈ ವಿಧ ತಿಳಿವುದು ಕಾವಕರುಣೆ ೧

### ಮಟ್ಟತಾಳ

ಸಕಲ ಶಬ್ದಗಳು ನಾಲ್ಕು ವಿಧವೈಯ್ಯಾ । ಪ್ರಕಟದಿಂದ ತತ್ರ ಪ್ರಸಿದ್ಧ ಕೆಲವು । ಮುಕುತಿವಂತರು ಕೇಳಿ ಅನ್ಯತ್ರ ಪ್ರಸಿದ್ಧ । ಅಖಿಳ ಚತುರ್ವಿದ ವಚನಗಳಿಂದ ಪ್ರಾಣೇಶವಿಠ್ಠಲ । ಅಕಳಂಕತ್ವದಲಿ ವಾಚ್ಯ ಪರಮವಾಚ್ಯ ೨

### ತ್ರಿವಿಡಿತಾಳ

ಈ ಶಬ್ದಗಳಿಗೆಲ್ಲ ಯುಕ್ತ ಸಮಯ ಶ್ರುತಿ । ದೋಷಿ ನ್ಯಾಯಾಪೇತ ಶ್ರುತಿಗಳಿಂದ । ಈ ಸೇಸು ವಿರೋಧವು ಹರಿವಾಚ್ಯತ್ವದಲ್ಲಿ । ಸೂಸಿ ಬಂದರು ವೇದವ್ಯಾಸದೇವಾ ।

ಘಾಸಿ ಇಲ್ಲದಂತೆ ಪ್ರಬಲ ಬಾಧಕ–ಪೇಳಿ । ಘಾಸಿಯ ಬಿಡಿಸಿದ ವಿರೋಧವ । ಈಸೊಲ್ಲು ಪುಸಿಯಲ್ಲಿ ವೇದವಚನ ಸಿದ್ಧ । ಲೇಶಸಂದೇಹಗೊಳಿಸಲ್ಲದು । ತಾಸು ತಾಸಿಗೆ ಇದನೆ ಸ್ಮರಿಸಿ ಅಧಿಕಾರಿಗಳು । ದೋಷರಹಿತ ಜ್ಞಾನಾನಂದ ಪೂರ್ಣ । ಶ್ರೀಶನೊಬ್ಬನೆ ಎಂದು ತಿಳಿದು ಪಾಡಿರೊ ನಿತ್ಯ । ಈಶ ಪ್ರಾಣೇಶ ವಿಠ್ಠಲ ನೋಳ್ಪ ಕರುಣದಿ ೩

## ಅಟ್ಟತಾಳ

ಸ್ವರ್ಗಾದಿಗಳಲ್ಲಿ ಗತಿ ಅಗತಿ ಮುಖ್ಯ । ದುರ್ಗಮ ದುಃಖಗಳ ತಿಳಿದು ನಿರ್ವೇದದಿ । ಭಾರ್ಗವಿರಮಣನ ಅತಿಶಯ ಮಹಿಮೆಗಳ । ನಿರ್ಗತದಲಿ ತಿಳಿದು ಹರುಷದಿ ತನು ಉಬ್ಬಿ । ನಿರ್ಗಮವಿಲ್ಲದ ಭಕುತಿ ಸಂಪಾದಿಸಿ । ದುರ್ಗತಿ ಮಾರ್ಗವ ಬಿಟ್ಟಪ । ವರ್ಗಪ್ರದಾ ತನ್ನ ಯೋಗ್ಯತೆ ಅನುಸರಿಸಿ । ನಿರ್ಗಮಿಸದತಿ ಧೇನಿಸಿದರೆ ಕರುಣಾಬ್ಧಿ । ಸರ್ಗದಿ ವಿಮಲ ತನ್ನ ಪರೋಕ್ಷ ಮಾರ್ಗವನೀವನು ಮಿಗೆ ಕಡಿಮೆ ಆಗದೆ । ಸ್ವರ್ಗಾಪವರ್ಗದಿ ಪ್ರಾಣೇಶ ವಿಠ್ಠಲ ವಾ । ಲಗ್ಯೆಸಿಕೊಂಬನು ಕರುಣಾದಿಂದೀ ಬಗೆ ೪

## ಆದಿತಾಳ

ಈ ತರುವಾಯದಿ ಅಖಿಳ ಜನರ ಕರ್ಮ । ವ್ರಾತವ ಕಳೆವನು ವಧು (ಧ) ನವ ಮೊನೆ ಮಾಡಿ । ಶ್ರೀ ತರುಣೀಶನು ಸಕಲ ಜೀವರ ದೇಹ । ಘಾತ ವಿಕ್ರಾಂತಿ (ವ್ಯುತ್ಕ್ರಾಂತಿ) ಭೇದದಿ ಅರ್ಚಿರಾದಿ । ನೀತ ಮಾರ್ಗದಿಂದ ನೀರಜಭವ ನಿಂದ । ಪ್ರೀತಿಯಿಂದಲಿ ತನ್ನ ಸೇರಿಸಿಕೊಂಬನು । ವೀತಲಿಂಗರಮಾಡಿ ವಿಧಿಮುಖರೆಲ್ಲರ । ಈ ತರುವಾಯ ದಿನ ಭುಂಜಿಸಿರ ಭೋಗ । ಜಾತವ ಕೊಡುತಲಿ ಜನನ ಮರಣನೀಗೆ । ವಾತ ಜನಕ ನಮ್ಮ ಪ್ರಾಣೇಶ ವಿಠ್ಠಲ । ಈ ತೆರದಲಿ ಜೀವಜಾತಕ ಪಾಲಿಪ ೫

## ಜತೆ

ದೋಷರಹಿತ ಗುಣಪೂರ್ಣನೆಂದರಿದರೆ ।
ವಾಸುದೇವ ವೊಲಿವ ಪ್ರಾಣೇಶ ವಿಠ್ಠಲ ॥



# ೨೧೨

## ಸುಳಾದಿ - ೨

### ಧ್ರುವತಾಳ

ಧ್ಯಾನವ ಮಾಡು ಮನುಜಾ ದೇಹಾಂತರ್ಗತ ಹರಿಯಾ । ಭಾನುಸನ್ನಿಭ ಭಕ್ತವತ್ಸಲದೇವಾ । ಜ್ಞಾನವಂತರು ಎಲ್ಲ ಈ ತನ ಮನದಲ್ಲಿಧೇನಿಸಿ ಅಪವರ್ಗ ಐದುವರೊ । ದಾನವಾಂತಕ ರಂಗ ಆಪ್ತ ಜನನಿಯಂತೆ । ತಾನೇ ಕರುಣ ದಿಂದ ಕಡುಪಾಲಿಪ । ಈ ನುಡಿ ಸಿದ್ಧವೆನ್ನು ಎಂದಿಗೂ ಪುಶಿಯಲ್ಲ । ಧೇನಿಪ ಮಾರ್ಗವ ಈ ಪರಿ ತಿಳಿವದು । ಈ ನವದ್ವಾರದಿಂದ ಬಲು ಪರಿಶೋಭಿಪ । ನಾನಾ ವರ್ಣವುಳ್ಳ ದೇಹಾಖ್ಯ ನಗರದಿ । ಪ್ರಾಣಾನೆಂಬೋ ಮಂತ್ರಿಯಿಂದ ಲೊಪ್ಪುತದೇವಾ । ಆ ನಳಿನಭವರುದ್ರಾದಿಗಳಿಂದ । ತಾನು ಪೂಜೆಯಗೊಳುತ ದಹರಹೃತ್ಪದ್ಮ ವೆಂಬ । ನಾನಾ ಶೃಂಗಾರ ಸಿಂಹಾಸನದಲ್ಲಿ ಕುಳಿತಿಪ್ಪ । ಜ್ಞಾನಾ ನಾಂದಪೂರ್ಣಬಿಂಬನೋಪಾದಿಯಲ್ಲಿ । ಆ ನಳಿನ ಕರ್ಣಿಕೆಯಲ್ಲಿ ಶ್ರೀ ದೇವಿಯು । ಆನಾಳಾದಲ್ಲಿ ವಾಸಾ ಭೂದೇವಿಯು । ಭಾನುತೇಜ ದಲ್ಲಿ ದುರ್ಗಾದೇವಿಯು ನೀತಿ । ಯಾನು ತಿಳಿ ಕಮಲ ತ್ರಿಸ್ಥಳದಲ್ಲಿ । ಪ್ರಾಣನಿವಾಸ ನಮ್ಮ ಪ್ರಾಣೇಶ ವಿಠ್ಠಲನ್ನ । ಮಾನಸದಲಿ ನೋಡಿ ಸುಖಿಸು ಸತತ ೧

### ಮಟ್ಟತಾಳ

ಕಮಲದಿ ಶೋಭಿಪ ಅಷ್ಟಪತ್ರಗಳು । ವಿಮಲಕಾಂತಿಯಿಂದ ವಿದಿಶ ದಿಶಗಳಲ್ಲಿ । ಸಮವಾಗಿಪ್ಪವು ಅದರೊಳು ಶಕ್ತ್ಯಾದಿ । ರಮೆಯರಸನ ನಿತ್ಯ ವಿಮಲ ಮೂರ್ತಿಗಳು । ಶಮಲನಾಶಕವಾಗಿ ಪೊಳೆವವು ಹನ್ನೆರಡು । ಕ್ರಮದಿಂದಲಿ ಪೂರ್ವ ಮೊದಲಾದ ದಿಶಗಳಲಿ । ರಮಿಸುತಿಪ್ಪವು ನೋಡು ಎರಡೆರಡು ಮೂರ್ತಿ । ಪ್ರಮತಿಯಿಂದಲಿ ನೋಡು ಎಂಟಾದವು ನೋಡು । ಭಮಿಸದೆ ತಿಳಿವದು ನಾಲ್ಕು ವಿದಿಶಗಳಲಿ । ಕ್ರಮ ಮೀರದಂತೆ ಪೊಳೆವುತಿವೆ ನಾಲ್ಕು । ಸುಮನಸರಲ್ಲಲ್ಲಿ ದಿಕ್ಪಾಲಕರಾಗಿ । ನಮಿಸುತಿಪ್ಪರು ಕಾಣೊದ್ವಾದಶ (ರೂಪಗಳು) ಮೂರ್ತಿಗಳು । ಅಮಿತತೇಜದ ಶಕ್ತ್ಯಾದ್ದೇಕಾ ದಶರೂಪಗಳು । ಪ್ರಮದಾಕಾರ ಗಳು ತರುವಾಯದಿ ಒಂದು । ಪು (ಪ್ರ)ಮಾಕೃತಿ ಧರಿಸಿನ್ನು ಹೃದಯ

ದಿಶೋಭಿಪವು । ಕಮಲ ಸಂಭವ ವಾಯು ಅಧಿಷ್ಠಾನ ದ್ವಯದಲ್ಲಿ । ಕುಮುದ ಪತಿಯತೇಜ ಪ್ರಾಣೇಶ ವಿಠ್ಠಲ । ಸುಮತಿಯಿಂದಲಿನೆನಿಯೆ ಮನದಲ್ಲಿ ಪೊಳೆವನು ೨

## ರೂಪಕತಾಳ

ಹೃದಯ ಕಮಲದಲ್ಲಿಪ್ಪ ಕರ್ಣಿಕಾಗ್ರದಲ್ಲಿ । ಸದಮಲ ಅಗ್ರೇಶ ಸದಾವಾಸವಾಗೀ । ಅದುಭೂತಚರ್ಯನು ಆತನೆ ಪ್ರಾಜ್ಞನು ಕಾಣೊ । ತದುತದು ಜೀವರಿಗೆ ಸುಪ್ತಿದಾಯಕನೆನಿಸಿ । ಮುದದಿಂದ ಅಂಗುಷ್ಠಮಾತ್ರರೂಪವ ಧರಿಸಿ । ಮಧುಸೂದನ ಹರಿ ತಾನು ಅದುಭೂತ ಕಾರ್ಯ ಮಾಳ್ಪ । ತದನಂತರದಲ್ಲಿ ಶ್ರೀಪದುಮನಾಭನೆ ಸರ್ವ । ಹೃದಯಾಕಾಶದಲ್ಲಿಪ್ಪೊದಗಿ ತಾ । ಪ್ರಾದೇಶ ಪರಿಮಿತದಲ್ಲಿ । ಸದಾಕಾಲದಲ್ಲಿದ್ದು ಪುರುಷನಾಮಕನಾಗಿ । ಸುದರುಶನಧರನು ತಾನಲ್ಲಿಪ್ಪಬಿಡದಂತೆ । ಪದುಮಕರ್ಣಿಕೆಯ ಮೂಲದೇಶದಲ್ಲಿ ಶ್ರೀ- । ಪದುಮೆಯರ ಸಹರಿ ಮೂಲೇಶನೆನಿಸುತಲಿ । ಮುದಭರಿತನಾಗಿ ಅಂಗುಷ್ಠಾಗ್ರ ರೂಪನಾಗಿ । ಮದನನ್ನ ಜನಕ ವಿಜ್ಞಾನಾತ್ಮಾ ಎಂಬನಾ । ಮದಲಿ ಶೋಭಿಸುತಿಪ್ಪ ಮುರವೈರಿ ಮುದದಿಂದ । ಉದಧಿ ಶಯನ ನಮ್ಮ ಪ್ರಾಣೇಶ ವಿಠ್ಠಲ । ಸದಧೇನಿಪರ ಮನ ಪದುಮಕೆ ತುಂಬೆ ಎನಿಪಾ ೩

## ಝುಂಪಿತಾಳ

ಮೂಲೇಶ ಹರಿಪಾದ ಕೀಲಾಲಜ ಯುಗಳ । ಮೂಲವೆನ್ನೆಕರದಿ ಮೇಲು ಭಕುತಿಯಿಂದ । ಶೀಲಗುಣ ಭಾರತಿ ಲೋಲ ತಾನಾದರದಿ । ಮೂಲೇಶಗಭಿ ಮುಖದಿ ಶ್ರೀಲಕುಮಿಪತಿ ಗುಣ । ಜಾಲನೆನಿಸುತ ಧರಿಸಿ । ಕಾಲ ಒಂದರ ಘಳಿಗೆ । ಸೋಲದಲೆ ಇದ್ದು ಶಚಿ ಲೋಲದಿಶಗಭಿಮುಖಿಸಿ । ಲೀಲೆ ಯಿಂದಿರುತಿಪ್ಪ ಮೂಲೋಪತಿ ಮುಖ್ಯ ಪ್ರಾಣ । ನಲಿ ಶುಚಿಷತ್ ಮೇಲು ನಾಮದಲಿಂದ ಮೆರೆವ ಶ್ರೀಹರಿ ಇಪ್ಪ । ಳಾಳೂಕ ಪ್ರಾಜ್ಞ ಅಪರಾಜಿತ ವೈಕುಂಠ । ಶ್ರೀಲೋಲನಾದಂಥ ಇಂದ್ರನೆಂಬೋ ನಾಮ । ಮಾಲಿಕೀಯಲಿಂದ ಬಲು ಶೋಭಿಸುತಲೀ । ಪಾಲಸಾಗರ ಶಾಯಿ ಪ್ರಾಣೇಶವಿಠ್ಠಲ । ಮೂಲೇಶನಾಗಿ ತಾ ಲೀಲೆ ಈ ಪರಿಮಾಳ್ಪ ೪

## ತ್ರಿವಿಡಿತಾಳ

ಶ್ರೀಮುಖ್ಯ ಪ್ರಾಣನು ಸರಸದಿಂದಲಿ ನಿತ್ಯ । ಈ ಮೂರು ವಿಧ ಜೀವರೊಳಗೆ ಇದ್ದು । ಯಾಮಯಾಮಕೆ ಬಿಡದೆ ತಾಮೇಲು ಕರುಣದಿ । ಶ್ರೀ ಮುಕುಂದನ ಹಂಸ ಮಂತ್ರಗಳ । ತಾಮರಸದಿ ಪೊಂದಿ ಮನವಿಡಿದು ತಿರುಗಿ । ಆ ಮುಹೂರ್ತ ಪರಿಯಂತ ಜಾಗ್ರತೆಯಿಂದ । ತಾಮೀದಂತೆ - ಇಪ್ಪತ್ತೊಂದು ಸಾವಿರ ಮೇಲಾರು ನೂರು ಶ್ವಾಸಂಗಳ । ಶ್ರೀಮಾಧವನ ಸಂಪ್ರೀತಿಗೋಸುಗ ಜಪಿಸಿ । ಈ ಮಹಿಯೊಳು ಯೋಗ್ಯ ಜೀವರಿಂದ । ಸಾಮಜವರ ದರ್ಪಣೆ ಮಾಡಿಸುವ । ಈ ಮಹಿಮನು ತನ್ನ ದ್ವಾರದಿಂದ । ಕಾಮಿತಪ್ರದ ನಮ್ಮ ಪ್ರಾಣೇಶವಿಠ್ಠಲ । ಕಾಮಿತಪ್ರದನಾಹ ಈ ಪರಿಧೇನಿಸೆ ೫

## ಅಟ್ಟತಾಳ

ಕುದುರೆ ಬಾಲದ ಕೂದಲು ಶತ । ವಿಧ ವಿಭಾಗವಮಾಡಿ ಅದರೊಳ ಗೊಂದನು । ಅದರಂತೇವೆ ನೂರು ವಿಧದಿ ವಿಭಾಗಿಸ । ಲದರೊಳಗುಳಿದ ಒಂದಂಶದ ಪರಿಮಿತ ಕಾಣೊ । ವಿಧಿ ಭವಾದಿಗಳ ವಿಡಿದು ತೃಣ ಪರಿಯಂತ । ಒದಗಿ ಜೀವರ ಮಿತಿ ಸದಾಕಾಲ ತಿಳಿವದು । ಇದೆ ಜೀವ ಪವನನ ಪದಕಂಜ ಗಳ ವಿಡಿದು ಬಲುತಾ ಸಮೀ । ಪದಲಿ ನಿರುತಲಿದ್ದು ಸದ ಸತ್ಕರ್ಮವ ಮಾಳ್ಪ । ಅದುಭೂತ ಸಹಸ ಪ್ರಾಣೇಶ ವಿಠ್ಠಲ । ಸದಮಲನಾಗಿ ಸರ್ವದ ಕಾರ್ಯಗಳ ಮಾಳ್ಪ ೬

## ಆದಿತಾಳ

ಹಂಸನಾಮಕನು ಹೃದಯಕಮಲದಲ್ಲಿ । ಹಂಸದಂತೆ ಸಂಚರಿಸುವ ದಳದಲ್ಲಿ । ಕಂಸಾರಿಯು ಅಷ್ಟಭುಜದಲ್ಲಿ । ಹಿಂಸೆ ಇಲ್ಲದೆ ಸದಾ ಧರಿಸಿ ಸುಂದರ ಪದ । ಪಾಂಸುಗಳಿಂದಲಿ ಪರಿಹರಿಸುತಲಿ । ಸಂಸಾರಿಗೆ ದಳಭೇದದಿಂದ ಕರ್ಮಗಳನು ತಾಕೊಡುತಲಿಪ್ಪಹರಿ । ಭ್ರಂಶವಿಲ್ಲದಲೆ ಬಹುವಿಧ ಫಲವೀವ । ಸಂಸೃತಿ ನಾಶ ಪ್ರಾಣೇಶ ವಿಠ್ಠಲಸೀ । ತಾಂಶುವದನ ಪಾಲಿಪ ಮೋಳೆವುತಲಿ ೭

## ಜತೆ

ಈ ಪರಿಯಲಿ ನಿತ್ಯ ಶ್ರೀಪತಿಯ ಧೇನಿಸು ।
ಅಪಾರಮಹಿಮ ಪ್ರಾಣೇಶವಿಠ್ಠಲ ಒಲಿವ ॥

೨೧೩

## ಸುಳಾದಿ ೩

### ಧ್ರುವತಾಳ

ವಿಷಯ ತೃಷ್ಣೇಯ ಬಿಡು ವಿಶ್ವಾದಲ್ಲಿ ಬಾಳು ।
ಕುಶಲ ತಪ್ಪದು ನಿನಗೆ ಎಂದೆಂದಿಗೂ ।
ವಸುಧಿ (ಮೇಲಿದ್ದ) ಮೊದಲಾದ ಪ್ರಾಕೃತದ ಪದಾರ್ಥವು ।
ಬಿಸಜನಾಭಗೆ ಆವಾಸ ಯೋಗ್ಯ ।
ವಶದೊಳು ನಿತ್ಯದಲ್ಲಿ ಇರುತಿಪ್ಪವು ಕೇಳು ।
ಹಸನಾಗಿ ಅದರಿಂದ ಪರರ ಆಧೀನವಲ್ಲ ।
ಪುಸಿಯ ಆಶೆಯ ಮಾಡಿ ರಾಜ್ಯಾದ್ಯರಿಂದಲಿ ।
ವಸುವ ಪಿಡಿಯದೀರೊ ಸಕಲ ಜೀವರನೆಲ್ಲ ।
ಹಸನಾಗಿ ಸಲಹುವ ಹರಿಯ ಪರಮ ಇಚ್ಛೆ ।
ವಶದಿಂದ ಬಂಧನದಿಂದ ಜೀವಿಸೊ ಮನುಜಾ ।
ವಸುಮತಿಯೊಳಗಿದು ಪರಮ ಸಾಖ್ಯ ।
ಪುಸಿಯಲ್ಲ ಈ ಸೊಲ್ಲು ಶ್ರುತಿಯಲ್ಲಿ ಸಿದ್ಧವೊ ।
ವಿಷಯೇಚ್ಛೆ ಎಂಬೋದೆ ವಿಷದ ಪ್ರಾಯ ।
ಅಸಮ ಮಹಿಮ ಹರಿಯ ಪ್ರೀತಿ ಅಹುದೊ ಇದರಂತೆ ರಾ ।
ಜಸ ತಾಮಸ ಕರ್ಮ ಕಟ್ಟದಲೇ ।
ವಿಷಯೇಂದ್ರಿಯಂಗಳೆಲ್ಲ ಹರಿಯ ಆಧೀನ ತಿಳಿದು ।
ಕುಶಲ ನಿವೃತ್ತ ಕರ್ಮಗಳ ಮಾಡುತ ವ ।
ರುಷ ಶತ ಪರಿಯಂತ ಜೀವಿಸಲೋ ।
ಹಸನಾಗಿ ಹರಿಯ ಕಾಂಬ ಜ್ಞಾನಿಗಾದರು ಕರ್ಮ ।
ನೆಸಗದಿದ್ದರೆ ಪಾಪ ಲೇಪವಹದೊ ।
ಮಿಸುಣಿಯಾದರು ಸರಿ ತಾಪ ವಿರಹಿತವಾಗೆ ।
ವಸುಧೆಯೊಳಗೆ ರಾಜಿಸದೆ ರಜಲಿಪ್ತವಾಗಿ ।
ಅಸಮ ಮುಕುತಿ ಪಥಕೆ ವಿಘಾತವಾಗದೊ ।

ಕುಶಲ ಸತ್ಕರ್ಮದ ಕಾರಣದಿಂದ ।
ಪುಶಿಯಲ್ಲ ಸಿದ್ಧವೆನ್ನು ಮುಕುತಿಯ ನಿಜಾನಂದಕ್ಕೆ ।
ಪುಶಿಯ ಬಪ್ಪದು ಸ್ವಲ್ಪ ಹ್ರಾಸವಾಗೀ ।
ಋಷಿಗಳಿಗಾದರು ಇದೆ ಪರಿ ಅಜ್ಞರಿಗೆ ।
ನೆಸಗದಿದ್ದರೆ ಸೋಚಿತ ಕರ್ಮ ಪಾಪ ಲೇಪ ।
ಹಸನಾಗಿ ಬಪ್ಪದು ಆಶ್ಚರ್ಯವೇ ।
ಅಸಮ ಮಹಿಮ ನಮ್ಮ ಪ್ರಾಣೇಶ ವಿಠ್ಠಲನ ಭ ।
ಜಿಸುವದು ಎಂದೆಂದು ಸ್ವೋಚಿತದಂತಲೆ ೧

## ಮಟ್ಟತಾಳ

ಸರುವ ಸ್ವತಂತ್ರನು ಸಿರಿಯ ರಮಣ ಗುಣ ।
ಪರಿಪೂರ್ಣ ಹರಿಯ ಮಹಿಮೆ ತಿಳಿಯದಲೆ ।
ಪರಿ ಮೋಹಿತರಾಗಿ ಪರಿ ಪರಿ ವಿಧದಿಂದ ।
ಪರಮ ಪುರುಷನ್ನಾವಜ್ಞೆ ಚಿಂತಿಸುವ ।
ಪರಮ ಪಾತಕಿ ಜನಕ ಹರಿಹರಿ ಏನೆಂಬೆ ।
ಪರಮ ಕರುಣ ಶರಧೆ ಹರಿ ತಾ ಕೋಪದಲಿ ।
ಮರುತನ ಕೈಯಿಂದ ಗದೆಯಿಂದಲಿ ಬಡಿದು ।
ದುರುಳರ ತನುಲಿಂಗ ಪರಿದತಿ ವೇಗದಲಿ ।
ಹರುಷ ಲೇಶ ರಹಿತ ದುಃಖ ಪರಿಮಿತವಾದ ।
ಸುರಪತಿ ರಿಪು ಜನಕೆ ಸಂಪ್ರಾಪ್ಯವಾದಾ ।
ಸುರಿಯ ನಾಮ ಲೋಕ ಅಂಧಕಾರದಲಿಂದ ।
ಪರಿಪೂರಿತವಾದ ತಮದೊಳು ಬೇಯಿಸುವ ।
ಹರಿಯ ದ್ವೇಷಿ ಜನಕೆ ಫಲಗಳು ಈ ಪರಿಯೊ ।
ಸುರ ನದಿ ಪಿತ ನಮ್ಮ ಪ್ರಾಣೇಶ ವಿಠ್ಠಲ ।
ಕರದು ಮುಕ್ತಿಯ ಕೊಡುವ ನಿಜರೂಪ ಧೇನಿಪಗೆ ೨

## ತ್ರಿವಿಡಿತಾಳ

ವಿರಹಿತ ಭಯರೂಪ ವಿಶ್ವ ಕುಟುಂಬಿಯು ।
ಪರಮ ಮುಖ್ಯನು ಕಾಣೊ ಜಗಗಳಿಗೆ ।

ಪರಮ ವೇಗದ ಮನಸಿನಿಂದಲಿ ಅತಿ ವೇಗ ।
ಸರಸಿಜ ಭವ ರುದ್ರ ಸುರವರರೂ ।
ಅರಿಯರು ಬಲು ಕಾಲಾ ಚಿಂತಿಸಿದರು ಇವನಾ ।
ಪರಿಮಿತ ಗುಣ ಸಾಕಲ್ಯಾದಿ ।
ಹರಿಯು ಸುರರನೆಲ್ಲ ಸ್ವಭಾವ ಜ್ಞಾನದಿ ।
ಅರಮರೆ ಇಲ್ಲದೆ ಅಖಿಳರ ನೋಳ್ಪನು ।
ಚರಿಸದೆ ಕುಳಿತು ಓಡುವರನು ಮೀರುವ ।
ಮರುತನು ನಾನಾ ಜೀವರ ಯೋಗ್ಯತೆಯನು ।
ಸರಿಸಿ ಮಾಡಿದ ಕರ್ಮಗಳೆಲ್ಲವ ।
ಭರದಿ ಭಕುತಿಯಿಂದ ಸಮರ್ಪಿಸುವನು ।
ಪರರನೆಲ್ಲರ ಭಯಪಡಿಸುವ ಭರದಲಿ ।
ಪರರಿಂದ ಜಾನಾ ಹರಿ ಎಂದೆಂದಿಗೂ ।
ಸರುವ ವ್ಯಾಪುತ ಚಿಂತ್ಯ ಶಕ್ತಿಯಾದದರಿಂದ ।
ಹೊರಗೆ ಒಳಗೆ ದೂರ ಸಮೀಪದಿ ।
ಇರುತಿಪ್ಪ ಅನುಗಾಲ ಹಿಂದು ಕ್ಷಣ ಬಿಡದಲೆ ।
ಸರುವ ಭೂತಗಳೊಳು ಅಂತರ್ಯಾಮಿಯಾಗಿ ।
ಪರಮ ಆಕಾಶದಂತಿಪ್ಪನು ।
ಹರಿಯಲ್ಲಿ ಬಿಡದೆ ಸರ್ವದ ವಿಶ್ವವಿರುವುದು ।
ಪರಮ ಭಕುತಿಯಿಂದ ಇವನು ಕೇಳಿ ।
ಸಿರಿಯ ರಮಣ ಶೋಕ ವಿರಹಿತ ಸದಾಲಿಂಗ ।
ಶರೀರ ವಿದೂರ ಸ್ಥೂಲ ಮೊದಲಿಗಿಲ್ಲಾ ।
ಪರಿಪೂರ್ಣ ದೇಶ ಕಾಲ ಗುಣದಿಂದಲಿ ।
ಹರಿಯೆ ಎಲ್ಲರ ಪಾವನ ಮಾಳ್ಪದರಿಂದ ।
ನಿರುತ ಶುದ್ಧನು ಎಂದೆನಿಸಿಕೊಂಬ ।
ಪರತಂತ್ರ ಮೊದಲಾದ ಮೋಕ್ಷ ಪಾಪರಹಿತ ।
ಸಿರಿ ಮೊದಲಿಗೆ ಚೇತನ ಜಡವ ।
ಪರಿ ಪರಿ ತಿಳುವ ಸರ್ವಜ್ಞ ಕಾರಣದಿಂದ ।
ಧರಣಿಯೊಳಗೆ ಕವಿಯೆನಿಸಿಕೊಂಬ ।
ಸಿರಿದೇವಿ ಬೊಮ್ಮಾದ್ಯರ (ಮನು) ಮನ ನಿಯಾಮಕನಾಗಿ ।

ಸರುವದಾ ಮನೀಷಿ ನಾಮದಲಿಪ್ಪನೂ ।
ಸುರರ ನರರ ಎಲ್ಲರ ವಶಿಕರಿಸುವ ।
ಸರುವವು ಈತನ ಪ್ರೇರಣೆಯು ।
ಪರರ ಅಪೇಕ್ಷಿಸದೆ ಇದ್ದ ಕಾರಣದಿಂದ ।
ಸ್ವರೂಪ ಪ್ರಮಿತಿ ಪ್ರವರ್ತಿಗಳಲ್ಲಿ ಸ್ವಯಂ ಭೊ ।
ಸರಸಿಜ ಭವನ ಲಿಂಗದಲಿಂದ ಅನಿರುದ್ಧ ।
ಶರೀರವ ಜನಿಸುವ ಅದೆ ಮಹತ್ವವು ।
ಭರದಿ ಆ ತತ್ವದಿಂದ ಎಲ್ಲ ತತ್ವಗಳದು ।
ಸರಸದಿ ಸೃಜಿಸುವ ಸರ್ವ ಪದಾರ್ಥಗಳ ।
ಪರಿಯು ಇದೇ ಸಕಲ ಕಲ್ಪಕ್ಕು ಅನಾದಿಯಿಂದ ।
ಪರಮ ಮಹಿಮನ ಲೀಲೆಯ ಮಾಳ್ಪ ।
ಪರಮ ಸುಜನರೆಲ್ಲ ಈ ಪರಿ ತಿಳಿದು ಪಾ ।
ಮರ ಮತಿ ತ್ಯಜಿಸಿ ಮನದೊಳಗೆ ।
ಹರಿಯ ಧೇನಿಸಿದರೆ ತನ್ನ ರೂಪವ ತೋರಿ ।
ಪರಮ ಪದವೀನೀವ ಭಯ ಶೋಕ ಅಜ್ಞಾನ ।
ವಿರಹಿತರಾಗುವರು ಹರಿಯ ಪೊಂದಿದ ಜನರು ।
ತೊರೆದು ದುರ್ಮತಿಯನು ಈ ಪರಿ ಚಿಂತಿಸು ।
ಪರಿ ಪರಿ ಗುಣವುಳ್ಳ ಪ್ರಾಣೇಶ ವಿಠ್ಠಲನು ।
ಶರಣರ ಶರಣರ್ಗೆ ಶಮದಮೆ ಕುಲ ಸಖ ೩

**ಅಟ್ಟತಾಳ**

ಶ್ರೀ ರಮಣನೆ ದೋಷದೂರ ಸುಗುಣನೆ ।
ಕಾರು ಮತಿಯಲಿ ಜೀವಾಭೇದ ಸಾಮ್ಯವ ।
ಸಾರೆ ಮುಕುತಿಯಲಿ ಮುಕ್ತರಭಿಮತೆ ।
ಚಾರು ಯದಾಪಶ್ಯ ಎಂಬ ಶ್ರುತಿಗೆ ।
ಸಾರ ಅರ್ಥವನು ಯೋಚಿಸದೆ ಕುಯುಕ್ತಿಲಿ ।
ನಾರಾಯಣಗೆ ಮುಕ್ತ ಸಾಮ್ಯವ ಪೇಳುವ ।
ಘೋರ ಪಾಪಿ ಜನಕೆ ಕ್ರೂರ ಅಂಧ ತಮಸು ।
ಬಾರಿ ಬಾರಿಗೆ ತಪ್ಪದಲೆ ಆಗುವ ।

ಧೀರನಂತರ್ಯಾಮಿ ಯರಿಯಾಜ್ಞದಿ ।
ಈ ರೀತಿ ವಾಚಕೆ ಸಂಶಯವಿಲ್ಲವೊ ।
ಸಾರ ಮತಾರ್ಥವ ತಿಳಿದು ಈ ಕುಮತವ ।
ಭೂರಿ ಬಾರಿ ಬಾರಿ ನಿಂದಿಪದಿರೆ ಆ ।
ಕ್ರೂರ ಜನಕೆ ಪ್ರಾಪ್ಯ ತಮಸಿನಿಂದಧಿಕತೀ ।
ಪಾರ ದುಃಖ ತಮವಾಗುವದೆಲೊ ಈ ।
ಸಾರ ಮಾತಿಗೆ ಸಂಶಯ ನೀ ಬಡದಲೆ ।
ಆ ರೀತಿ ಜನರ ನಿಂದಿಸುವ ಸರ್ವದ ।
ಧೀರ ಬುದ್ಧಿಯಲಿ ಶ್ರೀಹರಿಯ ಸುಜ್ಞಾನದಿ ।
ಪೂರ್ಣಾನಂದ ಮೋಕ್ಷವನೈದುವ ।
ಬಾರಿ ಬಾರಿಗೆ ಪಾತಕರ ನಿಂದೆಯಿಂದ ।
ಭೂರಿ ದುಃಖಾ ಜ್ಞಾನ ಮೋಹಗಳುಳ್ಳ ಸಂ ।
ಸಾರ ಸಾಗರವ ವೇಗ ದಾಟುವನು ।
ಈ ರೀತಿಯಿಂದಲಿ ಎರಡು ವಿಧ ಮೋಕ್ಷವರ ।
ಪೂರೈಸುವದರಿಂದ ಧಾರುಣಿ ಜನರು ವಿ ।
ಚಾರಿಸೆ ಜ್ಞಾನ ಮಿಥ್ಯಾಜ್ಞಾನ ನಿಂದೆಯ ।
ವಾರವಾರಕ ಆಚರಿಸಬೇಕು ।
ಶ್ರೀರಮಣಿಗೆ ಸೃಷ್ಟಿಕರ್ತೃತ್ವವು ಇಲ್ಲೆಂದು ।
ಸಾರುವರಿಗೆ ಸಿದ್ದ ನಿತ್ಯ ನರಕವು ।
ಕಾರಣ ಸೃಷ್ಟಿಗೆ ಎಂದು ತಿಳಿದು ಸಂ ।
ಹಾರ ಕರ್ತೃತ್ವ ಶ್ರೀಹರಿಗಿಲ್ಲವು ।
ಈ ರೀತಿಯಲ್ಲಿ ತಿಳಿದವರಿಗೆ ಅದಕಿಂತ ।
ಘೋರ ಅಂಧ ತಮಸು ಸರಣಿ ಕಾಣೊ ಈ ।
ಕಾರಣದಿಂದ ಸೃಷ್ಟಿ ಸ್ಥಿತಿಗಳಿಗೆ ಸಂ ।
ಹಾರಾದಿ ನಾನಾ ಕರ್ತೃತ್ವ ತಿಳಿದು ।
ನಾರಾಯಣಗೆ ಉದ್ಧಾರನಾಗಬೇಕು ।
ದೂರ ದೋಷನ ಸುಖ ಜ್ಞಾನ ಸೃಷ್ಟಿಗೆ ।
ಕಾರಣನೆಂದು ತಿಳಿದರೆ ಸುಜ್ಞಾನ ।
ಸ್ವರೂಪನಾಗುವ ಸಿದ್ಧವಾ ಹೆರಿಗೆ ಸಂ ।

ಹಾರ ಕರ್ತೃತ್ವವ ತಿಳಿದರೆ ಅಜ್ಞಾನ ।
ದೂರವಾಗುವದೊ ದುಃಖಾದಿಗಳೆಲ್ಲ ।
ಈ ರೀತಿಯಲಿ ಸಂತತ ತಿಳಿಯಲಿ ಬೇಕು ।
ಸಾರ ಹೃದಯ ವಾಸ ಪ್ರಾಣೇಶ ವಿಠ್ಠಲ ।
ಕಾರುಣ್ಯದಿಂದಲಿ ಕೊಡುವನೊ ಮುಕುತಿಯ ।
ಸ್ವರೂಪವನ್ನು ಈ ಪರಿ ಧೇನಿಪಂಗೆ ೪

## ಆದಿತಾಳ

ವನಜನಾಭನ ಬಿಂಬ ರೂಪ ಸಾಕ್ಷಾತ್ಕಾರ ।
ಮಿನಗುವ ಮೋಕ್ಷಕೆ ಕಾರಣ ನಿಃಸಂಶಯ ।
ಘನ ಮಹಿಮನ ರೂಪ ಕಾಂಬುವದಕೆ ಹರಿಯ ।
ಗುಣ ಕರ್ಮ ಕಥಾ ಶ್ರವಣ ಮನನಾದಿ ಸಾಧನವು ।
ಸನುಮತಿಯಲಿ ಕೇಳಿ ಇದರೊಳು ಒಂದು ಉಂಟು ।
ಚಿನುಮಯ ರೂಪನ ಪ್ರಸಾದ ಸಿದ್ಧವಾಗೆ ।
ತನು ಅಪರೋಕ್ಷ ಮೋಕ್ಷ ಉಭಯವು ಸಿದ್ಧವಹುದು ।
ಅನುಮಾನ ಸಲ್ಲದು ಇದರೊಳು ವಿವೇಕವು ।
ಅನುಷ್ಟಿತ ಶ್ರವಣನು ಅಪರೋಕ್ಷವಾಗುವದಕೆ ।
ದ್ಯುನದಿ ಜನಕನ್ನ ಪ್ರಾರ್ಥಿಪ ಪರಿ ತಿಳಿಯೊ ।
ಗುಣಪೂರ್ಣ ಮುಖ್ಯ ಜ್ಞಾನ ಜಗನಿಯಾಮಕ ।
ಮುನಿಜನ ಗೇಯನೆ ವನಜ ಸಂಭವನಿಂದ ವಿಶೇಷಗಮ್ಯನೆ ।
ಘನ ರಸ್ಮಿನಾಮಕ ಸ್ವರೂಪ ಜ್ಞಾನವನು ।
ಇನಿತು ಮಾತ್ರವಲ್ಲ ಬಾಹ್ಯ ಜ್ಞಾನವ ಸಹ ।
ಅನಿಮಿತ್ಯ ಬಂಧುವೆ ವಿಸ್ತರಿಸುವದೆಲೊ ।
ದನುಜ ದಲ್ಲಣ ನಿನ್ನ ಪರಮ ಕಲ್ಯಾಣ ರೂಪ ।
ಅನವರತದಿ ನೋಳ್ಪೆ ಕರುಣಿಸಿ ನಿನ್ನ ರೂಪ ।
ಕನಕಮಯ ಪಾತ್ರವೆನಿಸಿಕೊಂಬುವ ದಿವ್ಯ ।
ಇನನ ಮಂಡಲದಿಂದ ಅಚ್ಛಾದಿತವಾದದ್ದು ।
ಎನಗೆ ನೋಡುವದಕೆ ನಿರಾವರಣ ಮಾಡು ।
ಅನನಂತರ್ಯಾಮಿ ಅಹೇಯ ನಿತ್ಯ ಸತ್ಯ ।

ಅಣು ಜೀವ ದೇಹದೊಳಗೆ ಇದ್ದರು ನೀನೆ ಆ ।
ತನುಗಳು ಭಸ್ಮಾತ್‌ವಾದರೂ ಮಹಾಮಹಿಮನೆ ಉಪಹತಿಯಿಲ್ಲ ।
ಅನಿಳನೊಳಗೆ ನೀನು ಅಂತರ್ಯಾಮಿತ್ವದಿಂದ ।
ಅನವರತದಲ್ಲಿ ಇದ್ದ ಕಾರಣ ವಾಯು ।
ಘನ ಜ್ಞಾನದಿಂದಲಿ ಅಮೃತನೆನಿಸಿಕೊಂಬ ।
ಚಿನುಮಯ ನಿನ್ನಾಶ್ರಿತ ಈ ಪರಿ ಇರಲು ।
ನಿನಗುಪಹತಿ ಉಂಟೆ ಎಲ್ಲಿ ಇದ್ದರು ಸರಿ ।
ವನಜಲೋಚನ ನೀನು ಮಾಡಿ ಮಾಡಿಸಿದ ಸಾ ।
ಧನವನು ಕೈಕೊಂಡು ಅನುಗ್ರಹ ಮಾಡುವದು ।
ಪ್ರಾಣ ಪ್ರತೀಕ ವ್ಯಾಪ್ತ ।
ಇನಿತು ಸ್ತೋತ್ರವ ಮಾಡಿ ಹರಿಪ್ರಸಾದಾಖ್ಯ ।
ಧನ ಸಂಪಾದಿಸಬೇಕು ಇದರ ತರುವಾಯ ಕೇಳು ।
ತನುವು ಮಾಡಿದ ಮನುಜ ಮೋಕ್ಷಗೋಸುಗ ಪ್ರಾ ।
ರ್ಥನೆ ಮಾಡುವ ಪರಿ ಏಕಾಗ್ರಚಿತ್ತನಾಗಿ ।
ತನುಗಳ ನಿಯಾಮಕ ಅರ್ಚಿಷ ಮೊದಲಾದ ।
ಘನ ಮಾರ್ಗಗಳಿಂದ ಗುಣತ್ರಯ ಶೂನ್ಯ ಮೋಕ್ಷ ।
ಧನವನೀವದು ದೇವ ಪುನರಾವರ್ತಿರಹಿತ ಪದವಿಗೆ ಕಾರಣ ।
ವೆನಿಪ ಜ್ಞಾನಂಗಳ ಅನಿತು ಬಲ್ಲಿಯು ನೀನು ।
ಅನಿರುದ್ಧ ಅದರಿಂದ ಬಿನ್ನೈಸುವೆನು ರಂಗ ।
ಅನುಪಮ ನಿನ್ನಯ ಅನುಗ್ರಹದಿಂದಲಿ ।
ಕೊನೆ ಮೊದಲಿಲ್ಲದ ಪೂರ್ವೋತ್ತರ ಪಾಪ ।
ಅನಭಿಮತ ಪುಣ್ಯ ಸಹಿತ ಪೋದವು ಕರುಣಿ ।
ಘನ ಪ್ರಾರಬ್ಧವೆಂಬ ಕರ್ಮದ ಕರುಣದಲ್ಲಿ ।
ಕ್ಷಣದೊಳು ದೂರಮಾಡು ಮಾಡೆನೆಂಬುದು ನಿನಗೆ ।
ಮನಸಿನೊಳಗೆ ಇತ್ತೆ ಸತ್ಯ ಸಂಕಲ್ಪನೆ ।
ಅನಿಮಿತ್ತ ಉಪಕಾರಿ ಇನಿತು ಎನಗೆ ನೀನು ।
ಕೊನೆಯಿಲ್ಲದುಪಕಾರ ಮಾಡಿದದಕೆ ಆನು ।
ನಿನಗೋಸುಗ ಜ್ಞಾನ ಭಕುತ್ಯಾದಿಗಳಿಂದ ।
ನಿನ್ನ ವನಜ ಯುಗಕೆ ಮನವ ಮಾಡುವೇನಲ್ಲದೆ ।

ಮನಃ ನಿನ್ನಾಜ್ಞವು ಮೀರುವದುಂಟೆ ।
ಅನನನುತ ಪ್ರಾಣೇಶ ವಿಠ್ಠಲ ನಮೋ ನಮೊ ।
ವನಜ ಭವಾದಿಗಳು ನಿನ್ನಾಜ್ಞ ವೀರಲೋಕವೇ ೫

**ಜತೆ**

ಈ ಪರಿಯಲಿ ದ್ವಿವಿಧ ಬಗೆಯಿಂದ ಯಾಜಿಸೆ
ಶ್ರೀಪತಿ ಪ್ರಾಣೇಶ ವಿಠಲ ಮುಕುತಿಯ ಕೊಡುವ ॥

**ಅಥವಾ**

ನಿರತಿಶಯವಾದ ಪ್ರಿಯ ಉಪಕಾರಿಯೇ ನಮೋ ।
ಪರಿಪೂರ್ಣ ಗುಣನಿಧಿ ಪ್ರಾಣೇಶ ವಿಠ್ಠಲ ॥

**೨೧೪**

ಮಾರನ್ನೈಯ್ಯನೆ ಕೇಳಾ ಕಲಿ ವ್ಯಾಪ್ತಿ ಆದದ್ದು ।
ಆರಾ ಮುಂಧೇಳಿ, ಎನ್ನುಬ್ಬಸ ಕಳಕೊಳ್ಳಲ್ಯೋ ಪ

ನಳ ಪ್ರಮುಖರು ತೋಟಕ ಬೀಜ ಬಿತ್ತಿ ನೀರೆರ ।
ಧಾಳು, ನಾಟಲಿಲ್ಲೆಂದವರಾಸಿ ಗೋರವ ಬಾಳು ೧

ನಳ ಪ್ರಮುಖರು ಪೂಜಿಸಿದ ಗುಡಿ ಹಾಳು ।
ಹಲವರು ಬಳಸಲು ಈಚಲ ಹಾಳು ೨

ಜಲ ತೃಣ ದುರ್ಲಭ ವೈದನ ಹಾಳು ।
ಬೆಳದೀತೆ ಭೂಪುರಾ ಎಂಬಾಸಿ ಹಾಳು ೩

ಹೊನ್ನಹಳ್ಳಿ ದೊಡ್ಡವು ಕಲ್ಲೂರು ಮಣ್ಣೂರು ।
ಅನ್ನಿಲ್ಲ ದ್ವಿಜರಿಘೊಟ್ಟಿ ತುಂಬಾ ಹೆಸರೂರು ೪

ಊರ ಮುಂದಿದ್ದಷ್ಟೆವೆ ಅಡವಿ ಭಾವಿ ಮೀರಿ ।
ದೂರ ಹೋದರೆ ಹಾಳ್ಕೇರಿ ನೀರಲಕೇರಿ ೫

ಅಧಮರು ಹೊನ್ನಾಕುಪ್ಪಿ ಛತ್ರವ ಪಡವರು ।
ಬುಧರ ಸದನಗಳಾದವು ತಿಪ್ಪಿ ತೆವರೂ ೬

ಕನಸವಿ ರಳಮತ ಕೈಯೊಳಗಲಗೂ ।
ಅನುಚಿತದಿಂದ ವಿಪ್ರರಾದರು ಭಣಗೂ ೭

ಸುಳ್ಳೆಷ್ಟು ಹಾಳಭಾವಿ ಗುಂಡಸಾಗರೆಂಬೋರು ।
ಎಲ್ಲೆಲ್ಲಿ ನೋಡೆ ಗುಡ್ಡಾ ಇಲ್ಲ ಕಲ್ಲೆಂಬೋರು ೮

ಸೊನ್ನವೆಂಬಾರೂರೀಗೆ ಭಂಗಾರ ಗೊಂಡೆಂಬರೂ ।
ಸಣ್ಣ ಹಳ್ಳಿಗೆ ಚನ್ನ ಪಟ್ಟಣೆಂಬುವರೂ ೯

ಬೆಲ್ಲಾದ ಮೊರಡಿ ಹತ್ತಿಗುಡ್ಡಾ ಯಮ್ಮಿಗುಡ್ಡೆಂಬೋರು ।
ಅಲ್ಲೆಲ್ಲಿ ವ್ರಾತ್ಯರೇವೆ ಬಲುಗಿಂಚರಿಹರು ೧೦

ಹುಲಿಗುಡ್ಡಾ ಕರಡಿ ಚಿರ್ಚಾ ದೇಶದೊಳೆಲ್ಲಾ ।
ಸಲಹೋದು ನೀ ಬಲ್ಲಿ ಪ್ರಾಣೇಶ ವಿಠಲಾ ೧೧

## ೨೧೫

ಭುವನ ವನಾ ಯಂಧ್ಯಾಗಿದ್ದರೆ ಕರ ।
ಸುವದು ನಿರಂತರ ಲೋಕದಲೀ ॥
ಅವಿದಿತ ನಾನು ಅದನ್ನ ಆಪನಿತು ।
ವಿವರಿಸುವೆನು ಕಲಿಗಳು ಕೇಳೀ ಪ

ರವಿ ಮೂಡವ ಮುಂಚೇಳುತ ಶ್ರೀಮಾ ।
ಧವನ ಸ್ಮರಿಸುತಿರಲದೆ ಭವನಾ ॥
ಯುವತಿಯರಾ ವ್ಯಾಳ್ಯದಲಿ ಮೊಸರು ಮಥ ।
ನವ ಮಾಡುತಿಹರು ಅದೆ ಭವನಾ ೧

ಶಂಖ ಚಕ್ರ ಮೊದಲಾಯುಧ ಧರಿಸದೆ ।
ಮಂಕುಗಳಿರುತಿಹರದೇ ವನಾ ॥
ಸಂಕಟ ಚೌತೀ ಶಿವನಿಸಿ ಭೂತ ಶ ।
ಶಾಂಕನ ಪೂಜಿಪರದೇ ವನಾ ೨

ಅಂಗನಿಯರು ತಿಲಕಾಯುಧ ಕುಂಕುಮ ।
ಶ್ರೀಂಗರವಾಗಿ ಹರದೆ ಭವನಾ ॥
ಅಂಗಣದಲಿ ವೃಂದಾವನ ಗೋವ್ಗಳು ।
ರಂಗವಲಿಕ್ಕುವರದೆ ಭವನಾ ೩

ಸರುವರು ಸರ್ವದ ದುಷ್ಟ ಶಬ್ದ ಉ ।
ಚ್ಚರಿಸುತಲಿಪ್ಪರು ಅದೇ ವನಾ ॥
ಹರಿಗತಿ ಪ್ರಿಯಕರ ತುಲಸಿಲ್ಲದ ಮಂ ।
ದಿರವೆ ನಿಶ್ಚಯವಾಗಿ ವನಾ ೪

ರಾಮಾರ್ಪಿತದನ್ನವ ಹೋಮಿಸಿದ ।
ಧೂಮ ವ್ಯಾಪಿಸಿಹದದೆ ಭವನಾ ॥
ಭಾಮಿನಿಯರು ಕೆಲಸವ ಮಾಡುತ ಖಳ ।
ಭೀಮನ ಸ್ಮರಿಸುವರದೆ ಭವನಾ ೫

ದೇವಪೂಜೆ ನೈವೇದ್ಯವು ವೈಶ್ವ ।
ದೇವ ಯಂಬದಿಲ್ಲದೇ ವನಾ ॥
ಆವ ಕಾಲಕೂ ವೇದ ವೇದ್ಯ ಭೂ ।
ದೇವರು ಬರದಿಹದದೇ ವನಾ ೬

ವೇದ ಪುರಾಣದ ಘೋಷವು ಸರ್ವದ ।
ಭೂ ದಿವಿಜರ ಸಂದಣಿ ಭವನಾ ॥
ವಾದಿಗಳ ಹಳಿದು ಮಧ್ವರಾಯರಾ ।
ರಾಧನೆ ಮಾಡುವರದೆ ಭವನಾ ೭

ಹಿಕ್ಕದೆ ತಲಿ ಕಚ್ಚಿಲ್ಲದೆ ತಿರುಗುತ ।
ಮಕ್ಕಳನಳಿಸುವರದೇ ವನಾ ॥
ಸೊಕ್ಕಿಲಿ ಗಂಡತ್ತಿಗಳಿಗೆ ಬೈತಿಪ ।
ರಕ್ಕಸಿ ಪೆಂಗಸಿಹದೇ ವನಾ ೮




ತಂಬೂರಿ ತಾಳಂಗಳ ಸುಸ್ವರ ।
ತುಂಬಹದೆಂದೆಂದು ಭವನಾ ॥
ಉಂಬುವಾಗ ಪ್ರತಿ ಪ್ರತಿ ತುತ್ತಿಗೆ । ಪೀ
ತಾಂಬರನ ಸ್ಮರಿಪರದೆ ಭವನಾ ೯

ಶೌಚ ದಂತ ಧಾವನ ಮೊದಲಾದ ಸ ।
ದಾಚಾರಿಲ್ಲಲ್ಲದೇ ವನಾ ॥
ಯಾಚಕರಿಗೆ ತುತ್ತನ್ನವಿಲ್ಲ ಮ ।
ತ್ತ್ಯೋಚನಿ ಯಾತಕೆ ಅದೇ ವನಾ ೧೦

ಹರಿದಿನದಲಿ ಸರ್ವರು ನಿರ್ಜಲ ಜಾ ।
ಗರವನು ಮಾಡುವರದೇ ಭವನಾ ॥
ಮರುದಿನ ಭೋಜನ ಸೂರ್ಯೋದಯ ಕಂ ।
ತರಿಸದೆ ಮಾಡುವರದೆ ಭವನಾ ೧೧

ಉದಯಾಗಿ ತಾಸಾದರನ್ನ ನರ ।
ಸುದತಿಯರೇಳದ ಮನೇ ವನಾ ॥
ಪದುಮನಾಭ ನಾಮೋಚ್ಚಾರಣೆ ಯಂ ।
ಬದು ಎಂದೆಂದಿಲ್ಲದೇ ವನಾ ೧೨

ಪ್ರತಿದಿನ ಧರ್ಮಕೆ ಪ್ರತಿಕೂಲಾಗದ ।
ಸತಿ ಸುತರಿದ್ದರೆ ಅದೆ ಭವನಾ ॥
ವೃತಗಳು ಸದ್ದಾನಗಳು ತಿಳಿದನವ ।
ಕತ ಮಾಡುತಿಹ್ಯರದೆ ಭವನಾ ೧೩

ರೊಕ್ಕವಿದ್ದು ಸದ್ವ್ಯಯವಾಗದ ಯಳಿ ।
ಮಕ್ಕಳಿಲ್ಲದಿಹ ಸದನೇ ವನಾ ॥
ಮುಕ್ಕುಂದನ ದಾಸರ ನಿಂದಿಸುತಿಪ್ಪ ।
ಚಿಕ್ಕ ಮತಿಗಳೀಹದೇ ವನಾ ೧೪

ಮಾರುತ ಮತವನುಸರಿಸುತಲೀ ವ್ಯವ ।
ಹಾರ ಮಾಡುವದೆ ಭವನಾ ॥
ಮಾರುತಿ ಸುತ ಪ್ರಾಣೇಶ ವಿಠ್ಠಲನ ಪ ।
ದಾರಾಧನೆ ಮಾಡುವರದೆ ಭವನಾ ೧೫

## ಉಗಾಭೋಗ

### ೨೧೬ ಅ

ಅಲ್ಪಧರ್ಮವು ಜ್ಞಾನದಿಂದ ಮಾಡಲು ಬ್ರಹ್ಮ ।
ಕಲ್ಪ ಪರಿಯಂತ ಸುಖ ಉಂಟು ನರಗೇ ।
ಸ್ವಲ್ಪೇತರ ತಿಳಿಯದೆ ಮಾಡಲ್ ಫಲವು ಭುಜಗ ।
ತಲ್ಪ ಪ್ರಾಣೇಶ ವಿಠ್ಠಲ ಮೆಚ್ಚನೂ ೧

### ೨೧೬ ಬ

ಫಣಿಯು ನರಪತಿ ಹುಲಿಯು ಯುವತಿಯು ಪೋ ।
ರನು ಪರರ ಚಿಂಹಪನು ಕಡು ಮೂ ।
ರ್ಖನು ಮಲಗಿರಲೆಚ್ಚರಿಸೆ ಸಲ್ಲ, ಕ್ಷುಧಿ ತೃಷಿ ಕಾಮಾರ್ಥಿ
ಯನು ವಿದ್ಯಾರ್ಥಿಯ ನಿರುತ ಕೃಷಿ ಪೂರ ।

ವನ ಅಡಿಗಿ ಮಾಳ್ವನ ಫಳಿಗಿ ಬಡಿ ।
ವನ ಎಬ್ಬಿಸಲುಚಿತನಘ ಪ್ರಾಣೇಶ ವಿಠಲನಾಳ್ಗಳಿಗೇ ೧

## ಉಗಾಭೋಗ

### ೨೧೭ ಅ

ಬಿಳಿಯಾ ಬಟ್ಟೆಯು ಕೆಂಪು ಡೊಳ್ಳಿನವರು ಬೀದಿ ।
ಯೊಳು ಬರುತಿರೆ ಕಂಡು ಆಸೆಯಿಂದ ।
ಸಲೆ ಲಜ್ಜೆಯನು ತೊರೆದು ಬೆನ್ನು ಬಿಡದಲೆ ಹತ್ತಿ ।
ಕೊಳಬೇಕು ಫಲ ಮಂತ್ರಾಕ್ಷತೆಯಾನೆಂದೂ ।
ಹಲಬುತ ಕುಣಿ ಕಲ್ಲು ಮುಳ್ಳು ನೋಡದೆ ಓಡೂ ।
ತಲಿ ಬಂಟರಿಂದಾಗ ತಡಿಸಿಕೊಳುತಾ ।
ತಿಳಿದುದಾತನು ತೋರಿದಷ್ಟು ಕೊಟ್ಟಾರೆ ಹಿಗ್ಗಾ ।
ದಲೆ ಜನ್ಮಾರಭ್ಯದಾ ಕಷ್ಟಾ ಸ್ಮರಿಸೀ ।
ಫಳಿಕೇನು ವೈಚ್ಚೆನೀ ಗೃಹಸ್ಥನಲಿಹ ದ್ರವ್ಯಾ ।
ನೆಲಿಯಾ ಬಲ್ಲಿನ್ಯುವಂದಕ್ಕಧಿಕಾರೆಂದೂ ।
ಕೆಲವು ಜನರು ತನ್ನಿಂದಧಿಕಾ ತಂದುದು ನೋಡಿ ।
ಬಲು ನೊಂದವರೀಗೆ ದೋಷಾರೋಪಿಸಿ ।
ಇಳಿಯೊಳೀಪರಿ ದುರ್ಮಾರ್ಗದಲಿಹ ಜನಕ್ಕೆ ನೀ ।
ನೊಲಿವೊದೇತೊ(ಕೊ) ಶ್ರೀ ಪ್ರಾಣೇಶ ವಿಠ್ಠಲಾ ೧

### ೨೧೭ ಬ

ವನ ಹೀನವಾದ ನದಿಗಳಿದ್ದು ವ್ಯರ್ಥ ।
ಧನ ಹೀನನಾದ ಸಾವಕಾರ ವ್ಯರ್ಥಾ ।
ತನುಜಾರು ಇಲ್ಲದ ಮಂದಿರ ವ್ಯರ್ಥಾ ।
ಹಣ ವಿಷ್ಣು ದ್ರೋಹಿಗೆ ಕೊಟ್ಟದ್ದು ವ್ಯರ್ಥಾ ।
ಗುಣಹೀನ ಸನ್ಯಾಸಿ ವಂದನಿ ವ್ಯರ್ಥಾ ।

ಘನ ಗರ್ಜಿಸಿದರೇನು ಮಳೆ ಇಲ್ಲ ವ್ಯರ್ಥಾ ।
ಅನಲಾನು ಧೂಮಯುಕ್ತವಾಗೆ ವ್ಯರ್ಥಾ ।
ವನುತಿಗೆ ಗಂಡ ಅಂತರಿ ಸಾಲು ವ್ಯರ್ಥಾ ।
ಮನಿತನದಳಿಯನಾಗುವದಂತು ಬಲು ವ್ಯರ್ಥಾ ।
ವನಜರಹಿತವಾದ ಕಾಸಾರವು ವ್ಯರ್ಥಾ ।
ಅನುವಾದ ಮದಹೀನ ಗಜವಾದರು ವ್ಯರ್ಥಾ ।
ಕುಣಿಯದ ಹಾರದ ಕುದುರಿ ಇದ್ದೂ ವ್ಯರ್ಥಾ ।
ಸನುಮತ ಸ್ವರಹೀನ ವೇದಪಾಠ ವ್ಯರ್ಥಾ ।
ತೃಣ ಕಂಟಕಯುಕ್ತ ಮಾರ್ಗವಾದರು ವ್ಯರ್ಥಾ ।
ಮನಸು ಸಮಹೀನವಾದ ಜ್ಞಾನ ವ್ಯರ್ಥಾ ।
ಕನಸು ಕಾಸೆಂಬೊದು ಸುಳ್ಳು ಖ್ಯಾತಿ ವ್ಯರ್ಥಾ ।
ವಣ ಡಂಬಕವಾದ ದಾನಧರ್ಮ ವ್ಯರ್ಥಾ ।
ಮನಸಿಜ ಪಿತ ಶ್ರೀ ಪ್ರಾಣೇಶ ವಿಠ್ಠಲನಂಘ್ರಿ ।
ಯನು ಸೇವಿಸದ ಬಂದ ಮನುಜ ಜನ್ಮವು ವ್ಯರ್ಥಾ ॥

## ಉಗಾಭೋಗ

### ೨೧೮

ಪರಸತಿ ಪಡದಮ್ಮನೆಂಬವ ಧನ್ಯ ।
ಹರದಿ ಮಕ್ಕಳನ ಪೋಷಿಸುವವ ಧನ್ಯ ।
ಶಿರಿ ಬಂದಿರಲು ನೋಡಿ ನಡದವ ಧನ್ಯ ।
ಧರಣಿ ಸುರರ ಪೂಜೆ ಮಾಳ್ಪನೆ ಧನ್ಯ ।
ಇರದಂತೆ ಸಂಸಾರದೊಳಗಿಹ ಧನ್ಯ ।
ನಿರುತ ಪ್ರಾತಃಸ್ನಾನ ಮಾಳ್ಪನೆ ಧನ್ಯ ।
ತರಣಿಗೆ ಸಭೆ ಅರ್ಘ್ಯ ಕೊಡುವವ ಧನ್ಯ ।
ಸುರಮುಖನಿಗೆ ಉಣಿಸುವವನೇ ಧನ್ಯ ।
ಮರತು ದುರ್ಮತ ನೆನಸದವನೇ ಧನ್ಯ ।
ಹರಿದಿನ ವ್ರತ ದೃಢನಾದವ ಧನ್ಯ ।

ಉರು ಕ್ಷೇತ್ರಗಳ ಯಾತ್ರೆ ಮಾಳ್ಪನೇ ಧನ್ಯ ।
ಪರ ಪೀಡಿಗಳಿರೆ ಕೊಂಬುವನೇವೆ ಧನ್ಯ ।
ಪರ ಕಾರ್ಯಂಗಳಿಗೆ ಸಹಯನಾಹ ಧನ್ಯ ।
ಹರಿಗಿಂದಿರಿಗೆ ಭೇದವೆಂಬವ ಧನ್ಯ ।
ಹರ ಮುಖ್ಯರಲಿ ಭಕ್ತಿ ಮಾಳ್ಪನೆ ಧನ್ಯ ।
ಶರಿರಭಿಮಾನವ ಬಿಟ್ಟವ ಧನ್ಯ ।
ವರ ಪಂಚಭೇದವ ತಿಳಿದವನೆ ಧನ್ಯ ।
ದುರುಳಾದೇವರ ಪೂಜೆ ಬಿಟ್ಟಾವ ಧನ್ಯ ।
ನರರಿಚ್ಛೈಸಿದೊಸ್ತು ಕೊಡುವವ ಧನ್ಯ ।
ಕೊರತಿ ವೃದ್ಧಿಗೆ ಸಮನಿಹಾನೆ ಧನ್ಯ ।
ಗುರು ಮಧ್ವಾಂತರ್ಗತ ಪ್ರಾಣೇಶ ವಿಠಲಾನ ।
ಚರಣ ಕಮಲ ಪೊಂದಿ ಬಾಳ್ವನೆ ಧನ್ಯ ॥

## ಶ್ರೀ ಪ್ರಾಣೇಶದಾಸರ ತಾತ್ತ್ವಿಕ ಹಿನ್ನೆಲೆಯ ರಚನೆಗಳು

### ೨೧೯

ಶ್ರೀಪೂರ್ಣ ಬೋಧ ಮತವಾ ನಂಬಿ ।
ಶ್ರೀ ಪತಿಯ ಒಲಿಸುವವರು ಕೇಳೀ ಪ

ಆದಿಯಲಿಯಾದ ಚರಿತೆಯನ್ನು ಪರ ।
ಮಾದರದಿ ಕೇಳಿ ಸುಜನಾ ॥
ರಾದವರು ಭಕುತಿಯಿಂದಾ ಮಹ ಪ್ರಳಯ ।
ವಾದ ತರುವಾಯ ಸೃಷ್ಟಿಯಾಗೇ ೧

ಸುರರೆಲ್ಲ ತಮ್ಮ ತಮ್ಮಾ ಸ್ಥಾನದಲಿ ।
ಸ್ಥಿರರಾಗಿ ಯುವರಾಜ್ಯಕೇ ॥
ಅರುಹನಾರೆನಲು ಅದಕೇ ಪೇಳಿದನು ।
ಹರಿಯು ಇಂತುಪಾಯವ ಕೇಳೀ ೨

ಒಂದು ದೇಹದಿ ಸರ್ವರೂ ಕ್ರಮನುಸಾರ- ।
ದಿಂದ ತೆರಳಿರಿ ಚೇತನಾ ॥
ಕುಂದುವದು ಆವನಿಂದಾ ಅವ ಶ್ರೇಷ್ಠ ।
ನೆಂದರಿವದೆಂದು ಸರಿದಾ ಕೇಳೀ ೩

ಹರಿ ಆಜ್ಞದಂತೆ ತ್ಯಜಿಸೇ । ಕುಂಟನೂ ।
ಕುರುಡ ಮೂಕನು ಯನಿಸಿತೂ ॥
ಹಿರಿಯ ಪವಮಾನ ಬಿಡಲೂ ಎಲ್ಲರೂ ।
ಅರಿತರೂ ಕುಣುಪವೆಂದೂ ಕೇಳೀ ೪

ಮತ್ತೆ ಮೊದಲಂತೆಲ್ಲರೂ ವ್ಯಾಪಿಸಲು ।
ಬಿತ್ತು ಏಳಲಿಲ್ಲವದೂ ॥
ಸತ್ಯ ಸಂಕಲ್ಪ ಮರುತಾ ಸೇರಲದು ।
ತತ್ತಲಿಲ್ಲದೆ ಚಲಿಸಿತೂ ಕೇಳೀ ೫

ಅಂದಿನಾರಭ್ಯವಾಗೀ ತಿಳಿಸಿದನು ।
ಇಂದಿರೇಶನು ಈತನಾ ॥
ವಂದಿಪರಿಗೊಲಿವೆನೆಂದೂ ಇನ್ನಿದಕೆ ।
ಸಂದೇಹ ಉಂಟೆ ಬಂದೂ ಕೇಳಿ ೬

ಸ್ವಾಮಿ ಶ್ರೀ ರಾಮನಾಗೇ ಅವತಾರ ।
ವಾ ಮಾಡಿದನು ಮಾರುತಾ ॥
ಭೂಮಿಜೆಯ ದನುಜ ಒಯ್ಯಲೂ ಆ ಪುರಕೆ ।
ಪ್ರೇಮದಿಂದಲಿ ಜಿಗಿದನು ಕೇಳೀ ೭

ರಾಘವನ ಉಂಗುರವನೂ ವನದೊಳಗೆ ।
ಬ್ಯಾಗೆ ಇಂದಿರಿಗೆ ಕೊಟ್ಟೂ ॥
ಆಗಾ ಪೊಳಲನೇ ಸುಟ್ಟೂ ಹಾರಿ ತ್ವರ ।
ರಾಗಟಿಯ ಒಡಿಯಗಿತ್ತಾ ಕೇಳೀ ೮

ಇಂದ್ರಜಿತು ಮೋಹನಾಸ್ತ್ರ ಬಿಡಲಾಗಿ ।
ಅಂದಗೆಟ್ಟಿತು ಕಪಿ ಕುಲಾ ॥
ಇಂದಿರೇಶನ ಆಜ್ಞದಿಂ ಆಗ ತ್ವರ- ।
ತಂದ ಸಂಜೀವನವನೂ ಕೇಳೀ ೯

ಅನಿಮಿಷರು ಕಪಿಗಳಾಗೀ ನಿರುತ ರಾ- ।
ಮನ ಭಜಿಪರೀ ಕೆಲಸಕೇ ॥
ಅನುಕೂಲರೊಬ್ಬರಲ್ಲಾ ಒಬ್ಬ ಅಂ- ।
ಜನಿ ಸುತನೆ ಸೇವಿ ಮಾಡ್ದಾ ಕೇಳಿ ೧೦

ಉಪಕಾರ ಒಂದಕೆನ್ನಾ ಕೊಟ್ಟ ಮ್ಯಾ- ।
ಲೆ ಪರಿಮಿತ ಸೇವಿಗುಚಿತಾ ॥
ಸು ಪರೀಕ್ಷಿಸಿದರು ಕಾಣೇ ಭಳಿರೆ ಯಂ- ।
ದ ಪರಾಜಿತನು ಮೊಗಳಿದಾ ಕೇಳೀ ೧೧

ಈ ವಾಯು ಒಲಿದನೆಂದೂ ಒಲಿದ ಸು- ।
ಗ್ರೀವ ವಿಭೀಷಣಗೆ ರಘುಜಾ ॥
ಶ್ರೀವರನೆ ಕೃಷ್ಣನಾಗೀ ಅವತರಿಸೆ ।
ಐವರೊಳು ಭೀಮನಾದಾ ಕೇಳೀ ೧೨

ತರಣಿ ಮೊಮ್ಮಗನ ಸೇವೀ ಈ ವೃಕೋ- ।
ದರ ಮಾಳ್ಪನೆಂದು ಶೌರಿ ॥
ನರನ ರಥವನು ನಡಿಸಿದಾ ಇಲ್ಲದಿರೆ ।
ಥರವೆ ಇದು ಪಾಂಡವರಿಗೇ ಕೇಳೀ ೧೩

ಜೀವೇಶರೊಂದೆ ಎಂದೂ ವಾದಿಗಳು ।
ಭಾವಿಸಿರೆ ಮಧ್ವಮುನಿಯೂ ॥
ತಾ ವಿರಚಿಸಿ ಸುಗ್ರಂಥವಾ ನಿರ್ದೋಷ ।
ಗೋವಿಂದನೆಂದರುಹಿದಾ ಕೇಳೀ ೧೪

ಈತ ಮಾಡಿದ ಚರಿತೆಯಾ ಕಡೆಯಾಗಿ ।
ನಾ ತುತಿಸಲಾರೆ ಸ್ವಲ್ಪಾ ॥
ವಾತ ಸ್ಮರಣೆಯ ಮಾಡಲೂ ವೈಕುಂಠ ।
ಆತು ಇಪ್ಪದು ತಪ್ಪದೂ ಕೇಳೀ ೧೫

ದೇಶದೊಳು ತುಂಬಿ ಇಹ್ಯದೂ ಶ್ರೀ ಭಾರ- ।
ತೀಶ ಮಾಡಿದ ಮಹಿಮಿಯೂ ॥
ಲೇಶವಾತನ ಚರಿತ್ರೇ ಸ್ಮರಿಸೆ ಪ್ರಾ- ।
ಣೇಶ ವಿಠ್ಠಲ ಒಲಿವನೂ ಕೇಳೀ ೧೬

ಪ್ರಾಣದೇವರ ಕಥಿಯನು ಕೇಳಿದರೆ ।
ತಾನೆ ಇಹಪರದಿ ಬಿಡದೇ ॥
ಪ್ರಾಣೇಶ ವಿಠಲ ಕಾಯ್ವಾ ಇದಕೆ ಅನು- ।
ಮಾನ ಲೇಸಿನಿತವಿಲ್ಲವೂ ಕೇಳೀ ೧೭

## ೨೨೦

ಪಂಚಭೇದ ತಿಳಿವದು ಪ್ರತಿದಿನದಲೀ ।
ಮುಂಚಿನಜ ಮಧ್ವಮುನಿ ಮತವನುಸರಿಸಿದವರೂ ಪ

ಜೀವೇಶರಿಗೆ ಭೇದ ಜೀವ ಜೀವಕೆ ಭೇದ ।
ದೇವರಿಗು ಜಡಕು, ಜಡಕೆ ಜಡ ಭೇದಾ ॥
ಆವಾಗ ಜೀವರಿಗೆ ಜಡಗಳಿಗೆ ಭೇದುಂಟು ।
ಈ ವಿವರವ ಪೇಳ್ವೆ ಯನ್ನಾಪನಿತು ಕೇಳುವದೂ ೧

ಈಶ ನಿತ್ಯ ಅನಾದಿ ಸ್ವರತ ಸರ್ವಗ ಸ್ವಪ್ರ- ।
ಕಾಶ ಸರ್ವಜ್ಞ ವಿಶ್ವ ವಿಲಕ್ಷಣಾ ॥
ಮೇಶ ಅಪರಿಚ್ಛಿನ್ನ ಮೂರ್ತಿ ಪ್ರಾಣಿಗಳಿಂದ ।
ತಾ ಸಾಕ್ಷಿಯಾಗಿ ಬಹು ಕರ್ಮಗಳ ಮಾಡಿಸುವ ೨

ಶ್ರೀ ಮುಖ ಜಗತ್ಯಕುತ್ಪತ್ತ್ಯಾದಿ ಕಾರಣ ಮ– ।
ಹಾ ಮಹಿಮ ಸರ್ವತಂತ್ರ ಸ್ವತಂತ್ರಾ ॥
ಆಮಯ ವಿದೂರ ಜ್ಞಾನಾನಂದ ಬಲ ಪೂರ್ಣ ।
ಸೀಮೆಯಿಲ್ಲದ ಸುಗುಣ ಕ್ರಿಯಾತ್ಮಕ ಸ್ವರೂಪ ೩

ಸುಖ ದುಃಖ ಭೋಗಿ ಜೀವನು ಅಸ್ವತಂತ್ರ ಬಹು ।
ಕಕುಲಾತಿ ಉಳ್ಳವನು ದುರ್ವಿಷಯದೀ ॥
ಲಕುಮೀಶನಲ್ಲಿ ಭಕ್ತಿ ವಿವರ್ಜಿತನು ಪ್ರತಿ ಕ್ಷ– ।
ಣಕೆ ಅನಂತ ಅಪರಾಧಿ ಜನ್ಮ ಮೃತಿ ಉಳ್ಳವನು ೪

ಆದಿ ವ್ಯಾಧಿಗಳಿಂದ ಪೀಡಿತನು ಅಜ್ಞಾನಿ ।
ಮಾಧವನ ಬಂಧಕ ಶಕುತಿಯೊಳಗಿಹ್ಯಾ ॥
ತಾ ಧರಿಸಿಹನು ಪ್ರಾಕೃತ ಪ್ರಾಕೃತಾವರಣ ।
ಭೇದವೆ ಸಿದ್ಧ ಯಿಂಥ ಜೀವಗೂ ಹರಿಗ್ಯೂ ೫

ಒಂದಲ್ಲ ಸರ್ವ ಜೀವರು ಸತ್ವ ರಜ ತಮರು ।
ಯಂದು ಭೇದಗಳುಂಟವರ ಲಕ್ಷಣಾ ॥
ಮುಂದಿನ ಪದದಿ ಪೇಳ್ವೆ ಸಜ್ಜನರು ಕೇಳಿಯಾ– ।
ನಂದ ಬಡಲೆಂದು ವಿನಯದಲಿ ಬಿನ್ನೈಸುವೆನು ೬

ಭಿನ್ನ ಭಕ್ತರು ಯನಿಪರೆಲ್ಲ ದೇವತಿಗಳ ।
ಚ್ಛಿನ್ನ ಭಕ್ತರು ವಿಧೀರವರ್ಹೆಂಡರೂ ॥
ಚನ್ನಾಗಿ ಮುದದಿ ಈ ನಿರ್ಜರರ ತರತಮ್ಯ ।
ವನ್ನು ಕೇಳಿಕೊಬೇಕು ಜ್ಞಾನಿಗಳ ಮುಖದಿಂದ ೭

ವಿಧಿ ಮೊದಲು ತೃಣ ಜೀವ ಪರಿಯಂತ ಸಾತ್ವಿಕರು ।
ಇದರೊಳಗೆ ದೇವ, ಋಷಿ, ಪಿತೃಪ, ನರರೂ ॥
ಸುಧಿಗೆ ಯೋಗ್ಯ ರಜಾದಿ ಗೀರ್ವಾಣ ಗಂಧರ್ವ ।
ತುದಿಯಾಗಿ ಸಾಂಶರು ನಿರಂಶರುಳಿದವರೆಲ್ಲ ೮

ಇವರಿಂದ ಭಿನ್ನ ರಾಜಸರು ಗೋ ಭೂ ನರಕ ।
ತ್ರಿವಿಧ ಗತಿ ಉಳ್ಳವರು ಪಂಚಭೇದಾ ॥
ವಿವರ ತರತಮ ದೇವರ ಮಹತ್ಮಿಯನು ಅರಿಯ ।
ದವರು ಲಿಂಗಕಳಿಯರು ಧಾಮತ್ರಯ ಪೊಗದವರೂ ೯

ಸಂಸಾರಿಗಳಿಗೆ ಭಿನ್ನರು ತಮೋಗುಣದವರು ।
ಕಂಸಾರಿಯಲಿ ದ್ವೇಷವರ ಸ್ವಭಾವಾ ॥
ಆ ಸುರಾರಿಗಳು ನಾಲ್ಕು ಪ್ರಕಾರ ದೈತ್ಯ ರಾ ।
ಕ್ಷಸರು, ಪಿಶಾಚರವರನುಗರು, ನರಾಧಮರು ೧೦

ಈ ನಾಲ್ಕು ಬಗೆಯ ಸುರರಿಗೆ ಅರಸು ಕಲಿಯವನಾ ।
ಹೀನತನವೆಷ್ಟುಚ್ಚರಿಸಲಿ ಮಿಥ್ಯಾ ॥
ಜ್ಞಾನಿ ಭೇದವನರಿಯ ಪಂಚ ಮಹಾಪಾತಕಿ ಪು- ।
ರಾಣ ವೇದಗಳಿಗೆ ವಿರುದ್ಧಾರ್ಥ ಕಲ್ಪಿಸುವಾ ೧೧

ಸುಜನರಾಚರಣೆ ನಡಿಯಗುಡ ದುಃಖ ಬಡಿಸುವ ।
ಕುಜನರಿಗನೇಕ ಬಗೆ ಸಹಯವಹನೂ ॥
ಪ್ರಜಗಳನ ರೋಗನಾ ವೃಷ್ಟಿಯಿಂ ದಣಿಸುವನು ।
ವೃಜನವನ ವಪು ತಾಯಿ ತಂಗಿಯಂಬರನರಿಯ ೧೨

ಬವರ ಬಂಗಾರ ದ್ಯೂತಾ ಪೇಯ ಅನೃತ ನಟ ।
ಯುವತಿಯೀಯಾರು ಸ್ಥಳ ನಿಲಯವವರಿಗೆ ॥
ನವವಿಧ ದ್ವೇಷಿಗಳಿಗಾಕಾರನೆನಿಸುವನು ।
ಅವನ ಸಮ ಪಾಪಿಗಳು ಮೂರು ಲೋಕದಲಿಲ್ಲ ೧೩

ಆ ನೀಚನ ಮಲಮೂತ್ರ ವಿಸರ್ಜನದಿ ಘೋರ ।
ಕಾನನದಿ ಕತ್ತಲಿಯೊಳಗೆ ಸ್ಮರಿಪುದೂ ॥
ಕ್ಷೋಣಿಯೊಳವನ ನಿಂದೆ ನಿರುತದಲಿ ಮಾಡುವದೆ ।
ಶ್ರೀನಾಥನರ್ಚನೆ ಮಹಾಯಜ್ಞವೆನಿಸುವದು ೧೪

ಈ ವಿಧದಿ ಮೂರು ಗುಣದಿಂದ ಪರಸ್ಪರ ಜೀವ ।
ಜೀವರಿಗೆ ಭೇದ ಯೋಗ್ಯತಿ ಪ್ರಕಾರಾ ॥
ಮೂವರಿಗೆ ಪಾಪಮಿಶ್ರಿತ ಕರ್ಮ ಪುಣ್ಯ ಬಹು ।
ನೋವು ಸ್ವರ್ಗ ನರಕ ಸುಮೋಕ್ಷಾದಿ ಗತಿ ಉಂಟು ೧೫

ಈ ಜೀವರಿಗೆ ಉಳ್ಳನುಭವ ಜಡಗಳಿಗಿಲ್ಲ ।
ನೈಜವಾಯಿತು ಭೇದ ಜೀವ ಜಡಕೇ ॥
ಆ ಜಡ ತ್ರಿ, ನಿತ್ಯಾ ಅನಿತ್ಯನಿತ್ಯಾ, ನಿತ್ಯ ।
ಮಾಜದವು ಅವ್ಯಾಕೃತ ನಭಶೃತಿ ವರ್ಣಗಳೂ ೧೬



ಪ್ರಾಕೃತ ವಿಕೃತ ವೈಕೃತತ್ರಯ ಅಸ್ಥಿರ ಜಡವು ।
ಪ್ರಾಕೃತಪಜಾಂಡ ಧೊರ ಆವರಣವೂ ॥
ಸ್ವೀಕೃತ್ಯೈವತ್ತು ಕೋಟ್ಯೋಜನ ಸುವರ್ಣಾತ್ಮ ।
ಕಾಕ್ರಮಿಸಿಹದಜಾಂಡಕಿದು ವಿಕೃತ ಜಡವೆಂದು ೧೭

ಸಪ್ತಋಷಿ ಭವಾಂಡದೊಳಿಹ ನೆಲ ಜಲಧಿ ಗಿರಿಗಳು ।
ಎರಡೇಳು ಭುವನ ವೈಕೃತ ಜಡವಿದೂ ॥
ಸ್ಥಿರ ಅಸ್ಥಿರ ಜಡತ್ರಯ ವಿಧ ಪುರಾಣಗಳರ್ಥ ।
ಇರುತಿಹವು ಅಚಲಾಗಿ ಶಬ್ದಗಳ ನಿತ್ಯಾ ೧೮

ಮೂಲ ಪ್ರಕೃತಿಗತ ತ್ರಿವಿಧಾನಂತ ಪರಮಾಣು ।
ಜಾಲ ಕಾರಣತ ಸುಸ್ಥಿರವೆನಿಪವೂ ॥
ಮ್ಯಾಲೆ ಅದರಿಂದಾದ ತತ್ವಗಳ ನಿತ್ಯ ಮಹ ।
ಕಾಲವೆಂದಿಗ್ಯು ನಿತ್ಯ ಅಣುಕಾಲಗಳ ನಿತ್ಯಾ ೧೯

ಹೀಗೆ ಮೂರು ವಿಧ ಜಡ ಒಂದ್ದೊಂದೆ ಮೂರು ಮೂ- ।
ರಾಗಿರಲು ಜಡ ಜಡಕೆ ಭೇದ ಸಿದ್ಧಾ ॥
ಭಾಗಾರ ಮಾಡಿ ಗುಣರೂಪ ತ್ರಯದಿ ನೋಡೆ ।
ನಾಗಾರಿವಹಗೆ ಜಡಗಳಿಗೆ ಭೇದವೇ ಸತ್ಯಾ ೨೦

ಈ ಕಮಲಜಾಂಡವು ಅನಿತ್ಯವಿದರೊಳಗೆ ಎಂ- ।
ದೂ ಕೆಡದೆ ಸುಖಕಾಂತಿ ಯುಕ್ತವಾದಾ ॥
ಶ್ರೀಕಳತ್ರನ ತ್ರಿಧಾಮಗಳು ಕುಕಲಿಗೆ ತಕ್ಕ ।
ಶೋಕಪೂರಿತವಾದ ನಿತ್ಯ ನರಕಗಳಿಹವು ೨೧

ಈ ಪಂಚಭೇದ ಜ್ಞಾನಿಲ್ಲದವ ಶ್ರೀ ಮುದ್ರಿ ।
ಗೋಪಿಚಂದನ ಧರಿಸಿದರು ಫಲವೇನೂ ॥
ಈ ಪೊಡವಿಯೊಳು ವೇಷಧಾರಿಗಳು ಜೀವಿಸರೆ ।
ಆ ಪರಿಯ ಭಾಸ ವೈಷ್ಣವನೆಂದರಿಯಬೇಕೂ ೨೨

ಹರಿಗುರುಗಳ ದಯ ಪಡೆವರಿಗೆ ರುಚಿ ತೋರ್ವದಿತ ।
ರರಿಗೆ ಈ ಕೃತಿಯು ಕರ್ಣ ಕಠೋರವೂ ॥
ತರಣಿ ಬರೆ ಸರ್ವರಿಗೆ ಘೂಕಗಾದಂತೆ ಇದು ।
ಬರಿಯ ಮಾತಲ್ಲ ಶಾಸ್ತ್ರಕೆ ಸಮ್ಮತಾಗಿಹದು ೨೩

ಹೀನರೊಳು ಬೆರಿಯದಲೆ ಪಂಚಭೇದವ ತಿಳಿದು ।
ಸಾನುರಾಗದಲಿ ಹರಿ ಸರ್ವೋತ್ತುಮಾ ॥
ಪ್ರಾಣದೇವರೆ ಗುರುಗಳೆಂದರಿತು ಭಜಿಸುವರು ।
ಕಾಣರು ಕು ಸಂಸಾರ ಧಾಮತ್ರ ವೈದುವರು ೨೪

ಇಪ್ಪತ್ತೈದು ಪದಗಳಿಂದ ಸಂಗತಿಯಾಗಿ ।
ಒಪ್ಪುತಿಹ ಈ ಪಂಚಭೇದವನ್ನೂ ॥
ತಪ್ಪದಲೆ ನಿತ್ಯ ಪಠಿಸುವರ ಪೊರವವನು ಬೊಮ್ಮ- ।
ನಪ್ಪ ಶ್ರೀ ಪ್ರಾಣೇಶ ವಿಠಲನಿಹಪರದಲ್ಲಿ ೨೫

## ೨೨೧

# ಮಾನಸ ಪೂಜಾಕ್ರಮ

ಹೃದಯ ಮಂದಿರ ವಿವರ ಈ ಪರಿಯಲಿಂ ತಿಳಿದು ।
ಮಧುವೈರಿ ಪೂಜಿ ಮಾಳ್ಪುದು ಸುಜನರೂ ಪ

ಉದಯದಲಿ ಮೂರು ಬಾಗಿಲು, ಪ್ರಥಮದಲಿ ರಮಾ ।
ಅದರ ತರುವಾಯ ರವಿನಾಮ ಪ್ರಾಣಾ ॥
ಪದುಮಾಕ್ಷಿ ಭಾರತಿ ದ್ಯುನಾಮದಿಂದಿಹಳಲ್ಲಿ ।
ತುದಿಯ ಬಾಗಿಲಿಗೆ, ಜಯ ವಿಜಯರೂ ೧

ಯಮದಿಸಿಗೆ ಮೂರು ಕದ ಮೊದಲು ಶ್ರೀ ಎರಡರೊಳು ।
ತಿಮಿಪಾಖ್ಯ ವ್ಯಾನದಿಜಾನ್ನಾಂ ಭಾರತೀ ॥
ಅಮಲ ಬಲ ಪ್ರಬಲ ಮೂರನೇ ದ್ವಾರಕಿಹರು ಪ- ।
ಶ್ಚಿಮ ದ್ವಾರ ಮೂರರೊಳಿಹರ ಪೇಳ್ವೇ ೨

ಪ್ರಥಮಮಾ ದ್ವಿತಿಯದಲಿ ಶಿಖಿನಾಮಕ ಪಾನ ।
ಪೃಥಿವಿ ನಾಮಕೆ ಭಾರತೀ ಕುಮುದರೂ ॥
ತೃತಿಯದಲ್ಲಿಹ್ಯರುತ್ತರಕೆ ಮೂರು ದ್ವಾರಗಳು ।
ಸತತಲ್ಲಿ ನೆಲಸಿಹರ ಪೆಸರು ಕೇಳೀ ೩

ಒಂದರೊಳು ಶ್ರೀ ದ್ವಿತಿಯ ಸುರಪ ನಾಮ ಸಮಾನ ।
ಇಂದುಮುಖಿ ಭಾರತಿಯು ವಿದ್ಯುನ್ನಾಮ್ನೀ ॥
ನಂದನು ಸುನಂದ ಮೂರನೇ ಬಾಗಿಲಲ್ಲಿಹರು ।
ಬಂದು ಕದ ಮೇಲೂ ಭಾಗದಲೀಹದೂ ೪

ಅಲ್ಲಿ ಆಕಾಶ ನಾಮಕಳು ಲಕ್ಷ್ಮೀ ಉದಾನ ।
ಚಲ್ವಿ ಭಾರತಿಯು ವಾಙ್ ನಾಮದಲಿಹಳೂ ॥

ಮಲ್ಲರಿಪು ಅಷ್ಟಪತ್ರದೊಳಗೆ ದ್ವಿಷಡ್ರೂಪ ।
ದಲ್ಲಿಹ್ಯ ವಿವರ ಕೇಳಿ ಆದರದಲೀ ೫

ಎರಡೆರಡು ದಿಕ್ಕಿನಲಿ ಒಂದೊಂದ್ವಿ ದಿಕ್ಕಿನಲಿ ।
ಎರಡ್ಯೆದು ಒಂದು ಸ್ತ್ರೀ ಒಂದು ಪುರುಷಾ ॥
ಪರಮ ಪಾವನವಾದ ಈ ಹನ್ನೆರಡು ರೂಪ ।
ಗುರು ಮಧ್ವ ಮುನಿರಾಯರೊರಣಿಸಿಹರೂ ೬

ಮನಕಂಜ ಮೂಲದಲಿ ದುರ್ಗ ಭೂ ಮಧ್ಯದಲಿ ।
ಕೊನಿ ನಳ ಶ್ರೀ ಭಾಗ ಭೇದಗಳಿವೂ ॥
ಮನುಜನಂಗುಟ ಮಿತಿ ತುದಿಯಲಿ ಹರಿಯಗ್ರೇಶ ।
ನೆನಿಸಿ ಜೀವರಿಗೆ ಸುಷುಪ್ತಿಯನೀವನೂ ೭

ತಾವರಿಯ ಮಧ್ಯದಲಿ ಇಹನಷ್ಟ ಪ್ರಾದೇಶ ।
ಆವಾಗ ದೇಹಿಗಾಧಾರ ಪುರುಷಾ ॥
ಭಾವಿಸುವದಿನಿತೆ ಮಿತೆ ಮೂಲೇಶ ಈತಗೇ ।
ಕೋವಿದರು ವಿಜ್ಞಾನವಪು ಎಂಬರೂ ೮

ಮೂಲೇಶನಂಘ್ರಿ ಆಶ್ರಯಿಸಿ ಮುಖ್ಯ ಪ್ರಾಣ ।
ವಾಲಗವ ಮಾಳ್ಪ ಕೈಮುಗಿದು ನಿರುತಾ ॥
ಕಾಳೀಶನಂತರ್ಗತನು ವಿಷ್ಣುವಿಗೆ ನಾಮ ।
ಲಾಳೂಕ ವೈಕುಂಠ ಶೆನಕೇಂದ್ರಾ ೯

ಹಂಸ ಸೋಹಂ ಸ್ವಹಾ ಎಂಬ ಜಪ ಸರ್ವರೊಳು ।
ಶ್ವಾಸರೂಪದಿ ಮಾಳ್ಪ ಇದನು ತಿಳಿದೂ ॥
ಶ್ರೀಶಗರ್ಪಿಸಿದವನೆ ಜ್ಞಾನಿ ಎಂದಿಗ್ಯು ಬಂಧ ।
ಪಾಶದೊಳು ಶಿಲ್ಕ ಲಾಲಿಪುದು ಬುಧರೂ ೧೦

ಈ ವಾಯುದೇವನಡಿ ಆಶ್ರೈಸಿ ಸರ್ವದಾ ।
ಜೀವನಿಹ ಅವನಿರವು ಎಂತು ಕೇಳೀ ॥

ಆವ ಕೇಶ ಸಹಸ್ರ ಭಾಗದೊಳು ಒಂದಂಶ ।
ದೀ ಒಪ್ಪುವನು ಸರ್ವವಯವಗಳಿಂದ ೧೧

ವಾಸುದೇವನೆ ಹರಿಗೆ ಶಿರವೆನಿಪನಾ ಶಿರವು ।
ಈ ಶರೀರಗೆ ಶಿರವು ನಾರಾಯಣಾ ॥
ಭಾಸಿಸುವ ಮಧ್ಯ ಮಧ್ಯದೊಳಿಹದು ಪ್ರದ್ಯುಮ್ನ ।
ಶ್ರೀಶನಾ ಬಲ ಭಾಗ ಬಲದೊಳಿಹದೂ ೧೨

ವಾಮ ಹರಿಗನಿರುದ್ಧ ಜೀವನೆಡದಲ್ಲಿಹದು ।
ಸ್ವಾಮಿ ಪದ ಸಂಕರಷಣಿದರೊಳಿಹದೂ ॥
ರಾಮವಾಗೇಂದ್ರಿ ದೇವಗೆ ವಾಗ್ದೊಳಿಹ ನೃಹರಿ ।
ಶ್ರೀ ಮನೋರಮಗೆ ಪ್ರಾಣ ಜೀವ ಪ್ರಾಣಾ ೧೩

ಹರಿನೇತ್ರ ಕಪಿಲಜೀವನ ಕಣ್ಣಿನಲಿಹ ವಿ- ।
ವರ ತಿಳಿವದೀ ಜೀವನಂಗಧವಣೀ ॥
ವರ ರಮ್ಯವಾದ ಜೀವನ ಹೃತ್ಕಮಲ ಶ್ವೇತ ।
ವರಣಷ್ಟ ಪತ್ರ ಉಳ್ಳದು ತಿಳಿವದೂ ೧೪

ಅಲ್ಲಿದ್ದ ಹರಿಗಾತ್ಮ ಜೀವ ಹೃದಯಂಬುವರು
ಬಲ್ಲವರು ಸ್ಥೂಲಾಂಗ ಹೃತ್ಸರಸಿಜಾ ॥
ದಲ್ಲೆಷ್ಟದಳ ಮಧ್ಯ ರತ್ನಮೌಕ್ತಿಕ ಕಾಂತಿ ।
ಯಲ್ಲಿಹದು ಹೇಮಮಂಟಪಮಾತ್ಮಕಾ ೧೫

ಆ ಮಂಟಪದಲಿ ಹನ್ನೆರಡು ಮೂಲ್ಯುಳ್ಳ ಭಾ- ।
ನೂ ಮಂಡಲದಲಿ ಬಡುವಾಗೀಹದೂ ॥
ಸೋಮ ಮಂಡಲದಲಿ ತ್ರಿಕೋಣಾಗ್ನಿ ಮಂಡಲದಿ ।
ಭೂಮಿಧರ ಶೇಷ ಪರಿಯಂಕದಲ್ಲೀ ೧೬

ಮುತ್ತು ರತ್ನಗಳಿಂದ ದಟಿತವಾದಾಸನ ವಿ- ।
ಚಿತ್ರ ರತ್ನಖಚಿತದ ಉಪಬರ್ಹಣಾ ॥

ಉತ್ತುಮಶಿತ ದ್ವೀಪಗತ ವಿಷ್ಣು ಅಲ್ಲಿಹನು ।
ನಿತ್ಯ ಪರಮಾತ್ಮನೆಂಬರು ಆತಗೇ ೧೭

ಬಿಂಬನಾಮನ ರೂಪವೇನು ವರ್ಣಿಪೆನುದಿತ ।
ಅಂಬುಜಾಪ್ತಾಭ ಚಿತ್ತ್ ಸುಖವಿಗ್ರಹಾ ॥
ಕಂಬುರ ವಿಗದ ಕಂಜಶಿರಿ ಧರಣಿ ಸಹಿತ ಹೇ ।
ಮಾಂಬರದಿ ವಡ್ಯಾಣದಿಂದೊಪ್ಪುವಾ ೧೮

ಕಟಿ ಪ್ರದೇಶನು ಗುಂಭನಾಭಿ ಕೌಸ್ತುಭ ವಕ್ಷ ।
ಪಟುತರ ಭುಜದಿ ಭೂಷಣದಲೊಪ್ಪುವಾ ॥
ದಟಿತ ರತ್ನದ ಮುಕುಟ ನೀಲಾಳಕನು ಬ್ರಹ್ಮ ।
ನಿಟಿಲಾಕ್ಷ ಮುಖ ಸೈನ್ಯ ಶೃತಿ ಭೂಷಣಾ ೧೯

ಪವಳ ಮೌಕ್ತಿಕ ರತ್ನಹಾರ ಅರವಿಂದಾಕ್ಷ ।
ಸುವಿಶಾಲ ಹೃದಯ ಮಂದಸ್ಮಿತ ಮುಖಾ- ॥
ಸುವರಣ್ಣ ಕಡೆಯನೂ ಪುರಗೆಜ್ಜೆಯುಕ್ತ ಪದ ।
ದಿ ವಿಷತ್ಪತಿಯ ಪೊಗಳಲಾಶಕ್ತನೇ ೨೦

ಸ್ಥಾನತ್ರಯದೊಳಿದ್ದ ಹೃತ್ಪದ್ಮದೊಳಗಿದ್ದ ।
ನಾನಾ ಜೀವ ಜಡರೊಳ ಹೊರಗಿರುತಿಹ್ಯಾ ॥
ಶ್ರೀನಿವಾಸನ ರೂಪಕತ್ಯಂತ ಐಕ್ಯವನು ।
ಸಾನುರಾಗದಲಿ ಚಿಂತಿಪುದೆ ಪೂಜೀ ೨೧

ಧನರೂಪ ಬಲಯುಕ್ತನಾದ ಕಾಲಕು ತನ್ನ ।
ತನಯ ಪಂಡಿತನಾಗದೆಂತಸಹ್ಯಾ ॥
ಜನಕಗಾಗುವಧಾಂಗೆ ಬಾಹ್ಯ ವಸ್ತುಗಳಿಂದ ।
ಘನ ಪೂಜಿಸಿದರು ಶ್ರೀನಾಥ ಮೆಚ್ಚಾ ೨೨

ತನ್ನ ಮನಿಯೊಳಗಿನ ವಿಚಾರವನು ಬಿಟ್ಟು ಮ- ।
ತ್ತನ್ಯರಪರಾಧವೆಣಿಸುವನ ತೆರದೀ ॥

ಚೆನ್ನಾಗಿ ಈ ಮರ್ಮ ತಿಳಕೊಳ್ಳದೆ ಬಲ್ಲೆನೆಂ– ।
ದಿನ್ನೊಂದು ಪ್ರಶ್ನ ಮಾಡುವನೆ ಮೂರ್ಖಾ ೧೩

ಹದಿಮೂರು ದ್ವಾರಷ್ಟ, ಪತ್ರಧೋಮುಖವಾದ ।
ಹೃದಯದ ವಿಚಾರಗಣಿತೆನ್ನ ಮತಿಗೇ ॥
ಒದಗಿದಷ್ಟೇಳಿಹೆನು ತುಷ್ಟನಾಗನೆ ಶ್ರೀಶ ।
ವಿದುರಿತ್ತಿ ಪಾಲಿಗೊಲಿದವನಲ್ಲವೇ ೧೪

ಹೃದಯ ಜೀವನ ಶರೀರಹಂಕಾರ ಅಂತರಾತ್ಮ ।
ಮೊದಲು ಹರಿನಾಮ ಜೀವನೊಳು ತಿಳಿದೂ ॥
ಮದನನೈಯನ ಪೂಜಿ ಮನದಲ್ಲಿ ಮಾಡಲು ಬಿ– ।
ಡದೆ ಕಾಯ್ವ ಇಹಪರದಿ ಕರುಣಸಾಂದ್ರಾ ೧೫

ಏನು ಕೊಟ್ಟರು ಒಲ್ಲ ಈ ವಿಚಾರಕೆ ಪ್ರೀಯ ।
ಧೇನುವಂದದಲೀವ ಬೇಡಿದಿಷ್ಟಾ ॥
ನಾನರಿಯೆನಿದನಪದ್ಧವ ಕ್ಷಮಿಸುವರು ಬುಧರು ।
ಶ್ರೀನಾಥ ನುಡಿಸಿದಂದದಿ ಪೇಳಿಹೇ ೧೬

ಶಬರಿ ಗಾಗೇಯ ಕಾಳಿಂಗ ಶಿಶುಪಾಲ ಭೃಗು ।
ಅಬುಜ ಪ್ರಥಮಾಂಗ ಅಜಮಿಳ ತಾರಾ ॥
ವಿಬುಧೇಶ ಪ್ರಮುಖರಪರಾಧ ಕ್ಷಮಿಸಿದ ಕೃಪಾ ।
ಅಬುಧಿ ಯನ್ನಯ ಅಪದ್ಧಗಳೆಣಿಸೋನೇ ೧೭

ಸೂಜಿಯಿಂ ರಣ ಜೈಸಿದಂತೆ ಯನ್ನೀ ಮತಿಗೆ ।
ರಾಜೀವ ನಯನೊಲಿದು ಪೇಳಿಸಿದನೇ ॥
ಶ್ರೀ ಜಗನ್ನಾಥರಾಯರ ದಾಸರವನೆಂದು ।
ಸೋಜಿಗವ ಮಾಡ್ದ ಪ್ರಾಣೇಶ ವಿಠಲಾ ೧೮

ಮಂಗಳಂ ಶಫರ ಕೂರ್ಮ ಕಿಟ ನೃಹರಿ ವಟುರಾಮ ।
ಮಂಗಳ ಧರಿಜ ರಮಣ ಕೃಷ್ಣ ಬುದ್ಧಾ ॥

ಮಂಗಳ ಹಯವಹನ ಅನಂತ ಸುಗುಣಾರ್ಣವಗೆ ।
ಮಂಗಳಂ ಪ್ರಾಣೇಶ ವಿಠ್ಠಲನಿಗೇ ೨೯

## ೨೨೨

ನರಜನ್ಮ ಬಂದುದಕೆ ಇಪ್ಪತ್ತು ಆರು ಕಳೆ ।
ವರದೊಳಿಹ ಹರಿರೂಪ ಚಿಂತಿಸುವದೂ ಪ

ಎರಡನಂತದ ಮ್ಯಾಲೆ ಒಂಬತ್ತಧಿಕ ನೂರು ।
ಸ್ವರುಪದೊಳಗಿಹವು ಆಮ್ಯಾಲೆ ಇಚ್ಚಾ ॥
ವರಣದಲಿ ಒಂದು ಲಿಂಗದಲಿ ಆರೊಂದಧಿಕ ।
ಅರುವತ್ತು ರೂಪಗಳು ಉಂಟು ಕೇಳೀ ೧

ಎಪ್ಪತ್ತರೊಂಬತ್ತಧಿಕ ನೂರು ಅವ್ಯಕ್ತ– ।
ಕಿಪ್ಪವು ಅವಿದ್ಯದೊಳು ಯೇಳು ಅಧಿಕಾ ॥
ಇಪ್ಪತ್ತು ಕರ್ಮ ಕಾಮಾವರಣದಲಿ ಮೂರು ।
ಇಪ್ಪತ್ತು ಮೂರು ಅರುವತ್ತು ಎಂಟೂ ೨

ಮಾರಮಣ ಜೀವ ಪರಮಾಚ್ಛಾದಿಕೆರಡರೊಳು ।
ಬ್ಯಾರೆ ಬ್ಯಾರಿಪ್ಪ ಒಂಬತ್ತು ರೂಪಾ ॥
ನಾರಾಯಣಾದಿ ಐದರೊಳಗೊಂದೊಂದೇವೆ ।
ತೋರುತಿಹವಜಪಿತನ ವಿಮಲ ಮೂರ್ತೀ ೩

ಎರಡು ಲಕ್ಷೆರಡು ಸಾವಿರದ ನಾನೂರು ಈ– ।
ರೆರಡಧಿಕ ತೊಂಬತ್ತು ಅನಿರುದ್ಧದೀ ॥
ಮೆರವ ಶ್ರೀ ವಾಸುದೇವ ನಾರಾಯಣ ಕವಚದಿ ।
ಇರುವ ಒಂದೊಂದು ಆನಂದಮಯದೀ ೪

ಇನ್ನು ವಿಜ್ಞಾನ ಮನವಾಙ್ ಶ್ರೋತ್ರ ಚಕ್ಷು ಪ್ರಾ- ।
ಣನ್ನಮಯ ಹೀಗೆ ಯೇಳೊಂದರೊಳಗೇ ॥
ವನ್ನಜಾಕ್ಷನ ರೂಪ ಒಂದೊಂದೆ ಇಹವೆಂದು ।
ಚೆನ್ನಾಗಿ ಭಕ್ತಿಪೂರ್ವಕ ತಿಳಿವದೂ ೫

ಸ್ಥೂಲವಾದಂಗದಲಿ ಮೂವತ್ತೆರಡು ಕೋಟಿ ।
ಯೇಳೂ ಲಕ್ಷದ ಮೇಲೆ ರಮ್ಯವಾಗೀ ॥
ಶ್ರೀಲೋಲ ತೊಂಬತ್ತು ಮೂರು ಸಾವಿರದ ಹದಿ- ।
ನೇಳಧಿಕ ಎಂಟು ಶತರೂಪದಲಿಹಾ ೬

ಈರನಂತ ಮೂವತ್ತೆರಡು ಕೋಟಿ ನವಲಕ್ಷ ।
ಆರಧಿಕ ತೊಂಬತ್ತು ಸಾವಿರೆಂಟೂ ॥
ನೂರು ಐವತ್ತೆಂಟು ರೂಪಗಳು ಸ್ತಂಭಾದಿ ।
ವಾರಿಜ ಭವಾಂತ ದೇಹಗಳೊಳೀಹವೂ ೭

ಮೋದತೀರ್ಥರ ಮತವ ಪೊಂದಿದವರೀ ರೂಪ ।
ಸಾದರದಿ ಚಿಂತಿಸುವದೇ ಮೋಕ್ಷಕೇ ॥
ಸಾಧನವಿದು ಸಾತ್ವಿಕರಿಗಲ್ಲದಲೆ ಅನ್ಯ- ।
ವಾದಿಗಳಿಗುಪದೇಶ ಮಾಡಸಲ್ಲಾ ೮

ಪ್ರಾಣೇಶ ವಿಠ್ಠಲನ ಸುಮೂರ್ತಿ ಈ ಪರಿಯಿಂದ ।
ಧ್ಯಾನಕ್ಕೆ ತಂದು ಹಿಗ್ಗದಲೆ ಬರಿದೇ ॥
ಏನು ಓದಿದರು ಕೇಳಿದರು ತಪ ಮಾಡಿದರು ।
ಆನಿ ತಿಂದಕಪಿತ್ಥದಂತೆರಿವದೂ ೯

## ೨೨೩

ಸಜ್ಜನರ ನಡತಿದೊ ಶ್ರೀ ।
ಅರ್ಜುನ ಸಖನ ಪದಾಬ್ಜ ಭಜಿಸುವದೆ ಪ

ಕುಹಕರ ಸಂಗವ ಮಾಡದೆ ಖೇಚರ ।
ವಹನನಾಳುಗಳ ಆಳಾಗೀ ॥
ಅಹರ್ನಿಶಿಯಲಿ ತತ್ವ ವಿಚಾರಿಸುತಲಿ ।
ಅಹಲ್ಲಾದವ ಮನದಲಿ ಬಿಡುತಿಪ್ಪುದೆ ೧

ನೀಚ ಸುರ ನರರ ಸೇವಿಸಿ ವರಶನ ।
ಯಾಚಿಸದೆ ಸ್ವಧರ್ಮವ ಬಿಡದೇ ॥
ಖೇಚರಜ ಮತವ ಪೊಂದಿಸು ಕರ್ಮಗ- ।
ಳಾಚರಿಸುತ ವಿಜ್ಞಾನ ಘಳಿಸುವದೆ ೨

ಪದ್ಮಜಮುಖರಿಗೆ ಕ್ಷಣ ಕ್ಷಣದಲಿ ಶಿರಿ ।
ಬುದ್ಧಿಯ ಪ್ರೇರಿಸುವಳು ಆರೇ ॥
ಪ್ರದ್ಯುಮ್ನನು ಮಾಡುವ ಲೀಲಿಯು ಬಳಿ ।
ಇದ್ದರು ಒಂದನು ಅರಿಯಳು ಎಂಬುದೆ ೩

ತತ್ವಭಿಮಾನಿಗಳೆಲ್ಲ ಸಮೀರ ಪ್ರ- ।
ವರ್ತಿಸಿದಂದದಿ ವರ್ತಿಪರೂ ॥
ಸತ್ಯವತಿ ಜಗತೊಬ್ಬನೆ ಅಚ್ಛಿನ್ ।
ಭೃತ್ಯ ಶಿವಾದ್ಯರು ಭಿನ್ನರು ಎಂಬುದೆ ೪

ಮೂಲದಲಿದ್ದ ಮಹತ್ಮಿ ನಿರುತ ಶ್ರೀ ।
ಲೋಲನ ಅವತಾರದೋಳುಂಟೂ ॥
ಕಾಳೀಶಗೆ ಕೊಂಡರೆ ಬರುತಿಪ್ಪುದು ।
ನೀಲಕಂಠ ಪ್ರಮುಖರಿಗಿಲ್ಲೆಂಬುದೆ ೫

ಚೇತನಚೇತನವಾದ ಜಗತ್ಯವು ।
ವಾತನಧೀನದೊಳಿರುತಿಹದೂ ॥
ಆತನು ರಮೆಯಧೀನವಳು ಹರಿ ।
ದೂತಳೆಂದು ನಿಶ್ಚಯ ತಿಳಕೊಂಬುದೆ ೬

ಎಲ್ಲ ದಿವಿಜರವಲಕ್ಷಣ ಯುಕ್ತರು ।
ಬಲ್ಲಿದ ಹರಿ ಮಾರುತ ಮಾತ್ರಾ ॥
ಸಲ್ಲಕ್ಷಣರೆನುತಲಿ ತಿಳಿದು ಗಿರಿಜ ।
ವಲ್ಲಭ ಪ್ರಮುಖರಿಗೊಂದಿಸುತಿಪ್ಪುದೆ ೭

ಅಂಬುಜಭವ ಮೊದಲಾದವರಿಗೆ ಪೀ- ।
ತಾಂಬರತನ ಪೆಸರಿತ್ಯಹನೂ ॥
ಕಂಬಸದನ ತೊಲಿ ಜಂತಿಯು ಮಾಳಿಗಿ ।
ಎಂಬ ಶಬ್ದವಾಚ್ಯನು ಹರಿ ಎಂಬುದೆ ೮

ಅರಸುಗಳಾದವರನುಗರ ಕೈಯಲಿ ।
ನರರ ಶೀಕ್ಷಿ ಮಾಡಿಸುವಂತೇ ॥
ಹರಿ ವಿಧಿ ಶಿವರೊಳು ತಾನಿಂತಾವಾಗ ।
ಮರಿಯಾದಿಗಳು ನಡಿಸುತಿಹ್ಯನೆಂಬುದೆ ೯

ಸೃಜಿಸುವ ಜನೊಳಿದ್ದು ಜಗವ ಪೊರವನು ।
ಭುಜಗ ಭೂಷಣನೊಳಿದ್ದು ಲಯಾ ॥
ದ್ವಿಜ ರೂಪಿಯೆ ಮಾಳ್ಪನು ಎಂತಿಳಿಯದ ।
ಕುಜನರು ನರಕವ ಐದುವರೆಂಬುದೆ ೧೦

ವಂದೊಂಧರಿ ನೇಮದಿ ಬಲ್ಲರು ಮರ ।
ಳೊಂದನರಿಯರಜಾದಿಗಳೂ ॥
ಮಂದರಧರ ಬಹು ಬಲ್ಲನು ಜೀವರ ।
ಬಂಧಕ ಶಕುತಿಯೊಳಿರಿಸಿಹನೆಂಬುದೆ ೧೧

ಜ್ಞಾನಾನಂದಾದಿ ಗುಣಭರಿತ ಹರಿ ।
ಹೀನತನವನೆಂದಿಗ್ಯು ಅರಿಯಾ ॥
ಕಾಣಿಸಿಕೊಳ್ಳನು ಎಂದಿಗು ಅಧಮರಿ- ।
ಗೇ ನಳಿನಾಕ್ಷನು ಎಂದುಚ್ಚರಿಪುದೆ ೧೨

ಝಷ ಮೊದಲಾದವತಾರವು ಮಿಥುನೀ ।
ದೆಶೆಯಿಂದಲಿ ಆಗಿಲ್ಲನಳಾ ॥
ಮಸಿಯಲು ಕಾಷ್ಠದಿ ತಾ ತೋರ್ವಂದದಿ ।
ವಸುದೇವಜನವ್ಯಕ್ತನು ಯಂದರಿವದೆ ೧೩

ಆಪಗ ವನಧಿಯನಳನಿಳ ಶಶಿ ರವಿ ।
ಈ ಪೊಡವೀ ವನ ನಿರಂತರದೀ ॥
ಶ್ರೀ ಪತಿ ಕಟ್ಟಲಿಯೊಳಗಿಹದೆಂದು ಪ- ।
ದೆ ಪದೆ ನೆನದು ಸುಖಬಡುತಲಿರುವುದೆ ೧೪

ನಿಶಿಯಲಿ ಕಂಡಿಹ ಸ್ವಪ್ನವು ನಿಶ್ಚಯ ।
ಅಸಮ ಸೃಜಿಸಿದ ಜಗತ್ಯವನೂ ॥
ಹುಸಿ ಎಂಬವ ಕುಲಭ್ರಷ್ಟನು ಎಂದಿಗು ।
ಹಸಗತಿ ಅವನಿಗೆ ಇಲ್ಲಿಲ್ಲೆಂಬುದೆ ೧೫

ಪ್ರಾಣಿಗಳೊಳಗಿದ್ದೆಲ್ಲ ಕೆಲಸವನು ।
ತಾನೆ ಮಾಡಿ ಮಾಡಿಸಿ ಫಲವಾ ॥
ಏನು ನೋಡೆ ನಿರ್ಮಲನಾಗಿಹ ಹರಿ ।
ಭಾನುಸಖ ಜಲದೊಳಿರುವಂತೆಂಬುದೆ ೧೬

ತಾ ಬಂಧಿಸುತಿಹ ಸರ್ವ ಜಗತ್ಯವ ।
ನೂ ಬದ್ಧನು ಅಲ್ಲವು ಊರ್ಣಾ ॥
ನಾಭಿಯ ಜಾಲಿಯ ಹೊರಗಿರುವಂದದಿ ।
ಶ್ರೀ ಭಗವಂತನು ಇರುತಿಹನೆಂಬುದೆ ೧೭

ಭಕ್ತಿಗೆ ಭೇದವು ಜ್ಞಾನಕೆ ಭೇದವು ।
ಮುಕ್ತಿಗೆ ಭೇದವು ಯಂತಿಳಿದೂ ॥
ಸುತ್ಪುರುಷರ ಸ್ನೇಹವ ಸಂಪಾದಿಸಿ ।
ಮತ್ತೊಂದೊಲ್ಲೆನು ಯಂದಿರುತಿಪ್ಪುದೆ ೧೮

ಸಾಧನತ್ರಯ ಫಲಗಳನು ವಿಚಾರಿಸಿ ।
ಮಾಧವನ ಗುಣ ಮಹತ್ಮಿಯನೂ ॥
ಸಾದರದಿಂ ಜ್ಞಾನಿಗಳ ಮುಖದಲಿ ದಿ- ।
ನೇ ದಿನೇ ಕೇಳಿ ವಿಜ್ಞಾನ ಘಳಿಸುವದೆ ೧೯

ಕಾಲಿಲ್ಲದೆ ನಡಿಯಲು ಬಲ್ಲನು ಹರಿ ।
ಕೇಳುವ ಕಿಂವಿಯಿಲ್ಲದೆ ತನ್ನಾ ॥
ಲೀಲಿಯು ಹೀಂಗದೆ ಯಂದು ತಿಳಿಪುದಕೆ ।
ಈ ಲೋಕದಿ ಅಹಿ ಮಾಡಿಹನೆಂಬುದೆ ೨೦

ಚೇತನ ಕೃತ್ಯವ ಮಾಡುತಲಿಪ್ಪವ ।
ಚೇತನಗಳು ಚಿಂತಾಮಣಿ ದೇ- ॥
ವಾತರು ಸಂಜೀವನ ಪರ್ವತ ಶ್ರೀ-
ನಾಥನ ಆಜ್ಞವು ಯಿದು ಎಂದರಿವುದೆ ೨೧

ಸತ್ವಾದಿ ಗುಣರಹಿತ ಪರಮಾತ್ಮನು ।
ಚಿತ್ತು ಜ್ಞಾನಬಲ ಸುಖ ಪೂರ್ಣಾ ॥
ಮೃತ್ಯುಂಜಯ ಸಖ ಗುಣಶೂನ್ಯಂಬ ಪ್ರ- ।
ವರ್ತಕ ಹೀಗೆಂದೂ ತಿಳಿದೀಹದೆ ೨೨

ಯೇಸು ಯೇಸು ಕಲ್ಪಗಳಾದರು ಶ್ರೀ- ।
ವಾಸುಕಿ ಶಯನಗೆ ಎಂದೆಂದೂ ॥
ನಾಶವಿಲ್ಲ ವಿಶೋಕರು ಧರಿಯೊಳು ।
ಶ್ರೀಶನ ವ್ಯತಿರಿಕ್ತಾರಿಲ್ಲೆಂಬುದೆ ೨೩

ಬ್ರಹ್ಮಾದಿಗಳಿಗೆ ಜನಕನು ಶ್ರೀ ಪರ ।
ಬ್ರಹ್ಮಗೆ ಒಬ್ಬರು ಸರಿಯಿಲ್ಲಾ ॥
ಒಮ್ಮಿಗು ಅಧಿಕರು ಇಪ್ಪರೆ ಶೃತಿಯಲಿ ।
ಸಮ್ಮತವಾಗದೆ ಈ ನುಡಿಯಂಬುದೆ ೨೪

ಶತಸುಖಿ ವಿಧಿ, ಕೋಟಿ ಸುಖಿ ರಮಾ, ಪರಿ- ।
ಮಿತಯಿಲ್ಲದ ಸುಖಿ ಕೇಶವನೂ ॥
ಕ್ಷಿತಿಯೊಳು ಪರಮೇಶ್ವರನೈಶ್ವರ್ಯಕೆ ।
ಇತರರು ಆರುಂಟು ಸಮಾನೆಂಬುದೇ ೨೫

ತಾರಿಯು ಗಗನದೊಳೀಸವೆ ಯಂಬುದು ।
ಧಾರುಣಿಯೊಳಗೆಣಿಸಲಿ ಬಹುದೂ ॥
ನಾರಾಯಣನ ಮಹತ್ಮಿ ಗಣಣಿಯನು ।
ಆರಾರಿಲ್ಲವು ಬಲ್ಲವರೆಂಬುದೆ ೨೬

ವಿಶ್ವಾಸದಿ ದೂರ್ವಿಯ ದಳವಿತ್ತರೆ ।
ವಿಶ್ವ ಕುಟುಂಬಿಯು ಕೈಕೊಂಬಾ ॥
ಅಶ್ವಾದಿ ಮುಖದಿಂ ಪೂಜಿಸಲು ಅ ।
ವಿಶ್ವಾಸದವರು ಕೊಳ್ಳನು ಎಂಬುದೆ ೨೭

ಗೋವಿಂದಗೆ ನಿಜ ನಾಮೆನಿಸುತಿಹವು ।
ಐವತ್ತೊಂದೂ ವರ್ಣಗಳೂ ॥
ಈ ವಿವರವು ತಿಳಿದೂ ನಿಂದಾಸ್ತುತಿಗಳು ।
ದೇವನ ಗುಣಕಥನಗಳೆಂದರಿವದೆ ೨೮

ದುರ್ಜನರಿಗೆ ಎಂದಿಗೂ ದಯಮಾಡನು ।
ನಿರ್ಜರೇಶ ಸಂತರಿಗೊಲಿವಾ ॥
ದುರ್ಜಯವಾದ ಮನಸು ನಿಶ್ಚೈಸುತ ।
ಅಬ್ಜ ದಳಾಕ್ಷನ ಒಲಿಸಿರೊ ಎಂಬುದೆ ೨೯

ಯಮ ನಿಯಮಾದಿಗಳಲಿ ದಾರಢ್ಯದಿ ।
ಕಮಲಾ ಸ್ವಸ್ತಿಕದಾಸನದೀ ॥
ಸಮಚಿತ್ತದಿ ರೇಚಕ ಪ್ರಮುಖದಲಿಂ ।
ಸಮಿರನ ಬಂಧಿಸಿ ಜಪವನು ಮಾಳ್ಪುದೆ ೩೦

ಸ್ವಾಗರ್ಭಕ ಅಗರ್ಭಕ ಎಂಬುವ ।
ಯೋಗದ ಲಕ್ಷಣ ತಿಳಕೊಂಡೂ ॥
ಮೂಗಿನ ತುದಿಯನೆ ಈಕ್ಷಿಸುತಲಿ ಶ್ರೀ ।
ಭಾಗೀರಥಿ ಪಿತನ ಸ್ಮರಿಸುತಿಪ್ಪುದೆ ೩೧

ಅಂಗುಷ್ಠಾರಂಭಿಸಿ ಮಸ್ತಕತನ ।
ಕಂಗಜ ಜನಕನ ರೂಪವನೂ ॥
ಹಿಂಗದೆ ಧೇನಿಸಿ ಮೈರಧರುಷದಿ ।
ಕಂಗಳಿಂದುದಕ ಸೂಸುತಲಿಪ್ಪುದೆ ೩೨




ಈ ಕರ್ಮವ ಮಾಡಿದೆ ಯನಗೀ ಪರಿ ।
ಸಾಕಲ್ಯವು ಆಯಿತು ಎಂದೂ ॥
ಲೋಕಕೆ ತಿಳಿಸದೆ ತನ್ನಯ ಭಾವವ ।
ಜೋಕಿಲಿ ಬಚ್ಚಿಟ್ಟೂಕೊಂಡಿರುವದೆ ೩೩

ಧ್ಯಾನಕೆ ಕುಳಿತರೆ ಮನ ಹರಿದೋಡಲು ।
ಜಾನಕಿರಮಣನ ಮೂರುತಿಯಾ ॥
ತಾನೀಕ್ಷಿಸುತಲಿ ಸರ್ವದ ತತ್ವದ ।
ರೇಣುದೊಳಗೆ ಮುಣಿ ಮುಣಿಗಿ ಯೇಳುವದೆ ೩೪

ಅಸುರರನಳಿಯಲು ಶಕ್ತನು ಶ್ರೀಹರಿ ।
ದಶರೂಪವ ತಾಳಿದನ್ಯಾಕೇ ॥
ವಸುಧಿಯೊಳಗೆ ಪಾಪಿಷ್ಠ ಜನರ ಮೋ- ।
ಹಿಸುವದಕೀ ಪರಿ ಲೀಲಗಳೆಂಬುದೆ ೩೫

ಅನ್ಯತ್ರದಿ ಇಂದ್ರಿಯಗಳ ಚಲಿಸದೆ ।
ತನ್ನೊಶದೊಳಗಿರಿಸನುದಿನದೀ ॥
ಪನ್ನಗಶಯನನ ಪೂಜೆಯ ಮಾಡುತ ।
ಧನ್ಯನು ಈ ನರನೆನಿಸುತಲಿಪ್ಪುದೆ ೩೬

ಕೋಪವ ಬಿಟ್ಟು ನಿರಂತರ ಜ್ಞಾನಿಗ- ।
ಳಾ ಪದ ಭಜಿಸುತ ಹರಿದಿನದೀ ॥
ಲೋಪವ ಮಾಡದೆ ನಿರ್ಜಲ ಜಾಗರ- ।
ವಾ ಪರಮ ಮುದದಿ ನಡಸುತಲಿಪ್ಪುದೆ ೩೩

ಋಣಕೆ ಕಾಳಕೂಟವ ಕುಡಿವಂತೆ ಮ- ।
ರಣದಂದದಿ ಸನ್ಮಾನಕ್ಕೇ ॥
ಕುಣುಪದಂತೆ ಪರಸ್ತ್ರೀ ನೋಡಲ್ ಭಯ ।
ವನು ಬಡುವನು ಬ್ರಾಹ್ಮಣನೆಂದರಿವದೆ ೩೮

ಶತಮಖನಿಗೆ ಈಶಬಲ ಅವಗೆ ಬಲ ಮ- ।
ರುತವಗೆ ಬಲ ಹರಿ ಅವಗೆಂದೂ ॥
ಇತರರ ಬಲ ಬೇಕಿಲ್ಲ ಸ್ವತಂತ್ರ ।
ಚ್ಯುತ ಸರ್ವಜ್ಞ ಸುಗುಣ ಪೂರ್ಣೆಂಬುದೆ ೩೯

ಸಂಸಾರವ ಹೇಯಿಸಿಕೊಂಡಾವಗ ।
ಕಂಸಾಂತಕನೂಳಿಗವನ್ನೂ ॥
ಸಂಶಯವಿಲ್ಲದೆ ಮಾಡುತೊಂದಧಿಕ ।
ವಿಂಶತಿ ಕುಲ ಉದ್ಧಾರ ಮಾಡುವದೆ ೪೦

ಪ್ರಥಮ ವಯಸದಲಿ ವಿದ್ಯಾಭ್ಯಾಸವು ।
ದ್ವಿತಿಯದಲ್ಲಿ ಗೃಹಕರ್ಮವನೂ ॥
ತೃತಿಯದಿ ಸತ್ತೀರ್ಥ್ಯಾತ್ರಿಗಳನು ಮಾ ।
ಡುತಲಲ್ಲೆಲ್ಲಿಹ ಮಹಿಮಿ ಕೇಳುವದು ೪೧

ಘೋರತರ ಕುಸಂಸಾರವೆಂಬ ಈ ।
ವಾರಿಧಿ ತ್ವರ ದಾಟುವದಕ್ಕೇ ॥
ಮಾರಮಣನ ನಾಮೋಚ್ಚಾರವೆ ನವ ।
ತಾರಕವೆಂದುಪದೇಶ ಮಾಡುವದೆ ೪೨

ಜಲದೊಳಗುದ್ಭವಿಸಿದ ಮುತ್ತುದಕ ಮ- ।
ರಳೆ ಹ್ಯಾಂಗಾಗದೊ ಅದರಂತೇ ॥
ಕಲಿಕ್ಯವತಾರನ ಶರಣರು ಎಂಬರು ।
ಇಳಿಯೊಳು ನರರೆಂದೆನಿಸಲು ಯಂಬುದೆ ೪೩

ದ್ವಾದಶ ನಾಮವ ಪಂಚಮುದ್ರಿಗಳು ।
ಆದರದಲಿ ಧರಿಸುತ ಪಂಚಾ ॥
ಭೇದವ ತಿಳಿದು ನಿರಂತರದಲಿ ದು- ।
ರ್ವಾದಿಗಳ ಮತವ ಹಳಿವುತಲಿಪ್ಪುದೆ ೪೪

ಮಧ್ವಮತದ ಸರಿ ಮತಗಳು ಸಪ್ತ ಸ- ।
ಮುದ್ರತನಕ ಹುಡುಕಿದರಿಲ್ಲಾ ॥
ಬುದ್ಧಿವಂತರೆಲ್ಲೀತನ ಸೇವಿಸಿ ।
ಸದ್ವೈಷ್ಣವರೆಂದೆನಿಸಿರೊ ಎಂಬುದೆ ೪೫

ಮಾತಾಪಿತ್ರರ ಆರಾಧನಿ ಬಲು ।
ಪ್ರೀತಿಲಿ ಮಾಡುತ ಭಾಸ್ಕರಗೇ ॥
ಪ್ರಾತರಾದಿ ಸಂಧ್ಯಾರ್ಘ್ಯವ ಕೊಡುತಲಿ ।
ಆ ತರುವಾಯ ಜಪಂಗಳ ಮಾಳ್ಪುದೆ ೪೬

ಗುರು ಹಿರಿಯರ ಚರಣವ ವಂದಿಸುತಲಿ ।
ಪರರಿಗೆ ಉಪದ್ರವನು ಕೊಡದೇ ॥
ಮರುತಾಂತರ್ಗತನೋಲ್ಗವನಲ್ಲದೆ ।
ನರ ಸ್ತೋತ್ರವ ಸ್ವಪ್ನದಿ ಮಾಡದಿಹದೆ ೪೭

ನಡಿಯಲು ದಾರಿಯ ಮನಿಯೊಳಗಿದ್ದರು ।
ನುಡಿ ನುಡಿಗನಿರುದ್ಧನ ನೆನದೂ ॥
ಬಡವರೆ ಗೋಪಾಲನ ಹೊಂದಿದವರು ।
ಅಡವಿಯೊಳಿದ್ದರು ಧೊರಿಗಳೆ ಎಂಬುದೆ ೪೮

ಪರಮಾಣುಗಳೊಳು ತಾನಿಹ್ಯ ತನ್ನೊಳ- ।
ಗಿರಸಿಹನಗಣಿತ ಬೊಮ್ಮಾಂಡಾ ॥
ಶಿರಿಗೆಂದೆಂದಿಗಸದಳವು ತಿಳಿಯಲು ।
ಕರಿವರದಿಂಥ ಮಹತ್ಮನು ಎಂಬುದೆ ೪೯

ಹೊತ್ತರಾದಿ ನಿಶಿ ಪ್ರಹರಾಗುವನಕ ।
ಮೃತ್ತಿಕಿ ಶೌಚಾದಿ ಸುಕರ್ಮಾ ॥
ತತ್ತಲವಾಗದೆ ಶ್ರೀ ಮುದತೀರ್ಥರ ।
ಉಕ್ತ್ಯನುಸಾರಾಚರಿಸುತಲಿಪ್ಪುದೆ ೫೦

ಹಾನಿ ಲಾಭ ಜಯ ಅಪಜಯ ಮಾನಪ- ।
ಮಾನ ಸುಖಾಸುಖ ಸಮ ಮಾಡೀ ॥
ಈ ನರರಿಗೆ ತನ್ನಿಂಗಿತ ತೋರದೆ ।
ಪ್ರಾಣೇಶ ವಿಠಲನ ಕರುಣವ ಪಡೆವದೆ ೫೧

## ೨೨೪

### ತಂತ್ರಸಾರೋಕ್ತಿ ಕೇಶವಾದಿ ಇಪ್ಪತ್ತನಾಲ್ಕು ಮೂರ್ತಿ ಲಕ್ಷಣ

ತಿಳಿವದು ಸಜ್ಜನರೂ ಶಿರಿ ।
ನಿಲಿಯ ವಿಧಿಗೆ ತಾ ॥
ವಲಿದು ಸರಿದ ನುಡಿ ।
ತಿಳಿವದು ಸಜ್ಜನರೂ ಪ

ಮಾಧವನಿಪ್ಪತ್ನಾಲ್ಕು ಮೂರ್ತಿ ಬಹು ।
ಬೋಧರ ಉಕ್ತಿ ಮನಕೆ ತಂದೂ ॥
ಶೋಧಿಸಿ ಕ್ರಮ ವ್ಯುತ್ಕ್ರಮ ಪದ್ಮಾದಿ ಗ- ।
ದಾದಿ ಅರ್ಥ ಸಾಂತರ ಕ್ರಮವೆಂಬುದು ೧

ಕೇಶವ ವಿಷ್ಣು ಗೋವಿಂದ ವಾಮನ ಕ್ರಮ ।
ಈಶ ಮಧುರಿಪುರ ಮಾಧವನೂ ॥
ದೋಷಹ ತ್ರಿವಿಕ್ರಮ ನಾರಾಯಣ ।
ಭಾಸಿಸುತಿಹ ವ್ಯತ್ಕಮ ಮೂರುತಿ ಎಂದು ೨

ಸಂಕರುಷಣ ಅನಿರುದ್ಧನು ಶ್ರೀಧರ ।
ಪಂಕಜನಾಭ ಕಂಜಾದಿ ಕ್ರಮಾ ॥
ಬಿಂಕದ ದಾಮೋದರ ಪುರುಷೋತ್ತ್ಮ ಕ ।
ಳಂಕ ಹೃಷೀಕಪುಪೇಂದ್ರ ಗದಾದೆಂದು ೩

ಮುನಿನುತ ವಾಸುದೇವ ಅಧೋಕ್ಷಜ ।
ಮನಸಿಜ ಪಿತ ನರಸಿಂಹ ಹರೀ ॥
ಅನಘರ್ಧಕ್ರಮ ಪ್ರದ್ಯುಮ್ನ ಜನಾ– ।
ರ್ದನ ಅಚ್ಯುತ ಕೃಷ್ಣನು ಸಾಂತರಕ್ರಮ ೪

ನೀಲ ಘನಾಂಗನ ರವಿ ನಿಭ ಇಪ್ಪ ।
ತ್ನಾಲಕು ಮೂರುತಿ ಲಕ್ಷಣವೂ ॥
ಮ್ಯಾಲಿನ ಬಲಗೈ ಮೊದಲು ಕೆಳಗೆ ಕಡಿ ।
ಕೇಳಿ ಶಂಖ ರವಿಗದ ಕಂಜ ಕೇಶವ ೫

ಕಂಜಗದ ರವಿದರ ಧರ ನಾರಾಯಣ ।
ವ್ರಜನ ಹರವಿದರ ಪದ್ಮ ಗದಾ ॥
ಭುಜ ಮಾಧವ ಗದ ಕಂಜಧರ ರವಿ ಭೂ ।
ಮಿಜ ವಲ್ಲಭ ಗೋವಿಂದ ಮೂರುತಿಯಂದು ೬

ಪುಂಡರೀಕಧರ ರವಿಗದ ವಿಷ್ಣು ಪ್ರ– ।
ಚಂಡ ಶಂಖ ಕಂಜ ಗದ ಚಕ್ರಾ ॥
ಅಂಡಜವಹ ಮಧುರಿಪು ಗದ ರವಿದರ ।
ಮಂಡಿತ ಪದ್ಮ ತ್ರಿವಿಕ್ರಮ ಮೂರುತಿ ೭

ಅರಿದರ ಕಂಜ ಸು ಕಂಬುವಾಮನ ಶ್ರೀ- ।
ಧರ ರವಿ ಗದಧರ ಪದ್ಮಯುತಾ ॥
ವರ ಚಕ್ರ ಜಲಜದರ ಗದ ಹೃಷಿಕ ಪ- ।
ಪರ ಕಂಜ ರವಿಗದ ಶಂಖ ಪದುಮನಾಭಾ ೮

ದರಗದ ರವಿ ಕಂಜ ದಾಮೋದರ ಸಂ- ।
ಕರುಷಣ ಶಂಖ ಕಂಜಾರಿ ಗದಾ ॥
ಶರಧಿಜ ರವಿ ಪಂಕಜ ಗದ ಸಂತತ ।
ಧರಿಸಿಹ ಮಾಯಪ ವಾಸುದೇವನೆಂದು ೯

ದರ ಸುಗದ ನಳಿನ ಅರಿ ಪ್ರದ್ಯುಮ್ನನು ।
ದುರುಳಹ ಗದ ಕಂಬು ಕಂಜಾರೀ ॥
ಸುರಪನಿರುದ್ಧ ಕಮಲದರ ಗದ ರವಿ ।
ಧರಿಸಿಹ ಸರ್ವದ ಪುರುಷೋತ್ತುಮನೆಂದು ೧೦

ಗದ ಕಂಬುಚರಣ ಸರಸಿಜಧೋಕ್ಷಜ ।
ಪದುಮ ಗದದರ ರವಿ ನರಹರೀ ॥
ಉದಜಾರಿದರ ಗದಾಚ್ಯುತ ರವಿದರ ।
ಗದ ಕಮಲಾಂಶ ಜನಾರ್ದನ ವಿಭುವೆಂದು ೧೧

ಗದ ಚಕ್ರ ವಿಷಜ ಶಂಖ ಉಪೇಂದ್ರನು ।
ಸುದರುಶನ ಕಂಜ ಗದದರ ಹರೀ ॥
ಯದುಪತಿ ಕರ ನಾಲ್ಕರೊಳು ಗದ ಕಮಲ ।
ಸುದರುಶನ ವಿಧುಭ ಪಾಂಚಜನ್ಯವೆಂದು ೧೨

ವರ ಗಾಯತ್ರೀ ವರ್ಣ ಮೂರ್ತಿಗಳಿ- ।
ವರು ಸಾದರದಲಿ ಧೇನಿಪುದೂ ॥
ನಿರುತ ಸುಕವಿಗಳ ಮತವಿದು ದಕ್ಷಿಣ ।
ವರ ಪ್ರಾಣೇಶ ವಿಠಲ ಸಂತೈಪನೂ ೧೩

## ೨೨೫

ಶಿರಿರಮಣ ದಯದಿಂದ ಮಂತ್ರಾರ್ಘ್ಯ ಕೊಡುವ ಬಗೆ ।
ಪರಮೇಷ್ಠಿಗೊಲಿದು ಪೇಳಿದನು ಇಂತೂ ಪ

ಅಷ್ಟಾಕ್ಷರದಿ ಮಂತ್ರಾರ್ಘ್ಯ ಸಾಲಗ್ರಾಮ ।
ವಿಟ್ಟು ಸದ್ ಭಕ್ತಿಯಲಿ ಶಂಖದಿಂದಾ ॥
ಕೊಟ್ಟವಗೆ ಸಂತುಷ್ಟನಾಗಿ ಎನ್ನಯ ಸದನದೋ- ।
ಳಿಟ್ಟು ಸಂತೈಸುವೆನು ಬ್ರಹ್ಮ ಕೇಳೂ ೧

ಸತ್ಯಭಾಮಾದಿ ಮಿಕ್ಕಾದ ಮಂತ್ರಾರ್ಘ್ಯವನು ।
ಮತ್ತಾದ ಜಲದಿಂದ ಪಾತ್ರಿಯಲ್ಲೀ ॥
ಹಸ್ತದಿಂ ಕೊಡಬೇಕು ಎನ್ನ ಪ್ರೀತಿ ಎಲೊ ಇದು ।
ಸತ್ಯಲೋಕಾಧಿಪನೆ ಕೇಳು ಮುದದೀ ೨

ಎನ್ನ ಮಂತ್ರಾರ್ಘ್ಯ ಹಸ್ತದಲಿ ಪಾತ್ರಿಯೊಳೀಯೆ ।
ಅನ್ಯಾಯವೆಷ್ಟೆಂದು ಪೇಳಲೀಗಾ ॥
ವನ್ನಜಾಸನ ಎನಗರಕ್ತವೆರದಂತಹದೊ ।
ಘುನ್ನವರ ಕ್ಲೇಶಕ್ಕೆ ಎಣಿಕೆ ಇಲ್ಲಾ ೩

ಅದರಿಂದ ತಿಳಿದು ಸಾಲಗ್ರಾಮವಿಟ್ಟು ಶಂ- ।
ಖದಲಿ ಕೊಡಬೇಕು ಎನ್ನರ್ಘ್ಯಗಳನೂ ॥
ವಿಧಿ ಕಾಷ್ಟಗತ ವಹ್ನಿ ಮಥಿಸೆ ತೋರ್ಪಂತೆ ಸ- ।
ರ್ವದ ತೋರ್ಪೆ ನಾನು ಸಾಲಗ್ರಾಮದೀ ೪

ಶ್ರೀ ನಾರಿ ಪ್ರಮುಖ ಮಂತ್ರಾರ್ಘ್ಯ ಶಂಖದಲಿ ಕೊಡೆ ।
ನಾನೊಪ್ಪೆನವರ ಭಂಗವ ಬಡಿಸುವೇ ॥
ವಾಣೀಶ ತಿಳಿಯೆಂದು ಸ್ಮಿತ ವದನದಿಂದ ಶ್ರೀ ।
ಪ್ರಾಣೇಶ ವಿಠಲ ನಿರೂಪಿಸಿದನೂ ೫

## ೨೨೬

## ಗ್ರಂಥಮಾಲಿಕಾ ಸ್ತೋತ್ರ

ಸದ್ವೈಷ್ಣವರಾದವರೆಲ್ಲ ಕೇಳಿರಿ
ಅದ್ವೈತರುಸರಾಡದಂದದಿ
ಮಧ್ವಮುನಿ ಬರದಂಥ ಗ್ರಂಥಸಂಖ್ಯವ ಪೇಳ್ವೆನೂ ಪ

ಪ್ರಥಮ ಗೀತಾಭಾಷ್ಯ ನಂತರ ।
ಚತುರಮುಖ ಸೂತ್ರಕ್ಕೆ ಭಾಷ್ಯ ಮು- ।
ಕುತಿ ಪ್ರದಣು ಭಾಷ್ಯಾಖ್ಯ ಗ್ರಂಥವು ಅನುವ್ಯಾಖ್ಯಾನಾ ॥
ಚತುರ ಗ್ರಂಥ ಪ್ರಮಾಣ ಲಕ್ಷಣ ।
ಕ್ಷಿತಿಯೊಳಗೆ ವೈಷ್ಣವ ಜನಕೆ ಸಮ್ಮತಿ ।
ಕಥಾ ಲಕ್ಷಣ ಉಪಾಧೀ ಖಂಡನಾ ಗ್ರಂಥಾ ೧

ಸರಸ ಮಾಯಾವಾದ ಖಂಡನ ।
ವರಮಿತ್ರತ್ವ ಸುಮಾನ ಖಂಡನ ।
ಪರಮ ಮಂಗಳ ಕೊಡುವ ಗ್ರಂಥವು ತತ್ವ ಸಂಖ್ಯಾನಾ ॥
ವರದ ತತ್ವ ವಿವೇಕ ಗ್ರಂಥವು ।
ಹಿರಿದು ತತ್ವೋದ್ಯೋತ ಗ್ರಂಥ ಸು- ।
ಕರುಮ ನಿರ್ಣಯ ವಿಷ್ಣು ತತ್ವ ನಿರಣಯ ಋಗ್ಭಾಷ್ಯಾ ೨

ಐತರೇಯವು ತೈತರೇಯ ಸು- ।
ಖ್ಯಾತೆ ಬೃಹದಾರಣ್ಯ ಮಹಿಮೀ ।
ವ್ರಾತ ಈಶಾವಾಸ್ಯ ಕಾಠಕ ದಿವ್ಯ ಛಂದೋಗ್ಯಾ ॥
ಭೂತಿದಾಥರ್ವಣ ಸುಮಂಡುಕ ।
ವೀತಭಯ ಷಟ್ಪ್ರಶ್ನ ಅಭಯದ ।
ಆ ತಳವಕಾರಿಂತು ಹತ್ತುಪನಿಷದಗಳ ಭಾಷ್ಯಾ ೩

ಪತಿತಪಾವನ ಗೀತ ತಾತ್ಪ- ।
ರ್ಯತುಳನ್ಯಾಯ ವಿವರ್ಣ ಹರಿ ನಖ ।
ಸ್ತುತಿ ಯಮಕ ಭಾರತ ಬಿಡದೆ ವಿಶ್ವಾಸ ಮಾಳ್ಪರಿಗೇ ॥
ಗತಿ ದ್ವಾದಶ ಸ್ತೋತ್ರ ಕೃಷ್ಣಾ ।
ಮೃತ ಮಹರ್ಣವ ತಂತ್ರಸಾರ ।
ಚ್ಯುತ ಪ್ರಿಯ ಸದಾಚಾರ ಸ್ಮೃತಿ ಭಾಗವತ ತಾತ್ಪರ್ಯ ೪

ಬಾಹ ದುರಿತವ ತಡದು ತ್ವರ ಹೃ- ।
ದಾಹ ಪರಿಹರಿಸುತಿಹ ಶ್ರೀ ಮ- ।
ನ್ಮಹಾ ಭಾರತ ತಾತ್ಪರ್ಯ ನಿರ್ಣಯ ಪ್ರಣವ ಕಲ್ಪಾ ॥
ಸ್ನೇಹ ಭಕ್ತರ ಪೊರಪ ಮಾತುಳ ।
ದ್ರೋಹಿ ಜನ್ಮ ಜಯಂತಿ ಕಥಿ ನಡು ।
ಗೇಹ ಸುತ ವಿರಚಿಸಿದ ಮೂವತ್ತೇಳು ಗ್ರಂಥವಿವೂ ೫

ಹಲವು ಕ್ಷೇತ್ರ ಸುಯಾತ್ರಿ ದಾನಂ- ।
ಗಳು ವೃತ ಉಪವಾಸ ಯಜ್ಞ ಮಾಡಿದ ।
ಫಲವು ಈ ಗ್ರಂಥಗಳ ಪಠಿಸುವುದಕ್ಕೆ ಸಮವಲ್ಲಾ ॥
ಇಳಿಯ ಮಧ್ಯದೊಳೆಮ್ಮ ವಚನಂ- ।
ಗಳಿಗೆ ಸಮಹಿತ ವಸ್ತುವಿಲ್ಲೆಂ- ।
ದಲವ ಬೋಧರು ಶಿಷ್ಯ ಜನರಿಗೆ ತಾವೆ ಪೇಳಿಹರೂ ೬

ಕುನರಗೆಂದಿಗ್ಯೂ ಪೇಳದಲೆ ಸ- ।
ಜ್ಜನರು ಸದ್ಭಕ್ತಿಯಲಿ ಪಠಿಸುವ ।
ದನವರತ ಈ ಗ್ರಂಥಮಾಲಿಕಿ ಶ್ರೀದ ಶುಚಿ ಸದನಾ ॥
ಅನಘ ಶ್ರೀ ಪ್ರಾಣೇಶ ವಿಠಲನು ।
ಮನದಭೀಷ್ಟಿಯ ಕೊಟ್ಟು ಇಹದಲಿ ।
ಕೊನಿಗೆ ತನ್ನಾಲಯದಿ ಸಂವಿಯದ ಸುಖದೊಳಿರಿಸುವನೂ ೭

## ೨೨೭

## ಶ್ರೀ ಗೋಪಿಚಂದನ ಮುದ್ರಾಧಾರಣ ಮಾಹಾತ್ಮ್ಯ

ಗೋಪಿಚಂದನ ಮುದ್ರಧಾರಣ ಮಹಾತ್ಮಿಯನು ।
ಆಪನಿತು ಬರವೆ ಕೇಳ್ವದು ಸುಜನರು ಪ

ಪೂರ್ವದಲಿ ಕೈಲಾಸ ಶಿಖರದಲಿ ಇಂದ್ರಾದಿ ।
ಗೀರ್ವಾಣ ಸಕಲ ಮುನಿ ಪ್ರಮಥರಿಂದಾ ॥
ಪಾರ್ವತೀಶನು ಸೇವೆಗೊಳುತಿರಲು ಜನಕ ದಯ ।
ಬೀರ್ವದಕೆ ಗೌರಿ ಪತಿಗಿಂತೆಂದಳೂ ೧

ಎಲೆ ದೇವ ನಿಮ್ಮಿಂದ ಲೋಕಕ್ಹಿತಕರವಾದ ।
ಬಲು ಧರ್ಮ ಗೌಪ್ಯ ವೃತ ಕೇಳ್ದೆನೀಗಾ ॥
ತಿಳಿಸುವದು ಊರ್ಧ್ವ ಪುಂಡ್ರದ ಮುದ್ರಿ ಮಹಿಮೆ ಎನೆ ಮು- ।
ಗುಳು ನಗಿಯಿಂದ ಸತಿಗಿಂತೆಂದನೂ ೨

ಅರಸಿ ಕೇಳ್ ವಿಪ್ರನಾಗಲಿ ಸುಪಂಡಿತನಾಗೆ ।
ಧರಿಸದಿರೆ ಗೋಪಿಚಂದನ ಮುದ್ರಿಯಾ ॥
ಸುರ ಘಟ ಸಮಾನ ತದ್ದೇಹದರುಶನ ಪಾಪ ।
ತರಣಿ ಬಿಂಬವ ನೋಡಿ ಕಳಿಯಬೇಕೂ ೩

ಕೋಪಿಯಾಗಲಿಯನಾಚಾರಿಯಾಗಲಿ ಸರ್ವ- ।
ದಾ ಪರರ ನಿಂದೆಗೈವವನಾಗಲೀ ॥
ಗೋಪಿಚಂದನ ಲಿಪ್ತ ಗಾತ್ರನಾದನ ದೋಷ ।
ಲೇಪವಿಲ್ಲದೆ ಮುಕ್ತನಹನುಭವದಿಂ ೪

ಎಂತು ಪೇಳಲಿ ಊರ್ಧ್ವ ಪುಂಡ್ರ ಮಹತ್ಮಿಯನು ।
ಅಂತಿಜ ಲಲಾಟದಲಿ ಶೋಭಿಸಲ್ಕೇ ॥

ಅಂತಃಕರುಣ ಶುದ್ಧನವನೇ ಪೂಜ್ಯನು ವಲಿವ ।
ಕಂತುಪಿತ ಕುಲಶೀಲಗಳನೆಣಿಸದೇ ೫

ಭಾಮಿನಿಯು ಅಜ್ಞಾನದಿಂ ಮುಂದ್ರ ಧರಿಸದಲೆ ।
ಹೋಮಾರ್ಥವಾಗಿ ಪಾಕವ ಮಾಡಲೂ ॥
ಆ ಮಹತ್ಪಾಪವೇನಂಬೆ ವಿಷ್ಟಸಮಾನ್ನ ।
ಈ ಮರ್ಮವರಿಯದುಂಡುವಗ ನರಕಾ ೬



ಹರಿಯ ಚಕ್ರಾಂಕಿತ ವಿರಹಿತ ಸ್ತ್ರೀ ಪುರುಷಾಂಗ ।
ಸ್ಪರುಶವಾಯಿತೆ ದೈವವಶದಿಂದಲೀ ॥
ಅರಲವ ತಡಿಯದೆ ಆಮಲ್ಕ ಗೋಮಯ ಸ್ನಾನ ।
ವಿರಚಿಸುತ ಶ್ರೀಶಂಘ್ರಿ ಪೂಜಿಸುವದೂ ೭

ಸ್ಮರಣೆ ಮಾಡದೆ ಹರಿಯ ಅಂಕಿತರ ಹಿತ ದೇಹ ।
ಜರಿಯೆ ಜಾಹ್ನವಿಯಲ್ಲಿ ನರಕ ಉಂಟೂ ॥
ಅರಿ ಶಂಖ ಧರಿಸಿ ಕೀಕಟದಲ್ಲಿ ಮೃತನಾಗೆ ।
ಲರಿವದು, ಪ್ರಯಾಗ ಮೃತಿಗತಿಯವನಿಗೇ ೮

ಪುತ್ರಹೀನಗೆ ಲೋಕವಿಲ್ಲವೆಂಬುವದ್ಯಾಕೆ ।
ಮಿತ್ರ ಕುಲಜನ ಮುದ್ರೆ ಧರಿಸುತಿರಲೂ ॥
ಶತ್ರು ಸಮಾನಾಪಹ್ಯರಿದು ಮುದ್ರಿಯನಿಡದೆ ಸ್ವ- ।
ಪಿತೃಗಳಿಗೈದಿಸುತಿಹರು ದುರ್ಗತೀ ೯

ಆವ ವಿಪ್ರನು ಊರ್ಧ್ವಪುಂಡ್ರ ವಿರಹಿತನಾಗಿ ।
ಭಾವಶುದ್ಧದಿ ಶ್ರಾದ್ಧ ಮಾಡಲವನಾ ॥
ಜೀವಿಸುವದ್ಯಾಕೆಂದು ಶಪಿಸಿ ದ್ವಾದಶ ವರುಷ ।
ತಾಂ ವದನದೋರಧೋಹರು ಪಿತೃಗಳೂ ೧೦

ಉರದಲ್ಲಿ ಚಕ್ರವಿರೆ ದೇವರೆನಿಸುವದು ಭುಜ ।
ಅರಿಯುಕ್ತವಾಗಿರಲು ದ್ವಿಜನೆನಿಸುವಾ ॥

ವಿರಹಿಥರಿ ಪ್ರತಿಮಿ ಪೂಜಿಸಲು ವಿಪ್ರಗೆ ದಾನ ।
ವಿರಸೆ ರಂಧ್ರ ಕಲಶದೊಳುದಕದಂತೆ ೧೧

ಯಾಗ ಮಾಡಲಿ ಮಹದ್ದಾನ ಬಹು ಮಾಡಲೀ ।
ಯೋಗ ಮಾಡಲಿ ವೇದ ಓದುತಿರಲೀ ॥
ನಾಗವರದನ ಲಾಂಛನವ ಧರಿಸದಲೆ ಕುನ್ನಿ ।
ಭಾಗೀರಥಿಯೊಳದ್ದಿ ತೆಗಿದ ತೆರವೂ ೧೨

ನಾಮಕರ್ಣುಪನಯನ ಆಷಾಢ ಕಾರ್ತೀಕ ।
ಶ್ರೀ ಮಾಧವನ ದಿನದಿ ತಪ್ತಮುದ್ರಿ ॥
ಧೀಮಂತರಾದ ಗುರುಗಳ ಕೈಯ ಧರಿಸುವದು ।
ನೇಮದಿಂ ಪಂಚ ಸಂಸ್ಕಾರದೊಳಿದೂ ೧೩

ಎರಡಾರು ನಾಲ್ಕು ಎರಡೂ ಒಂದು ಮುಂದ್ರಗಳು ।
ಧರಿಸುವದು ನಾಲ್ಕು ವರ್ಣವು ಕ್ರಮಾತೂ ॥
ಅರಿಪ್ರಮುಖ ಪಂಚಮುದ್ರಿಯೊಳು ಹಿಂಕಾರಾದಿ ।
ಹರಿರೂಪ ಪಂಚರಿದು ಧರಿಸಬೇಕೂ ೧೪

ಶಚಿಯೆ ಮೊದಲಾದ ನಿರ್ಜರರ ಹೆಂಡರು ಮುಂದ್ರ ।
ಶುಚಿಮನದಿ ಧರಿಸಿ ಸ್ವಪತಿಗಳ ಸಹಿತಾ ॥
ಅಚಲಿತ ಸುಮಾಂಗಲ್ಯಯೈದಿ ಸ್ವ ಸ್ಥಳದಲ್ಲಿ ।
ಮುಚುಕುಂದ ವರದನಾರಾಧಿಸುವರೂ ೧೫

ಈ ವಚನಕಾವ ಸ್ಥಳಕಾವ ನಾಮಾವ ಮು– ।
ದ್ರಾವ ಮಿತಿಯಾಕಾರ ಮೃದವೆಲ್ಲಿದೂ ॥
ಆವ ವರ್ಣದಲೇನು ಆವಂಗುಲದಲೇನು ।
ಆವ ಮಂತ್ರದಕೆನಲು ಪೇಳ್ವನಿಂತೂ ೧೬

ಕಾಮಿನಿಯೆ ಗೋಪಿಚಂದನ ಮರ್ದಿಸುವದಿಂತು ।
ವಾಮಹಸ್ತದ ಮಧ್ಯ ಜಲವ ಧರಿಸೀ ॥

ಈ ಮೂರು ಪಾದ ಗಾಯಿತ್ರಿಯಿಂ ಮಂತ್ರಿಸುತ ।
ಆ ಮಹಾ ಋಕ್ಕಥೋ ದೇವತಿಯಿಂ ೧೭

ತರುವಾಯ ಧರಿಸುವದು ಪುಂಡ್ರಗಳು ಕೇಳೆಲಗೆ ।
ವರಪಣೆಗೆ ಆದಿಯಲಿ ಕೇಶವಲ್ಲೀ ॥
ಸುರಪ ನಾರಾಯಣುದರದಿ ಹೃದಯದಲ್ಲಿ ಮಾ- ।
ವರ ಕಂಠ ದೇಶದಲ್ಲಿ ಗೋವಿಂದನೂ ೧೮

ಬಲಪಾರ್ಶ್ವದಲಿ ವಿಷ್ಣು ಭುಜದಲ್ಲಿ ಮಧೂಸೂದ ।
ಸಲೆ ಬಲದ ಕಂಠದಲಿ ತ್ರೀವಿಕ್ರಮಾ ॥
ಲಲನೇ ಕೇಳ್ ವಾಮಪಾರ್ಶ್ವಕೆ ವಾಮನಾ ಭುಜಕೆ ।
ಖಳಹ ಶ್ರೀಧರ ಕಂಠದಲಿ ಹೃಷೀಕಶ ೧೯

ಪೃಷ್ಠದಲಿ ಕಂಜನಾಭ ಶಿರದಿ ದಾಮೋದರನು ।
ಇಷ್ಟೆ ದ್ವಾದಶನಾಮ ಸಿತಪಕ್ಷಕೇ ॥
ಕೃಷ್ಣಪಕ್ಷದೊಳಿವಕೆ ಸಂಕರುಷಣಾದಿ ಶ್ರೀ ।
ಕೃಷ್ಣ ಪರಿಯಂತ ತಿಳಿವರು ಸುಜನರೂ ೨೦

ಶೈಲಾಗ್ರ ವಲ್ಮೀಶ ಶಿಂಧು ಹರಿ ಕ್ಷೇತ್ರ ನದಿ ।
ಕೂಲ ದ್ವಾರಕಿ ನೆಲದ ಶ್ರೀ ತುಲಸಿಯಾ ॥
ಮೂಲದಲ್ಲಿಹ ಮೃತ್ತಿಕಾಗಳಿಂತು ಸುಪವಿತ್ರ ।
ಕೇಳದರೊಳಗೆ ಗೋಪಿಚಂದನಧಿಕಾ ೨೧

ಶಾಮ ಶಾಂತವು ರಕ್ತ ರಾಜ ವಶ ಪೀತ ಶ್ರೀ ।
ಆ ಮಹಾ ವಿಷ್ಣು ಪ್ರಿಯಕರವು ಶ್ವೇತಾ ॥
ಈ ಮರ್ಮಗಳ ತಿಳಿದು ಪುಂಡ್ರಧಾರಣ ಮಾಡೆ ।
ಭೂಮಿಯೊಳಗವರು ಸಜ್ಜನರು ಸಖಿಯೇ ೨೨

ಸ್ತ್ರೀ ಪುರುಷರೆಲ್ಲ ಧರಿಸುವದು ವಿವರವ ತಿಳಿದು ।
ಪಾಪಿ ಹೆಂಗಸು ಅವಳಾದರನ್ನಾ ॥

ಗೋಪಿಚಂದನ ಗದಾ ಫಣಿಗೆ ಧರಿಸದಲಿದ್ದ- ।
ರಾ ಪುರುಷನಳಿದು ದುಃಖವ ಬಡುವಳೂ ೨೩

ಸಕಲ ಗುಣ ತರ್ಜನದಿ ಮಧ್ಯಮದಿ ಜ್ಞಾನ ನಾ- ।
ಮಿಕ ಸದಾಚಾರ ಕನಿಷ್ಠದಲಿ ಮೋಕ್ಷಾ ॥
ಸುಖದಿ, ವಿಧಿತಿಲಕ ದಕ್ಷಿಣದಿ ಉತ್ತರದಿ ಶಿವ ।
ಅಕಳಂಕ ಹರಿ ಮಧ್ಯ ಛಿದ್ರದಲ್ಲೀ ೨೪

ಸಛಿದ್ರ ಹರಿಮನೆನಿಸುವದು ಶ್ವಾನಾಂಘ್ರಿ ಸಮ ।
ಅಚ್ಛಿದ್ರ ಪಣಿಯು ಈ ಲೋಕದಲ್ಲೀ ॥
ತತ್ಸಮಾನಧಮರಿಲ್ಲ ಪುಂಡ್ರದಾಕಾರ ।
ಮತ್ಸಖಿಯೆ ಕೇಳಾದರದಲಿ ಪೇಳುವೇ ೨೫

ದಂಡದಾಕಾರ ಪಚ್ಚುವದು ಫಣಿಯಲ್ಲಿ ಖರ ।
ದಂಡದಂತೆದಿಗೆ ಭುಜದಲಿ ಬಿದಿರೆಲೀ ॥
ಪುಂಡರೀಕಾಕ್ಷ ಕೇಳನ್ಯ ದೀಪಾಕೃತಿಯು ।
ಪಂಡಿತರು ಧರಿಸುವರು ನಿಗಮೋಕ್ತಿಯಿಂ ೨೬

ವನಿತೇ ಕೇಳ್ ಫಣಿ ಕಂಠದಲಿ ನಾಲ್ಕು ಪೃಷ್ಠ ತಲಿ ।
ಇನಿತರಲಿ ಪಂಚಾಂಗುಲದ ಪರಿಮಿತೀ ॥
ಮುನಿ ನೇತ್ರ ಬೆರಳಷ್ಟು ಕುಕ್ಷಿಯಲಿ ಮೇಳೊಂದು ।
ಘನ ಉದರದಲ್ಲಿ ಬಾಹುಗಳಿಘತ್ತೂ ೨೭

ವಕ್ಷದಲಿ ಅಷ್ಟಾಂಗುಲದ ಪ್ರಮಾಣವ ಧರಿಸಿ ।
ಅಕ್ಷಯಾನಂದದಿಂ ನಿರ್ವ್ಯಾಜದಿಂ ॥
ಪಕ್ಷಿವಾಹನಾಯುಧವ ನಾಲ್ಕೊಂದು ವಿವರವ । ಮು
ಮುಕ್ಷುಗಳು ತಿಳಿದು ಧರಿಸುವರು ಇಂತೂ ೨೮

ವಲ್ಲಭಯೆ ಕೇಳ್ಮುದ್ರಿಗಳು ಭಂಗರ ।
ಬೆಳ್ಳಿ ತಾಮ್ರವಾದರು ದೊರಕದ ಕಾಲಕೇ ॥

ಕಲ್ಲಿನವು ಕಾಷ್ಠದವು ಕಬ್ಬಿಣದವಾದರೂ ।
ಬಲ್ಲವರು ಮುದದಿಂದ ಧರಿಸುತಿಹರೂ ೨೯

ಉದರದಲಿ ಮೂರು ಚಕ್ರದರಡಿಗೆ ದರ ವಂದು ।
ಪದುಮದ್ವಯ ಮಧ್ಯದಲಿ ನಾಮ ನಾಲ್ಕೂ ॥
ಇದರಂತೆ ಬಲಕುಕ್ಷಿ ಬಾಹುಗಳಿಗ್ಹಚ್ಚುವದು ।
ಮುದದಿಂದಲರಿ ಮಾತ್ರ ವಂದು ಕೊರತೀ ೩೦

ದರ ಎರಡರಡಿ ಒಂದು ಅರಿ ಎರಡು ಗದಿ ನಾಮ ।
ಧರಿಸುವದು ನಾಲ್ಕು ಎಡಕುಕ್ಷಿ ಭುಜಕೇ ॥
ಕೊರಳಿಗೆ ಕಪೋಲಗಳಿಗೊಂದೊಂದು ಹಚ್ಚುವದು ।
ಅರಿ ಬಲಕ ಎಡಭಾಗದಲಿ ಶಂಖವೂ ೩೧

ಗದೆ ಪಣಿಗೆ ಹೃದಯದಲಿ ರವಿ ಪದ್ಮ ಕರದ್ವಯಕ ।
ಮಧುಸೂದನಾಂಕಿತವು ಸರ್ವ ಸ್ಥಳಕೇ ॥
ಇದರಂತೆ ಆಚರಿಪ ಸದ್ವೈಷ್ಣವರ ಸುಖವು ।
ಅದನೆಂತು ವರ್ಣಿಸಲಿ ವಶವಲ್ಲವೂ ೩೨

ಶರ ಚಾಪಗಳನು ಮೂರ್ಧ್ನಿಯಲಿ ಖಡ್ಗವು ಚರ್ಮ ।
ವೆರಡು ಬಲ ಎಡ ಸ್ತನದಿ ಕೌಸ್ತುಭವನೂ ॥
ಉರದಲ್ಲಿ ದಕ್ಷಿಣದ ಸ್ತನದಲ್ಲಿ ಶ್ರೀವತ್ಸ ।
ಧರಿಸುವದು ಆರು ಚಿಹ್ನಗಳು ಸತತಾ ೩೩

ಲಕ್ಷ್ಮೀರಮಣನ ಮುದ್ರ ಪುಂಡ್ರ ಧರಿಸಿದ ದ್ವಿಜನ ।
ಕುಕ್ಷಿಯೊಳು ಕವಳ ಮಾತ್ರನ್ನ ಕೊಡಲೂ ॥
ಅಕ್ಷಯಾಗುವದು ಫಲ ಹಿಂದೆ ಮುಂದೇಳು ಕುಲ ।
ತಕ್ಷಣಕೆ ಶುಚಿಯಾಗಿ ಗತಿ ಕೊಡುವದೂ ೩೪

ಹೀನ ಪುಂಡ್ರನು ಸುಪಂಡಿತನಾಗಿರಲು ಅವನ ।
ಆನನದಿ ಕೊಟ್ಟನ್ನ ಅಳುವದಿಂತೂ ॥

ಏನು ದುಷ್ಕರ್ಮ ಒದಗಿತೊ ಈ ಒಡೆಯನಿಂದ ।
ಈ ನಷ್ಟನಿಗೆ ಕೊಡಿಸಿಕೊಂಡೆನೆಂದು ೩೫

ಪಂಚನಿಶಿ ಬದುಕುವದೆ ಲೇಸೂರ್ಧ್ವ ಪುಂಡ್ರಗಳು ।
ಪಂಚಮುದ್ರಿಯ ಧರಿಸಿ ಹರಿ ಭಜಿಸುತಾ ॥
ವಂಚಿಸಿ ಮುಕುಂದನ ತಿರಸ್ಕರಿಸಿ ಮುದ್ರಿಯ ವಿ- ।
ರಂಚಿ ಕಲ್ಪಯುತ ಜೀವಿಸಲು ವ್ಯರ್ಥಾ ೩೬।

ಎಲ್ಲಿ ಶ್ರೀ ತುಲಸಿವನ ಪದ್ಮವನ ವೈಷ್ಣವರು ।
ಎಲ್ಲಿ ಇಹರಲ್ಲೇ ಇಹ ಪರಮಾತ್ಮನೂ ॥
ಸೊಲ್ಲಾಲಿಸಿದು ಹರಿ ನುಡಿದಿಹನಾ ವೈಕುಂಠ- ।
ದಲ್ಲಿಲ್ಲ ನೆನವರಲ್ಲಿರುವನೆಂದೂ ೩೭

ಯರಡಾರು ಪುಂಡ್ರ ಶ್ರೀ ಮುದ್ರಧಾರಣ ಚರಿತ ।
ಸ್ಮರಿಸಿ ಕೇಳಿದರೆ ಇಷ್ಟಾರ್ಥ ಪಡೆದೂ ॥
ಮುರವೈರಿ ಲೋಕವೈದುವರು ಶೃತಿ ಸಿದ್ಧವಿದು ।
ಗಿರಿಜೆ ಕೇಳೆಂದು ಧೂರ್ಜಟ ಪೇಳಿದಾ ೩೮

ಶಿವ ಸಕಲ ಶಾಸ್ತ್ರಗಳ ಕಲಿಕಿ ಗಿರಿಜೆಗೆ ಪೇಳ್ದ ।
ವಿವರರಿತು ಆಚರಿಪ ಭಾಗವತರಾ ॥
ಭವಶರಧಿಯಿಂದ ಕಡಿಗೆತ್ತಿ ಪಾಲಿಸುತಿಹನು ।
ಕವಿಗೇಯ ಪ್ರಾಣೇಶ ವಿಠ್ಠಲ ಜಸ್ರಾ ೩೯

## ಉಗಾಭೋಗ

### ೨೨೮

#### ಶ್ರೀದೇವರಿಗೆ ನೈವೇದ್ಯ ಇಡುವ ಕ್ರಮ

ಅಮರಾಸ್ಯ ಮೂಲಿಗೆ ಭಕ್ಷ ಪಾಯಸವನ್ನು
ಸಮನಗೋಲಾರಿ ಕೋಣಿಗೆ ಲೇಹಪೇಹಾದಿ
ಸುಮನಸರಿಪು ಮೂಲಿಯಲಿ ವಾಯು ಕೋಣಿಗೆ
ಸಮೀಚೀನ ಸೂಪ, ಮಧ್ಯದಲಿ ತುಪ್ಪಾನ್ನವು
ಕ್ರಮದಿಂದ ಮುಂದೆ ತಾಂಬೂಲ ತಕ್ರೋದಕಾ
ವಿಮಲ ಭಕ್ತಿಯಲಿಟ್ಟು ವಿಪ, ದರ, ರವಿ, ಮೇರು,
ಅಮರರಾಕಳು ಇಂತು ಪಂಚಮುದ್ರಿಯ ತೋರಿ
ರಮೆ ಮನೋರಮ ಶ್ರೀ ಪ್ರಾಣೇಶವಿಠ್ಠಲನೀಗೆ ।
ಸಮರ್ಪಿಸೀರನಳ, ದ್ವಿಜರಿಗಿತ್ತುಂಬುವದೆ ಧರ್ಮಾ ೧

## ಉಗಾಭೋಗ

### ೨೨೯

#### ತಿಥಿತ್ರಯದಲ್ಲಿ ವರ್ಜ್ಯ ಪದಾರ್ಥಗಳ ವಿವರ

ಪುನಹ ಭೋಜನ, ಕಾಂಶ, ಹಾರಕ ।
ಚಣಕ, ಉದ್ದಲ, ಸಂಧಿ, ಮಧು, ಮೈ– ।
ಥುನ, ಪರಾನ್ನವು, ಶಾಖ ಈ ದಶ ವರ್ಜ್ಯ ದಶಮಿಯಲೀ ॥
ದಿನದಿ ನಿದ್ರಿ ಕದಳಿ ಮಧು ದ್ವಿಭೋ ।
ಜನ ಸ್ತ್ರೀ ತೈಲುದಕಾಂಶ ಈ ಎಂ– ।
ಟನು ಬಿಡಲು ದ್ವಾದಶಿಗೆ ಪ್ರಾಣೇಶ ವಿಠಲ ಮೆಚ್ಚುವನೂ ೧

## ೨೩೦

### ತಿಥಿತ್ರಯ ನಿರ್ಣಯ

ಅಂಧ ತಮಸೆ ಪ್ರಾಪ್ತಿ ನಿಶ್ಚಯಾ । ಶೃತಿ–
ಯಂದ ಪ್ರಕಾರವಾಚರಿಸದವರಿಗೆ ಪ

ಹರಿದಿನದಲ್ಲಿ ಆಹಾರ ಬಿಟ್ಟು ಮುದದಿ ಜಾ ।
ಗರವ ಮಾಡದಲುಂಡು ವರಗೂವಧಮಗೇ ೧

ಹರಿವಾಸರ ವಿನಹಾ ಸರುವ ದ್ವಾದಶಿ ಪಾರ– ।
ಣಿ ರವಿಯೋದಯಕಾಗದಿರುವ ದುರ್ಮತಿಗೇ ೨

ನಾಲ್ವತ್ತೈದು ಘಟಿ ಮ್ಯಾಲೆ ಕಾದಶಿಯಾಗೆ ।
ಶ್ರೀಲೋಲವಾಸರಾರೇಳು ಕಳವಂಗೇ ೩

ಪ್ರಥಮ ಕಾಲವ ಮೀರ್ಯಚ್ಯುತನ ಪ್ರಸಾದವ ।
ಪ್ರತಿ ದ್ವಾದಶಿಯೊಳುಂಬ ಮತಿಗೇಡಿಗಳಿಗೇ ೪

ದಶಪಂಚ ಮ್ಯಾಲೊಂದು ದಶಮಿ ಸಿದ್ಧಾಂತ ವೋ– ।
ದಿಸಲು ಶ್ರೀವರನ ದಿವಸ ಹಿಂದಾಗುವಗೇ ೫

ವೇಧಿಲ್ಲಾ ದಶಿಮಿಗೆ ದ್ವಾದಶಿ ಪರದಿನ ।
ಕ್ಹೋದಾರೆ ದ್ವಯ ನಿರ್ಜಲಾದವೆನ್ನದೀರೆ ೬

ಪಳಾಧಿಕೈವತ್ತೇಳು ಘಳಿಗಿ ದ್ವಾದಶಿ ವೋದಿ ।
ಸಲು ಸಾಧನಿದು ಎಂದು ತಿಳಿಯದವನಿಗೇ ೭

ದಶಿಮಿಯೋಳ್ ಹತ್ತು ದ್ವಾದಶಿಯೊಳೆಂಟು ಬಿಡಾದೆ ।
ಪಶುವಿನಂದದಿ ಬಲು ಹಸಗೆಟ್ಟವನಿಗೇ ೮

ಎಲ್ಲಾರು ಸಂದೇಹ ಉಳ್ಳಾರೆ ಮರುದಿನ ।
ದಲ್ಲೆ ದಶಿಮಿ ಮಾಡದೊಲ್ಲದಿದ್ದವಗೇ ೯

ಅತಿ ಸಾಧನಿರಲು ಆಹುತಿಯನ್ನು ಬಹು ಪೋಷಿ- ।
ಸುತ ಪಾರಣೆಗೆ ಹೊತ್ತು ವೃಥ ಕಳವವಗೆ ೧೦

ಅನಿವಾರ್ಯ ಬರಲು ಸಾಧನಿಗೆ ತೀರ್ಥವ ಕೊಂಡು ।
ಅನುಮಾನ ಮ್ಯಾಲೆ ಭೋಜನಕೆ ಮಾಡುವಗೇ ೧೧

ಮಂಕುಬುದ್ಧಿಯಲಿಂದ ಸಂಕಟಲ್ಲದೆ ತೀರ್ಥ- ।
ಮಂ ಕೊಂಡು ಸಾಧನಿಯಂಕ ತೋರುವಗೇ ೧೨

ಸತಿಗೆ ಶ್ರಾದ್ಧವ ಮಾಳ್ಪ ಸುತಗೊಡಿಯನ ಸೇವೆ ।
ರತಗೆ ಸಂಕಟವೆನ್ನದತಿ ಮೂಢ ನರಗೇ ೧೩

ಈರಾರು ದಿನ ಹದಿ ಮೂರು ಘಳಿಗಿ ವಿಷ್ಣು ।
ತಾರವಿದ್ದರೆ ನೀರಾಹಾರ ಮಾಡದಿರೆ ೧೪

ದ್ವಯ ಪಕ್ಷದಲಿ ತಿಥಿತ್ರಯ ಸಮನಾಗೇವೆ ।
ಭಯಹಾರ ವ್ರತವೆನ್ನದವಿವೇಕಿಗಳಿಗೇ ೧೫

ತಿಥಿತ್ರಯದಲಿ ಮಾತು ಪಿತು ಸ್ವರ್ಗವೈದಾಲು ।
ರತಿ ಇಂದೋಪನ ವಾಹ ಪತಿತ ಮಾನವಗೇ ೧೬

ಅನಳಗಾಹುತಿ ಶ್ರಾದ್ಧ ಅನಿಮಿಷಾದ್ಯರಿಗೆ ತ- ।
ರ್ಪಣ ಕೃಷ್ಣಾಷ್ಟಮಿ ಹರಿದಿನದಿ ಮಾಡುವಗೇ ೧೭

ಸಮಿರ ಮತಸ್ಥಾನು ಅಮರ ಲೋಕೈಯದಾರೆ ।
ವಿಮಸ್ಥನಿಂದಲಾ ಕ್ರಮವ ಮಾಡಿಸಿದರೆ ೧೮

ದಶಿಮಿ ಶಿವನಿಸಿ ದ್ವಾದಶಿ ಸಾಂಧನಿಶ್ರಾದ್ಧ ಸಂ- ।
ಧಿಸಿರೆ ವಿಷ್ಣೋಪವಾಸ ಎಸಗುವವನಿಗೆ ೧೯

ಅನಿರುದ್ಧಗರ್ಪಿಸಿ ಅನುದಿನದಲ್ಲಿ ಪ್ರಾ- ।
ಣನಿಗರ್ಪಿಸದಲುಂಬ ಮನುಜಾಧಮರಿಗೇ ೨೦

ಪ್ರಾಣೇಶ ವಿಠಲಾನ ಧ್ಯಾನದೊಳಿರುತಿಪ್ಪ ।
ಪ್ರಾಣದೇವರ ಉಕ್ತಿಯಾ ನಂಬದವಗೇ ೨೧

## ಉಗಾಭೋಗ

### ೨೩೧

ನಿರುಮಲೋದಕ ವೆರಿಯಲಘ ದಶ
ಹರವು ಕ್ಷೀರಕೆ ಶತದಧಿಗೆ ಸಾ
ವಿರ ಮಧುವಿನಿಂದ್ಹತ್ತು ಸಾವಿರ ಘೃತಕೆ ಲಕ್ಷ ಹರಾ ॥
ನೆರೆಗುಡದಿ ದಶಲಕ್ಷ ಟೆಂಗಿನ
ವರಜಲದಿ ಶತಲಕ್ಷ ಗಂಧಜ-
ಲೆರಿಯ ಪ್ರಾಣೇಶ ವಿಠಲ ಪಾಪನಾಶನವೂ ೧

## ಉಗಾಭೋಗ

### ೨೩೨

ನಾಲ್ಕು ಕರ್ಣದೊಳೊಂದು ಮುಖದೊಳ
ಗೇಕ ನಾಭಿಯೊಳೊಂದು ಶಿರದಲಿ
ಶ್ರೀ ಕರಾರ್ಚಿತ ಪದ ಜಲದಿತ್ರಯ ಅನ್ನದೊಳಗೈದೂ ॥
ಹಾಕುವದು ಮೂರ್ಭೋಜನೋತ್ತರ
ಸ್ವೀಕರಿಪದಿಂತಷ್ಟ ದಶ ದಳ ।
ಶೋಕಹರ ಪ್ರಾಣೇಶ ವಿಠಲಗೆ ಅರ್ಪಿಸಿದ ತುಲಸೀ ೧

## ಉಗಾಭೋಗ

### ೨೩೩

ಅಪ್ರವಹ ಜಲಸ್ನಾನ ಪಾದಾಭಿಷೇಚನವು
ವಿಪ್ರರಿಗೆ ಗಾಯತ್ರಿ ಅರ್ಘ್ಯವನ್ನೂ ॥
ಅಪ್ರಾಕೃತಾಂಗ ಪ್ರಾಣೇಶ ವಿಠ್ಠಲನವರು
ಸುಪ್ರಭಾಕರನ ಎದುರಿಗೆ ಮಾಳ್ಪುದೂ ೧

## ಉಗಾಭೋಗ

### ೨೩೪

ಕಡ್ಡಿ ಮೇಯಂದೂ ತುಡುಗು ಹೋಗಾಲರಿಯದಂಥಾ ।
ದೊಡ್ಡಾ ಆಕಳ ಕರವಾ ಹಗ್ಗಾದಿಂದಾ ॥
ದುಡ್ಡಿನಗಲಾ ಠಾವಿನೊಳಗೆ ಕಂಭಕೆ ಕಟ್ಟೀ ।
ವಡ್ಡಿ ಕಾವಲಿಯೊಳು ಮಂದಿ ಇಟ್ಟಿಹ್ಯನೂ ೧

## ಉಗಾಭೋಗ

### ೨೩೫

ಅಲ್ಪ ಧರ್ಮವು ಜ್ಞಾನದಿಂದ ಮಾಡಲು ಬ್ರಹ್ಮ ।
ಕಲ್ಪ ಪರಿಯಂತ ಸುಖವುಂಟು ನರಗೇ
ಸ್ವಲ್ಪೇತರ ತಿಳಿಯದೆ ಮಾಡಲ್ ಫಲವು ಭುಜಗ
ತಲ್ಪಿ ಪ್ರಾಣೇಶ ವಿಠಲ ಮೆಚ್ಚನೂ
ಧಡ್ಡಾನಲ್ಲಾವು ಶ್ರೀ ಪ್ರಾಣೇಶ ವಿಠ್ಠಲನಾಟಾ ।
ಮಡ್ಡಾರರಿಯಾರಿದನೂ ಬಲ್ಲಾರು ಕವಿಗಳೂ ೧

## ಉಗಾಭೋಗ

### ೨೩೬

ಒಂದಾರೊಳುಂಟೆ ಒಂದರೊಳಾ ಘನ್ನೆರಾಡೆನೂ ।
ವಂದಾರೊಳೆರಡೊಂದೊಂದರೊಳೊಂದೆನೂ ।
ಇಂದಿರೇಶಾರಲ್ಯಾವ ನಾಮಾದಲಿಪ್ಪರು ಆ ।
ನಂದ ತೀರ್ಥಾರಾವ ನಾಮದಲಿಪ್ಪರೂ ।
ವೃಂದಾರಕರು ಅಲ್ಲೆಲ್ಲಿರುತಿಹರೂ ಹದಿನೆಂಟೂ ।
ಮಂದಿ ಶಿರಿಕೇಶವಾ ಇರುತಿಹರೂ ।
ಎಂದೂ ತಿಳಿಯದವ ಬಾಳಲ್ಯಾತಕೆ ಹದ್ದಿ- ।
ನಂದಾದಿ ಬಹುಕಾಲಾ ವ್ಯರ್ಥವಾಗೀ ।
ಶಿಂಧುಶಯನ ಶ್ರೀ ಪ್ರಾಣೇಶ ವಿಠ್ಠಲಾ ಅವ- ।
ಗೆಂದೆಂದು ಒಲಿಯಾನು ಕೇಳಿ ಸಜ್ಜನರೂ ೧

## ಉಗಾಭೋಗ

### ೨೩೭

ಪದ ಕಟಿ ಬೆರಳು ಕಂಠ ಕಿವಿ ಪುಬ್ಬು ಸಂಣವಾರು ।
ಅಧರ ಕದಪು ರದನಖ ಗುಂಹ್ಯ ದರ ತಿಳುಪಾರು ।
ಹೃದಯ ಜಘನಾಕ್ಷ ನಾಸಿಕ ಊರು
ಕೇಶಗಳಾರು ದೊಡ್ಡವು ಈ ಪರೀ ॥
ಪದಿನೆಂಟು ಶುಭಲಕ್ಷಣಗಳೊಪ್ಪುತಿಹವು ದ್ರೌ ।
ಪದಿಗೆ ಪ್ರಾಣೇಶ ವಿಠಲನ ಕರುಣಬಲದಿ ಭವ ।
ಮೊದಲಾದವರಿಗೆ ಒಡತೆಂದಿವಳ ಮಹಿಮಿ ಬಹು ಶೃತಿ
ಸ್ಮೃತಿಗಳಲಿ ಪೇಳ್ವದೂ ೧

## ಉಗಾಭೋಗ

### ೨೩೮

ವಾಸುದೇವನು ಶುಕ್ಲ ಶ್ರೀ ಶಾಂ– ।
ತೀಶ ನೀಲಜಯೇಶ ಪಿಂಗಳ ।
ದೋಷಹರ ಶ್ರೀ ಪ್ರದ್ಯುಮ್ನ ಹರಿ ತಾಭಾ– ॥
ಮೇಶ ನಾರಾಯಣನು ಲೋಹಿತ ।
ಈ ಸುರೂಪದಿ ಪಂಚನಾಡಿ ಸು– ।
ಕೋಶ ನಳ ಪ್ರಾಣರೊಳಗಿಹ ಪ್ರಾಣೇಶ ವಿಠ್ಠಲನೂ ೧

## ಉಗಾಭೋಗ

### ೨೩೯

ಪ್ರಥಮ ಪೂಜೆ ಆವಾಹನ ಆಸನ ।
ದ್ವಿತಿಯ ಪಾದ್ಯ ತೃತಿಯರ್ಘ್ಯ ನಾಕು ಸ್ನಾನ ।
ತುತಿಪಾದು ಐದೆಂದು ವಸನಾ ರೂಪವಿತೇಳು ।
ಅತಿ ಸುಗಂಧಷ್ಟ ಸುಮನನವ ದಶಧೂಪ ।
ಚತುರದೀಪ್ಪನ್ನೊಂದು ನೈವೇದ್ಯ ದ್ವಾದಶ ।
ತೃತಿದಶ ಆಚಮನವು ಸುಫಲಂಗಳು ।
ಚತುರ್ದಶ ತಾಂಬೂಲ ಹದಿನೈದು ಹದಿನಾರು ।
ಮತಿವಂತರರಿವದು ಸುಪ್ರದಕ್ಷಿಣೆಯೆಂದೂ ।
ಪತಿತ ಪಾವನ್ನ ಶ್ರೀ ಪ್ರಾಣೇಶ ವಿಠ್ಠಲಗೆ ಸಂ– ।
ತತ ಷೋಡಶೋಪಚಾರ ಪೂಜೆಗಳು ಇವೆ ।
ವೃತಿಗಳೆಲ್ಲರು ಮೆಚ್ಚು ಪಂಚರಾತ್ರಾಗಮಾ ।
ನುತಿಪದು ಅತಿ ಗೌಪ್ಯ ಸೊಲ್ಲಿವಕೊ ೧

# ಶ್ರೀ ಪ್ರಾಣೇಶದಾಸರ ಸಂಪ್ರದಾಯದ ಹಾಡುಗಳು

## ೨೪೦

### ಶ್ರೀದೇವರ ವಿವಾಹ ಮಹೋತ್ಸವದ ಪದಗಳು

ಏನು ನೋಡಿತ್ತ ನೀ ವರಕೆ ಮಗಳಾ ।
ಹೀನವಳಿತೆನ್ನದಲೆ ತ್ವರದಿ ಜಲನಿಧಿಯೂ ಪ

ಕಪ್ಪು ರೂಪವು ಇವನ ನೆಲಿ ಒಬ್ಬರರಿಯರೂ ।
ಸರ್ಪಶಯನನು ತಿರಿದುಕೊಂಡು ತಿಂಬಾ ॥
ಮುಪ್ಪಿನವ ಇವ ಹುಟ್ಟಿದುದನಾರು ಬಲ್ಲವರು ।
ತಪ್ಪಿ ಕೊಟ್ಟನೆ ಎಲ್ಲರನು ಜರಿದು ಹೀಂಗೇ ೧

ಕದ್ದು ಪೊಟ್ಟೆಯ ಪೊರೆವ ಎಂಜಲೆನ್ನದೆ ತಿಂಬ ।
ಹದ್ದನೇರುವ ಅಡವಿಯೊಳು ಚರಿಸುವಾ ॥
ಬುದ್ಧಿಹೀನರ ತೆರದಿ ಹಡದವಳ ಶಿರ ಕಡಿದ ।
ಸದ್ಯ ವಸನವ ಕಳದು ಬತ್ತಲಿರುವವಗೇ ೨

ಹೇಸಿಕಿಲ್ಲದೆ ಕರಳ ಮಾಲಿಕಿಯ ಹಾಕಿಹನು ।
ದೋಷಕಂಜನು ಜಾರತನವ ಮಾಳ್ಪಾ ॥
ದಾಸನಂದದಿ ಬಲಿಯ ಮನಿಯ ಬಾಗಿಲ ಕಾಯ್ದ ।
ಆ ಸವ್ಯಸಾಚಿ ತೇರಿಗೆ ಸೂತನಾದವಗೆ ೩

ಹೆಣ್ಣುಗಳ ಅಂಬರವ ಕೊಂಡು ಮರನೇರುವನು ।
ತನ್ನ ಮಕ್ಕಳ ತಾನೆ ಹತಗೈಸುವಾ ॥

ಮಣ್ಣನೂ ಬೆಂಕಿಯನು ತಿಂಬ ಪಾವಿಯನರಿಯ ।
ತನ್ನ ಪುತ್ರರಿಗೆ ತನ್ನಯ ಮಕ್ಕಳಿತ್ತವಗೆ ೪

ಪ್ರಾಣೇಶ ವಿಠಲನಲ್ಲಿಹವಿಂಥ ಸುಗುಣಗಳು ।
ತಾನೊಂದು ಪೂರ್ತಿ ತಿಳಿಯನು ಸಮುದ್ರಾ ॥
ಶ್ರೀ ನಾರಿಯನು ಕೊಟ್ಟ ಅವನ ಬುದ್ಧಿಯೊ ಅಥವ ।
ಏನು ವ್ರತ ಸೇವಿಸಿದ್ದಳೊ ಕಮಲ ಮಂದಿರಿಯು ೫

## ೨೪೧

ವರುಣಗೂ ನಾರಾಯಣಗು ನೆಂಟತನ ಮಾಡುವದಕೆ ।
ಸರಿಯೆ ಸಂದೇಹವೇನು ಸಮ್ಮೀಸಿ ನೋಡಿರಿ ಪ

ಹೆಂಡಾರು ಬಹು ಮಂದಿ ಜಾರಾ ಪುತ್ರನು ಒಬ್ಬ ।
ಪಂಡೀತ ಮಗನೊಬ್ಬ ಸಮನೆಲ್ಲಿ ನೋಡಿ ೧

ವಂಶಾ ವಂದೆ ಇಬ್ಬರದು ಛಲದಿಂದ ಕೊಲ್ಲುವಂಥಾ ।
ಕೂಸು ಪಾಲಿಸಿದಾರು ಸಮನೆಲ್ಲಿ ನೋಡಿ ೨

ಸ್ಥೂಲಾ ವಿಗ್ರಹದವರು ಜಡ ಚೇತನಗಳಿಗೆ ।
ಆಲಯವಾಗಿಹರು ಸಮನೆಲ್ಲಿ ನೋಡಿ ೩

ಕನಕಾ ಭೂಮಿ ವಜ್ರದಾಹಾರ ಒಬ್ಬಾಗೊಬ್ಬಾಗೆ ।
ವನಮಾಲಿ ವೈಜಯಂತಿ ಸಮನೆಲ್ಲಿ ನೋಡಿ ೪

ತುಳಿಸೀಕೊಂಡೂ ಕೋಪಿಸದೆಲೆವೇ ಹಿಗ್ಗಿದಾರು ।
ಕಲುಷಾ ವಿದೂರ ರೂಪ ಸಮನೆಲ್ಲಿ ನೋಡಿ ೫

ದ್ವಾರಕ ಪಟ್ಟಣವ ಪ್ರೀತಿಂದ ಪಾಲೀಸೀ ।
ಹಾರಾವ ಮಾಡಿದಾರು ಸಮನೆಲ್ಲಿ ನೋಡಿ ೬

ವೃದ್ಧಿ ಹ್ರಾಸಗಳಿಲ್ಲಾ ಅನ್ನಾದಾಪೇಕ್ಷವಿಲ್ಲ ।
ನಿದ್ರಾ ಶೂನ್ಯರಾಗಿಹರು ಸಮನೆಲ್ಲಿ ನೋಡಿ ೭

ಸರಸೀಜಾ ರೂಪ ಉಳ್ಳವರು ಪೂರ್ತಿ ಮಾಡಿದಾರು ।
ಸುರರಾ ಮನೋಭೀಷ್ಟಿಯಾ ಸಮನೆಲ್ಲಿ ನೋಡಿ ೮

ವಿಧಿಯಿಂದ ಜನಿಸಿದಾರು ಜನರೀಗಸಹ್ಯವಾಗಿ ।
ಒದರುವರು ಇದರಿಂದ ಸಮನೆಲ್ಲಿ ನೋಡಿ ೯

ನೂತನ ಯಜ್ಞೋಪವೀತಾವ ಧರಿಸುವರು ಪ್ರ- ।
ಖ್ಯಾತಿ ವಸ್ತು ಕೊಟ್ಟಾರು ಸಮನೆಲ್ಲಿ ನೋಡಿ ೧೦

ದಾರಿ ತೋರಿದಾರು ವಾನರಾಗಳಿಗೆ ಗುಂಜಿ ।
ಹಾರಾಯೀಸೂವರಿದು ಸಮನೆಲ್ಲಿ ನೋಡಿ ೧೧

ವಾಸಾವಿವರ್ಜಿತಾರು ದ್ವೇಷಿಗಳ ಶರೀರ ।
ನಾಶಾಗೈಸಿದರಿದು ಸಮವೆಲ್ಲಿ ನೋಡಿ ೧೨

ಶೋಧಿಸೀ ನೋಡಿದಾರೆ ಕರ್ದಾಮ ಜಾಲಯಳ ।
ಭ್ಯೋದಯಕ್ಕೆ ಕಾರಣರು ಸಮವೆಲ್ಲಿ ನೋಡಿ ೧೩

ಧರಿಗಾನಂದಾವಿತ್ತಾರಾಲಂಕಾರವಾಗಿ ಖಳರಾ ।
ತರಿದು ಭಾರವ ಕಳದು ಸಮವೆಲ್ಲಿ ನೋಡಿ ೧೪

ಶ್ರೀನಿವಾಸಾಗೆ ಮಾವನೀತಾ ನೀತಾಗು ಹಾಗೆ ।
ಪ್ರಾಣೇಶ ವಿಠ್ಠಲನು ಸಮವೆಲ್ಲಿ ನೋಡಿ ೧೫

## ೨೪೨

ಜಲಧಿ ತಕ್ಕದೊ ನಿನ್ನಳಿಯಗೂ ನಿನಗೂ ।
ಹಲವು ಬಗೆಯಿಂದಲಿ ಪರೀಕ್ಷಿಯನು ಮಾಡಿದರೆ ಪ

ಮೊದಲೆ ತಿಳದಷ್ಟು ನಿನ್ನ ಮಹತ್ಮಿ ವರ್ಣಿಸುವೆ ।
ತುದಿಗಂಡು ಬಲ್ಲೆನೇ ಅಧಮ ನಾನೂ ॥
ಎದುರಿಗಂಬುವದಾಡಿಕೊಂಡ ಬಗೆ ಬ್ಯಾರೆಲ್ಲೀ ।
ಮುದದಿಂದ ದಯಮಾಡಿ ಕೇಳೊ ರತ್ನಾಕರನೇ ೧

ನಿನ್ನಿಂದ ಹುಟ್ಟಿಹುದು ವಿಷವು, ಗುರುವಿನ ಪತ್ನಿ ।
ಯನ್ನು ಸ್ವೀಕರಿಸಿದನು ನಿನ್ನ ಮಗನೂ ॥
ಘನ್ನತರ ಮಕರಾದಿಗಳು ನಿನ್ನ ಪರಿವಾರ ।
ಇನ್ನೆಷ್ಟು ಪೇಳಲಿ ಚರಿತ್ರ ಪಾರಾವಾರ ೨

ನಿನ ಒಡಲಿಗೆಷ್ಟಾದರನ್ನ ಸಾಕೆನಿಸದೂ ।
ದಣಿದು ಬಂದವರಿಗಾಶ್ರಯವು ಕಾಣೇ ॥
ಉಣಲಿಕ್ಕೆ ಅನ್ನೆಂಬದೆಂಟನೆ ರಸದಂತೆ ।
ಘನ ಖ್ಯಾತಿ ದೂರದಲಿ ಬಳಿಗೆ ಬರಲಿಂತಿಹದು ೩

ಪ್ರೀತಿಯಂ ಬಂದವರು, ಗ್ರಹಣ ವೈಧೃತಿ ವೇತೀ ।
ಪಾತದಲಿ ನಿನ ದರುಶನಾಗಬೇಕೂ ॥
ಭೂತ ಬಡದವರಂತೆ ನಿನ್ನ ಕಲ್ಲುಗಳಿಂದ ।
ಘಾತಿಸಲಿ ಬೇಕು ನೋಡಲ್ಕೆ ಬಹು ಸೋಜಿಗವು ೪

ತುಳಿದದಕೆ ಹಿಗ್ಗಿದಿಯೋ ಬಹುಮಾನಿ ನೀನೆಲವೊ ।
ಲಲನಿ ಹಡದೇಳು ಶಿಶುಗಳ ಕೊಂದಳೂ ॥
ಬಲು ಭಂಟ ಹಿರಿಯಮಗಗರಸುತನ ಕೊಡಲಿಲ್ಲ ।
ಇಳಿಯೊಳಗೆ ನೀ ಮಾಡಿದನ್ಯಾಯಕೆಣಿಯುಂಟೆ ೫

ಸತಿಸಂಗ ಬಿಡಲೊಲ್ಲಿ ಪರ್ವಕಾಲಗಳಲ್ಲಿ ।
ಸುತಗೆ ಕಡಿಮೆದರಿಂದೆ ಆದಿ ಹ್ಯಾಗೊ ॥
ಪತಿವ್ರತಾ ಮಗಳಾದಳೊಂದೆ ಸುಗುಣದರಿಂದೆ ।
ಕ್ಷಿತಿಯೊಳನವರತ ಪೂಜಿಸಿಕೊಂಬಿ ಜನರಿಂದ ೬

ಜಾಮಾತನಿಗೆ ಇಹವು ಮುಖವು ಹತ್ತೊಂಬತ್ತು ।
ಆ ಮಧ್ಯ ಗಜಲಪನದಂತೆ ಒಂದೂ ॥
ಭೂಮಿಯೊಳಗಾಶ್ಚರ್ಯ ತಾನೆ ಮಕ್ಕಳ ಪಡೆವ ।
ಈ ಮಗಳು ಬಹುಸುಖವ ಬಡುವಳಿವನಿಂದಲ್ಲಿ ೭

ಬೆರಳು ಚೀಪುವ ನೋಡು ಸುಳ್ಳಲ್ಲ ದಾನ ।
ಪುರುಷ ಬದುಕುವ ಚೋರತನದಿ ಜಾರಾ ॥
ತರುಣಿಯಾಗಿದ್ದ ನಿನ ಬಳಿಯಲ್ಲಿ ನೀ ಬಲ್ಲಿ ।
ತುರುಗಾಟವ ಕೊಡಲಿ ಕೊಂಡಡವಿಯೊಳಗಿರುವ ೮

ಗುರುಸ್ವಾಮಿ ಪಿತ ಬ್ರಹ್ಮ ವಂಶದ್ರೋಹಿಗಳವನ ।
ಪರಿವಾರ ಮಕ್ಕಳಿಗೆ ಮಾವನಾದಾ ॥
ಉರುಗ ಶಯನಂಡಜಾಧಿಪ ವಹನ ನೀಲಾಂಗ ।
ಅರಿತ ನೃಪ ಋಷಿಗಳೊಳಗೊಬ್ಬರಿಗ್ಯು ಮಗನಲ್ಲ ೯

ಕುಲಸೂತ್ರವಿಲ್ಲ ಒಂದೇ ರೂಪನಲ್ಲ ನಿ- ।
ಶ್ಚಲನಲ್ಲ ವತಿ ಕಠಿಣ ವಕ್ರವದನಾ ॥
ಬಲು ಕೋಪಿ ತಿರದುಂಬ ಸ್ತ್ರೀಯರಿಬ್ಬರ ಕೊಂದ ।
ಅಲವ ಜಾರನು, ಬತ್ತಲಿರುವ, ಕಲಹಕೆ ಪ್ರೀಯ ೧೦

ಕೊಟ್ಟೆಲ್ಲ ಅವನಿಗೀ ಕನ್ನಿಕೆಯ ಸವತಿಯರು ।
ಎಷ್ಟೋ ಮಲಸುತರಿಹರದಕೆ ದಶ ಮಡೀ ॥
ಸಿಟ್ಟಾಗ ಬ್ಯಾಡವನ ವಾರ್ತಿ ಕೇಳಲು ಜನರು ।
ಬಿಟ್ಟು ಸಂಸಾರವೆಂದಿಂದಿಗೊಲ್ಲದಿಹರೂ ೧೧

ನಿನ್ನ ಮಗಳವನಿತ್ತವನ ಮಗಳ ಮದಿವ್ಯಾದಿ ।
ಕನ್ಯ ವಿಕ್ರಯ ಪರಸ್ಪರವೆನಿಸಿತೂ ॥
ಇನ್ನೇಸೊ ನಿಮ್ಮ ನಿಮ್ಮಲ್ಲಿದ್ದ ನಡತಿಗಳು ।
ಅನ್ಯರಿದು ಕೇಳಿ ಭಜಿಸರೊ ಶುದ್ಧ ಭಕುತಿಯಲೀ ೧೨

ಏನಾದರೇನು ಶ್ರೀ ಪ್ರಾಣೇಶ ವಿಠಲನಿಗೆ ।
ನೀನೆ ಗತಿ ನಿರ್ದೋಷ ವಸ್ತುವೆಂದೂ ॥
ಶ್ರೀನಳಿನ ಭವ ಮುಖರು ನಿತ್ಯ ವಂದಿಸುತಿಹರೊ ।
ನೀನವನ ಮಾವನಾದಿನ್ನು ಪೂಜಿತನಲ್ಲೆ ೧೩

## ೨೪೩

## (ಒರಳುಕಲ್ಲು ಪೂಜೆಯ ಪದ)

ಜಯ ಹನುಮಂತ ಭೀಮ । ಜಯ ಸರ್ವಜ್ಞಾಚಾರ್ಯ ।
ಜಯ ಭಾರತೀಶಾ ನಿರ್ದೋಷಾ ॥ ನಿರ್ದೋಷ ಶ್ರೀ ವ್ಯಾಸ
ಲಯನೆ ನಿನ್ನಂಘ್ರೀಗೆರಗೂವೆ । ಸುವ್ವಿ ಸುವ್ವೀ ಸುವ್ವಾಲಾಲೆ ಪ

ಮುದದಿಂದಾ ಶ್ರೀ ಹರಿಯಾ । ಮದಿವಿ ಹಮ್ಮಿಕೊಂಡು ।
ಪದುಮಾಕ್ಷಿಯರೆಲ್ಲಾ ಒರಳೀಗೇ ॥ ಒರಳಿಗಕ್ಕಿ ಹಾಕಿ
ಪದ ಪಾಡಿದದನೂ ಬಣ್ಣಿಪೇ ೧

ದೇವಕಿ ಯಶೋದೆ ಶ್ರೀ । ದೇವಭೂತೇ ಕೌಸಲ್ಯ ಸ– ।
ತ್ಯವತಿ ನೀವೆಂಥ ಧನ್ಯರೇ ॥ ಧನ್ಯಾರೆ ಪಡದು ಶ್ರೀ ।
ದೇವೇಶಗೆ ಮೊಲಿಯಾ ಕೊಡುವೀರಿ ೨

ಅಕ್ಷರಳೆ ಪರಮಾತ್ಮನ । ವಕ್ಷ ಸ್ಥಳ ಮಂದಿರೆ ।
ಲಕ್ಷೂಮಿದೇವಿ ಜಯಶೀಲೆ ॥ ಜಯಶೀಲೆ ಎಮ್ಮನು ।
ಪೇಕ್ಷಿಸಿದೆ ಕಾಯೇ ವರವೀಯೇ ೩

ಅಚ್ಚಿನ್ನ ಭಕ್ತರು ನೀವಚ್ಯುತಗೆ ಮುಕ್ತಿಯಾ ।
ತುಚ್ಛವೆಂಬುವಿರೆ ಸರಸ್ವತೀ ॥ ಸರಸ್ವತಿ ಭಾರತಿ ।
ನಿಶ್ಚೈಸಿ ಒರಳೀಗೊದಗೀರೆ ೪

ಅಕ್ಕಿ ಥಳಿಸಲಿ ಬಾರೆ । ಅಕ್ಕ ಸೌಪರಣಿ ಶ್ರೀ ।
ರಕ್ಕಸಾ ವೈರೀ ಮದುವೀಗೇ ॥ ಮದುವೀಗೆ ವಾರುಣಿ
ತಕ್ಕೊಳ್ಳೆ ಕೈಲಿ ಒನಕೀಯಾ ೫

ಕೂಸಾಗಿ ಇದ್ದಾಗ ಆ ಶಿವನೆ ಬರಲೆಂದು ।
ಪೋಷಿಸಿದೆ ದೇಹಾ ತಪಸೀದೆ ॥ ತಪಸೀದೆ ಪಾರ್ವತಿ
ನೀ ಶೀಘ್ರ ಬಾರೇ ಒರಳೀಗೆ ೬

ಇಂದ್ರ ಕಾಮನ ಸತಿ ಯಾರಿಂದು ಬನ್ನಿರಿ ನಮ್ಮ ।
ಮಂದರೋದ್ಧರನಾ ಮದಿವೀಗೇ ॥ ಮದುವೀಗೆ ಒರಳಕ್ಕಿ ।
ಛಂದದಿಂದಲಿ ಪಾಡಿ ಥಳಿಸೀರೇ ೭

ಶತರೂಪಿ ನೀ ಪ್ರೀಯ ವ್ರತ ಮೊದಲಾದವರನ್ನ ।
ಪತಿಯಿಂದ ಪಡದೂ ಅವನೀಯಾ ॥ ಅವನೀಯ ಪಾಲಿಸಿದ
ಪತಿವ್ರತೀ ಒನಕೀ ಕೈಕೊಳ್ಳೇ ೮

ದೇವರಂಗನಿಯರಿಗೆ ಸಾವಧಾನದಿ ಜ್ಞಾನ ।
ನೀ ವರದೇ ಎಂಥಾ ಗುಣವಂತೇ ॥ ಗುಣವಂತೆ ಕರುಣಾಳೆ
ಪ್ರಾವಹೀ ಪಿಡಿಯೇ ಒನಕೀಯಾ ೯

ಅರುವತ್ತು ಮಕ್ಕಳನಾ ಹರುಷದಿಂದಲಿ ಪಡದು ।
ವರ ನೋಡಿ ಕೊಟ್ಟೀ ಪ್ರಸೂತೀ ॥ ಪ್ರಸೂತಿ ನೀನು
ಹಂದರದ ಮನಿಯೊಳೂ ಇರಬೇಕೂ ೧೦

ಗಂಗಾದೇವಿ ಯಂಥ ಇಂಗಿತಜ್ಞಳೆ ನೀನು ।
ಹಿಂಗಿಸಿದೆ ವಸುಗಳಪವಾದಾ ॥ ಅಪವಾದ ತ್ರಯ ಜಗ–
ನ್ಮಂಗಳೇ ಪಿಡಿಯೇ ಒನಕೀಯಾ ೧೧

ಅನಿರುದ್ಧಾಶ್ವಿನಿ ಚಂದ್ರ ಇನಕಾಲಾ ಸುರಗುರು ।
ವನತಿಯರೆ ಉಳಿದಾ ನವಕೋಟೀ ॥ ನವಕೋಟಿ ಸುರರ
ಮಾನಿನಿಯೇರು ಬಂದೂ ಥಳಿಸೀರೇ ೧೨

ಅನ್ಯರನ ಪಾಡಿದರೆ ಬನ್ನ ಬಡಿಸುವ ಯಮನು ।
ವನ್ನಜಾಂಬಕನಾ ಶುಭ ನಾಮಾ ॥ ಶುಭನಾಮ ಪಾಡಿದರೆ
ಧನ್ಯರಿವರೆಂದೂ ಪೊಗಳೂವಾ ೧೩

ಈ ವ್ಯಾಳ್ಯದಲಿ ನೋಡಿ ನಾವು ಥಳಿಸೀದಕ್ಕಿ ।
ಪಾಪನ್ನವಾಗೀ ತ್ವರದಿಂದಾ ॥ ತ್ವರದಿಂದ ನಮ್ಮ ಶ್ರೀ
ಗೋವಿಂದನ ಶಾಸೀಗೊದಗಲೀ ೧೪

ಹೆಚ್ಚಿನಂಬರ ಉಟ್ಟು ಅಚ್ಚಿನ ಕುಪ್ಪುಸ ತೊಟ್ಟು ।
ಪಚ್ಚಾದಿ ರತ್ನಾಭರಣಿಟ್ಟೂ ॥ ಇಟ್ಟು ಸುಸ್ವರಗೈದು
ಅಚ್ಯುತನ ಪಾಡೋರಿನಿತೆಂದೂ ೧೫

ಲಕ್ಷೂಮಿ ಪತಿಯಾಗಿ ಬಹು ಮಕ್ಕಳನ ಪಡದಿದ್ದಿ ।
ಇಕ್ಕೊಳ್ಳಿ ಈಗಾ ಮದುವ್ಯಾಕೇ ॥ ಯಾಕೊನತರಾನಂದ
ಉಕ್ಕೀಸುವದಕೆ ರಚಿಸೀದ್ಯಾ ೧೬

ಎಂಂದಾಗೆದೊ ಶ್ರೀ ಮುಕುಂದ ನಿನ್ನಾ ಮದುವಿ ।
ಹಿಂದಿನಾ ಬ್ರಹ್ಮರರಿತಿಲ್ಲಾ ॥ ರರಿತಿಲ್ಲ ಅವಿಯೋಗಿ
ಎಂದು ಕರಸುವಳು ಶೃತಿಯೋಳೂ ೧೭

ಶೀಲಿ ಸುಂದರಿ ನಿನ್ನ ಆಳಾಗಿ ಇರುವಳು ।
ಶ್ರೀ ಲಕ್ಷ್ಮೀ ನೀನು ಸ್ವರಮಣಾ ॥ ಸ್ವರಮಣನಾಗೆವಳ
ಮ್ಯಾಲೆ ಮದುವ್ಯಾಕೊ ಭಗವಂತಾ ೧೮

ಆರು ಮಹಿಷಿಯರು ಹದಿನಾರು ಸಾವಿರ ಮ್ಯಾಲೆ ।
ನೂರು ನಾರಿಯರೂ ಬಹುಕಾಲಾ ॥ ಬಹುಕಾಲ ಬಯಸಿದ್ದು
ಪೂರೈಸಿ ಕೊಟ್ಯೋ ದಯಸಿಂಧು ೧೯

ವೇದನೆಂಥಾ ಪುತ್ರ ವೇದನಂತಾ ಬಲ್ಲ ।
ವೋದುವಾ ನಿರುತಾ ನಿನ ಪೌತ್ರಾ ॥ ಪೌತ್ರೌ ನಿಮ್ಮಣ್ಣ ಸ್ವ-
ರ್ಗಾಧಿಪತಿ ಎಂದೂ ಕರಸೂವ ೨೦

ಜಗವ ಪಾವನ ಮಾಳ್ಪ ಮಗಳೆಂಥ ಗುಣವಂತಿ ।
ಅಗಣಿತ ಜ್ಞಾನವಂತಾರೊ ॥ ಜ್ಞಾನವಂತರೊ ನಿನ್ನ
ಯುಗಳ ಸೊಸಿಯರೂ ಪರಮಾತ್ಮಾ ೨೧

ಈ ವಸುಧಿಯೊಳಗೆಲ್ಲಾ ಆವ ಶುಭ ಕಾರ್ಯಕ್ಕೂ ।
ದೇವೇಶ ನಿನ್ನಾ ಸ್ಮರಿಸೋರೋ ॥ ಸ್ಮರಿಸುವರೊ ನಿನ ಮದುವಿ-
ಗಾಂವೀಗ ನಿನ್ನೇ ನೆನೆವೇವೊ ೨೨

ಅಕ್ಲೇಶಾ ಅಸಮಂಧಾ ಶುಕ್ಲ ಶೋಣಿತ ದೂರಾ ।
ಹಕ್ಲಾಸುರಾರೀ ದುರಿತಾರೀ ॥ ದುರಿತಾರಿ ಅಸಮ ನಿ-
ನ್ನೊಕ್ಲಾದವರಗಲೀ ಇರಲಾರೀ ೨೩

ವೇದವೆಂಬದು ಬಿಟ್ಟು ಭೂ ದಿವಿಜಾರಮರಾರು ।
ಮಾಧವನ ಗುಣವಾ ಪೊಗಳೂವಾ ॥ ಮೊಗಳುವಾ ಸುಸ್ವರವಾ
ಶೋಧಿಸೀ ಕೇಳೂತಿರುವಾರೂ ೨೪

ಕಾಮಾದಿಗಳ ಬಿಟ್ಟು ಸೋಮಪರ ರಾಣಿಯರು ।
ಸ್ವಾಮಿಯ ವಿವಾಹಾ ನಾಳೆಂದೂ ॥ ನಾಳೆಂದರಿಷಿಣದಕ್ಕೀ
ಹೇಮಾಧರಿವಾಣಕ್ಕಿರಿಸೋರೂ ೨೫

ಜಯ ಮತ್ಸ್ಯ ಕೂರ್ಮಾ ಕಿಟಿ ಜಯ ನರಸಿಂಹಾ ಋಷಿಜ ।
ಜಯ ರಾಮಕೃಷ್ಣಾ ಶ್ರೀ ಬುದ್ಧಾ ॥ ಶ್ರೀ ಬುದ್ಧ ಕಲ್ಕಿ ಜಯ
ಜಯ ದತ್ತಾತ್ರಯ ಶುಭ ಕಾಯಾ ೨೬

ಆನಂದಾದಿಂದಾ ಸುರ ಮಾನಿನಿಯಾರಾಡೀದ ।
ಈ ನುಡಿಯಾ ಪಾಡೀದವರೀಗೆ ॥ ಅವರಿಗಿಹಪರದಲ್ಲಿ
ಪ್ರಾಣೇಶ ವಿಠಲಾ ಒಲಿವೋನೂ ೨೭

## ೨೪೪

ಸುವ್ವಿ ಸುವ್ವಾಲಿ ।
ಸುವ್ವಿ ಸಾಧ್ವಿಯರು ರಾಘವೇಂದ್ರರ ಪಾಡಿ ಪ

ಅಂದಿನ ಕಾಲದ ಮಧ್ವಶಾಸ್ತ್ರವ ಮನಕೆ ತಂದು ।
ಅಂದದಿ ಟಿಪ್ಪಣಿ ಮಾಡಿದ ದೇವರಾರು । ಸುವ್ವಿ ॥
ಅಂದು ವಾದಿಸುವ ಜನರನ್ನು ಬಾಯಿ ಮುಚ್ಚಿಸಿದ ।
ಚಂದಿರ ವದನೆ ಈತನಮ್ಮ ಗುರುವು । ಸುವ್ವಿ ೧

ಇವರ ಚರಿತೆಯನ್ನು ತೋರಿದಷ್ಟು ತುತಿಸುವೆ ।
ಕಿವಿಗೊಟ್ಟು ಕೇಳುವದು ಬುಧ ಜನರು । ಸುವ್ವಿ ॥
ಪವನಾಂಶರಿವರು ಕವಲಿಲ್ಲ ಖ್ಯಾತರಾಗಿ ।
ಅವನಿಯ ಸುರರಿಂದರ್ಚನೆಗೊಂಗುವರು । ಸುವ್ವಿ ೨

ಅಷ್ಟಾಕ್ಷರ ಮಂತ್ರವನು ತಪ್ಪದಲೆ ನಿತ್ಯವಾಗಿ ।
ನಿಷ್ಠೆಯಿಂದ ಭಜಿಸಲು ಭೂತ ಭಯವು । ಸುವ್ವಿ ॥
ಕುಷ್ಠರೋಗ ಕ್ಷಯ ಪಾಂಡು ಜ್ವರ ಸನ್ನಿ ಮೊದಲಾದ ।
ಅಷ್ಟುಪದ್ರವಾಕ್ಷಣ ಬಿಟ್ಟು ಓಡುವುದು । ಸುವ್ವಿ ೩

ಮೃತ್ತಿಕೆ ಮಾಲೆ ಅಂಗಾರ ದಿವ್ಯ ಮಂತ್ರಾಕ್ಷತೆಯು ।
ಹತ್ತಿರವಿರಲು ಕ್ಲೇಶವ ಲೇಶ ಕಾಣರು । ಸುವ್ವಿ ॥
ಎತ್ತ ಹೋದರು ಜನರಿಗೆ ಜಯಪ್ರದ ತೋರುವದು ।
ಕತ್ತಲಿಲ್ಲ ಶತಸಿದ್ಧ ಮತ್ತೇನು ಕೇಳಿ । ಸುವ್ವಿ ೪

ಪಂಡಿತರು ಮೊದಲಾಗಿ ಹಸ್ತಿ ಉಷ್ಟ್ರ ಕುದುರೆಯ ।
ಹಿಂಡುಗಳು ತೃಷೆಯಿಂದ ಬಳಲುತಿರೆ । ಸುವ್ವಿ ॥
ದಂಡ ಜಗತಿಗೂರಿ ತೋಯ ತೆಗಿಸಿಯವನೀ ।
ಮಂಡಲದೊಳಗೆ ಪೆಸರಾದರಿವರು । ಸುವ್ವಿ ೫

ಕಟ್ಟಲಿಯ ಭತ್ತದೊಳು ಭೂಪದಳಯುಕ್ತ ಬರ ।
ಲಿಟ್ಟುಕೊಂಡು ಉಣಿಸಿ ಉತ್ತಮ ವರವ । ಸುವ್ವಿ ॥
ಕೊಟ್ಟು ಕಳಿಸಿದ ಮೇಲೆ ಆವು ಕೊಂಚಿಯಾಗಲಿಲ್ಲ ।
ಗಟ್ಟಿ ಸಂಕಲ್ಪರಿವರು ಮುನಿವರರು । ಸುವ್ವಿ ೬

ವಿಪ್ರರೆಲ್ಲರು ಹೇಳಿಸಿ ಕಟ್ಟಿಸಿದ ಸದನವ ।
ಥಟ್ಟನೆ ಕೆಡಿಸಿ ಭೂಪ ಮೆಚ್ಚುವಂದದಿ । ಸುವ್ವಿ ॥
ನೆಪ್ಪು ಧರೆಗಾಗಲೆಂದು ಗುರು ಸುಧೀಂದ್ರ ಕುಮಾರ ।
ಸರ್ಪನ ತೋರಿಸಿ ಸುಪ್ರಖ್ಯಾತರಾದರು । ಸುವ್ವಿ ೭

ದ್ವಿಜರ ಸ್ತೋಮವು ಬಾಯಿ ಬಿಡುತಿರೆ ದಯದಿಂದ ।
ನಿಜಕಾಷ್ಟವಿಳೆಗೆ ನಿಲ್ಲಿಸಿ ಮರವ । ಸುವ್ವಿ ॥
ಸೃಜಿಸಿ ಪಲ್ಲವ ಫಲಯುಕ್ತವಾಗಿ ತೋರಿಸಿದ ।
ಭಜಿಸಿರಿವರನ್ನು ಮಕ್ಕಳು ಬೇಡುವವರು । ಸುವ್ವಿ ೮

ಮುತ್ತಿನ ಮಾಲಿಕೆ ನೃಪ ಭಕ್ತಿಯಿಂದ ಕೊಡಲಾಗಿ ।
ಸಪ್ತಜಿಹ್ವಗುಣಿಸಿದ ಸರ್ವರು ನೋಡಿ । ಸುವ್ವಿ ॥
ಮತ್ತೆ ಬೇಡಲು ಪಾವಕನಿಗೆ ಪ್ರಾರ್ಥನೆಯ ಮಾಡಿ ।
ಮರ್ತ್ಯಪಗೆ ಇತ್ತರು ಮೊದಲಂತೆಯೆ ತಂದು । ಸುವ್ವಿ ೯

ಹಿಂದೆ ಮಾಡಿದ ದುಷ್ಕರ್ಮ ತೀರ ಬಂದದನು ನೋಡಿ ।
ಬಂದಾಕ್ಷಣದಲ್ಲಿ ಅವನ ವಿಚಾರಿಸಿ । ಸುವ್ವಿ ॥
ಇಂದಿರೇಶನ ಕಾರುಣ್ಯ ಬಲದಿಂದ ಜನನೋಡೆ ।
ಸಂದೇಹವಿಲ್ಲದೆ ಸುಲೋಕವನಿತ್ತರು । ಸುವ್ವಿ ೧೦

ತುಂಗಾತೀರ ಮಂತ್ರಾಲಯದಲ್ಲಿ ಶ್ರಾವಣ ಬಹುಳ ।
ಮಂಗಳ ಬಿದಿಗಿಯಲ್ಲಿ ನಿವಾಸವಾದರು । ಸುವ್ವಿ ॥
ಶೃಂಗಾರ ವೃಂದಾವನ ದ್ವಾದಶನಾಮ ಶ್ರೀ ಮುದ್ರೆಯು ।
ಕಂಗಳು ಸಾಲವು ನೋಡ ಹೊದ್ದ ಶಾಠಿಯ । ಸುವ್ವಿ ೧೧

ಅಂಧಕ ಬಧಿರ ಕುಂಟ ನಾನಾ ರೋಗಿಗಳು ಮತ್ತೆ ।
ಕಂದ ವರ್ಜ್ಯ ಮೊದಲಾದವರಿಗೆ ಕಾಮ್ಯ । ಸುವ್ವಿ ॥
ತಂದುಕೊಡುವರು ಬೇಗ ಇತರ ಸಂಶಯವಿಲ್ಲ ।
ಮಂದಭಾಗ್ಯರಿಗೆ ಇವರ ಸೇವೆ ದೊರೆಯದೇ ॥ ಸುವ್ವಿ ೧೨

ಕೌತುಕವೇನೆನ್ನಲಿ ಮುಂಜಿ ವಿವಾಹ ಮಾಡಿಸುವರು ।
ಚಾತುರ್ಮಾಸದೊಳಗೆ ಗ್ರಹಗಳಸ್ತವಾಗೆ । ಸುವ್ವಿ ॥
ಧಾತಾ ಪಿತ ನಿಲಯವಿದೇನೋಯೆಂದು ತೋರುವದು ।
ಪ್ರೀತಿಯುಳ್ಳ ಭಕ್ತರಿಗೆ ಅಧಮರಿಗಲ್ಲ । ಸುವ್ವಿ ೧೩

ಪಾಡ್ಯ ಪೂರ್ವಾರಾಧನೆ ಉತ್ತರಾರಾಧನೆಗೆ ।
ಒಡ್ಡಿ ಬರುವುದು ಎಂಟು ದಿಕ್ಕುಗಳಿಂದ ಜನವು । ಸುವ್ವಿ ॥
ಕಡ್ಡಿ ಹಿಡಿಯದಂಥ ಸಂದಣಿಯೊಳು ಸನ್ಮುಹೂರ್ತದಿ ।
ದೊಡ್ಡ ರಥವೇರಿ ಮಠವ ಸುತ್ತುವರು । ಸುವ್ವಿ ೧೪

ಇಷ್ಟೇಯೆನ್ನಲು ವಶವಲ್ಲ ಮಹಿಮೆಗಳಿನ್ನೂ ಉಂಟು ।
ನಷ್ಟ ಮಾಡುವರು ದುರ್ಮತ ದಾರಿದ್ರ್ಯವ । ಸುವ್ವಿ ॥
ಸೃಷ್ಟಿಗೊಡೆಯ ಪ್ರಾಣೇಶ ವಿಠ್ಠಲನೆಂದು ಪೇಳ್ವರು ।
ಎಷ್ಟು ಪೇಳಿದರೂ ಎನ್ನಿಂದಲಿ ತೀರದು । ಸುವ್ವಿ ೧೫

## ೨೪೫

## ದೇವರನ್ನು ಹಸೆಗೆ ಕರೆದ ಪದಗಳು

ವೇದ ಉದ್ಧರಿಸೀದಾ ಮತ್ಸ್ಯಾವತಾರನೇ ।
ಆದಿತ್ಯಾರಿಗೊಲಿದಮೃತ ನೀಡಿದನೇ ॥
ಮೇದಿನಿಯನು ಪೊತ್ತ ವರಹವತಾರನೆ ।
ಆ ದೈತ್ಯನಳಿದು ಪ್ರಹ್ಲಾದಗೊಲಿದನೇ ॥
ಭೂ ದೇವಾ ರೂಪೀ ಹಸಿಗೇಳೂ ೧

ಭೃಗು ಕುಲೋದ್ಭವನೇ ಭೀಷ್ಮನ ಬೆಳಸಿದನೇ ।
ನಗಜ ರಮಣನ ಕಾರ್ಮೂಕ ಮುರಿದವನೇ ॥
ಹಗೆಯನಳಿದು ಪಾಂಚಜನ್ಯ ಘಳಿಸಿದನೆ ।
ಇಗಡ ದೈತ್ಯರ ಬುದ್ಧಿ ಭೇದ ಮಾಡಿದನೇ ॥
ಅಗಣಿತ ಮಹಿಮಾ ಹಸಿಗೇಳೂ ೨

ಕುದರೀಯೇರಿ ಕುಜನರಾ ಕುಲ ತರಿದವನೇ ।
ಬುಧರಗೋಸುಗ ಹತ್ತಾವತಾರವಾದವನೇ ॥
ಸುದರೂಶನ ಶಂಖ ಗದ ಜಲಜ ಧರನೇ ।
ವಿಧಿಪಿತ ಶ್ರೀ ರಮಣ ಪ್ರಾಣೇಶ ವಿಠ್ಠಲನೆ ॥
ಸುಧಿಗಡಲಾಲಯನೆ ಹಸಿಗೇಳೂ ೩

## ೨೪೬

ವಾಸುಕಿ ಶಯನನೆ ವೆಂಕಟಗಿರಿ ।
ವಾಸನೆ ಯಜ್ಞಾದ್ಯವತಾರನೆ ।
ಮೇಶಾ ನರಸಿಂಹಾ ಹಸಿಗೇಳೂ ಪ

ಬೊಮ್ಮಾ ಶಂಕರ ಮುಖ ವಂದಿತ ।
ಸಮ್ಮೀರ ವಾಹನ ಗರುಡಧ್ವಜ ।
ಅಮ್ಮರೇಶಾನುಜ ಶ್ರೀ ಉಪೇಂದ್ರಾ ॥ ಉಪೇಂದ್ರ
ದಾಮೋದರ ಹರಿ । ತಮ್ಮನಾ ತಮ್ಮ ಹಸಿಗೇಳೂ ೧

ವಾಮನ ನಾರಾಯಣ ಅಚ್ಯುತ ।
ತಾಮಸ ಗುಣ ಜನ ಸಂಹಾರಕ ।
ಶ್ಯಾಮಾಂಗ ಕೋಟಿ ರವಿತೇಜಾ ॥
ರವಿತೇಜಾ ತ್ರೈಲೋಕದ ಗುರು
ಹೇಮಾಂಗದ ವರದಾ ಹಸಿಗೇಳೂ ೨

ಜಲಜಾಕ್ಷನೆ ಕೌಸ್ತುಭ ಶೋಭಿತ ।
ಜಲನಿಧಿ ಶಯನನೆ ನರಕಾಂತಕಾ ।
ಬಲಿ ಬಂಧಿಸೀದನೆ ಪರತತ್ವಾ ॥
ಪರತತ್ವ ರವಿದರ ಗದಧರ
ಫಲುಗುಣನಾ ಸಖನೇ ಹಸಿಗೇಳೂ ೩

ಕನಕಾಂಬರ ಕಶ್ಯಪ ರಿಪು ಹರಿ ।
ಧನಪತಿ ಮಿತ್ರನ ಭಯ ಬಿಡಿಸಿದ ।
ಇನಪುತ್ರಗೊಲಿದಾ ರಘುಪತೀ ॥
ರಘುಪತಿ ಭಕ್ತ ಸುರತರು
ಮನಸಿಜಾ ಪಿತನೆ ಹಸಿಗೇಳೂ ೪

ಶತಯಾಗನ ಗರ್ವ ವಿಭಂಜನ ।
ಕ್ಷಿತಿವಂದಡಿ ಮಾಡಿದವನೇ ।
ಸುತನಲ್ಲಿ ಪಾಲು ಕುಡಿದಾನೆ ॥
ಕುಡಿದಾನೆ ರುಗ್ಮಿಣಿ ವಲ್ಲಭ
ಪತಿತಾ ಪಾವನ್ನಾ ಹಸಿಗೇಳೂ ೫

ಝುಗ ಝುಗಿಸುವ ಪೀತಾಂಬರದುಡಿ ।
ಗಿಗಳಿಂದಲಿ ಹೊನ್ನುಡದಾರದಿ ।
ಮಿಗಿಲಾದ ವೈಜಯಂತೀ ವನಮಾಲೀ ॥
ವನಮಾಲಿ ಕೊರಳೊಳಗೊಪ್ಪುವ
ಜಗದೀಶ ಕೃಷ್ಣಾ ಹಸಿಗೇಳೂ ೬

ಗಂಗೆಯ ಚರಣದಿ ಪಡದಿಹ ಬಹು ।
ಮಂಗಳ ಮೂರುತಿ ಶ್ರೀ ವಾಮನಾ ।
ಜಂಗುಳಿ ಹೆಣ್ಣುಗಳಾ ಒಲಿಸೂತಾ ॥
ಒಲಿಸುತಾ ಚಿಂತಿಗಳೆಲ್ಲನು
ಹಿಂಗಿಸುವಾ ದೇವಾ ಹಸಿಗೇಳೂ ೭

ಧ್ರುವ ದ್ರೌಪದಿಯ ಸುರಜ ಪೋಷಕ ।
ಅವಿವೇಕ ದಶಮುಖ ವಿನಾಶಕಾ ।
ಲವಣಾಸುರ ಕಂಸಾ ಮುರಾ ಧ್ವಂಸೀ ॥
ಮುರಧ್ವಂಸೀ ಐದೊಂದಬಲೆರಾ
ಧವ ವಾಸುದೇವಾ ಹಸಿಗೇಳೂ ೮

ಕೇಶವ ಸತ್ರಾಯಣ ಸುತ ಪ್ರಾ- ।
ಣೇಶ ವಿಠ್ಠಲ ದಕ್ಷಿಣ ವಲ್ಲಭ ।
ದೋಷ ರಹಿತನೆ ಅನಿರುದ್ಧಾ ॥
ಅನಿರುದ್ಧಾ ಭಾಗವತರಘ
ನಾಶಾ ಪರಮಾತ್ಮಾ ಹಸಿಗೇಳೂ ೯

## ೨೪೭

ಶೋಭಾನ ಪಾಂಡುರಂಗಗೆ । ಶೋಭನ ಶ್ರೀನಿವಾಸಗೆ ।
ಶೋಭನ ಉಡುಪಿ ನಿಲಯಾಗೇ ಪ

ಸುಮನಸರಾಳ್ದವನ ವರಜ ಬಾ ।
ಕಮಲೆ ಸದನ ಮುಖಕಂಜ ರವಿ ಬಾ ।
ವಿಮಲ ಗುಣಾರ್ಣವ ನೀಲ ಜಲದನಿಗಾತ್ರಾ ಬಾ ॥
ವಾರಿಜನೇತ್ರ ಬಾ ಮಂಗಳ ಸ್ತೋತ್ರ ಬಾ ।
ವಹನ ಪತತ್ರಾ ಬಾ ನತಜನ ಮಿತ್ರಾ ಬಾ
ಹಸಿಯಾ ಜಗುಲೀಗೇ ೧

ಅಷ್ಟನಾಮ ಒಪ್ಪುವನೇ ಬಾ ।
ದುಷ್ಟ ದಿತಿ ಸುತ ಮದಹರಣಾ ಬಾ ।
ಮುಷ್ಟಿಕ ಪ್ರಮುಖಹ ಗೋವರ್ಧನಧರ ಕೃಷ್ಣಾ ಬಾ ॥
ಹರಿಗತಕಷ್ಟಾ ಬಾ ತ್ರಿಜಗಜ್ಜೇಷ್ಟಾ ಬಾ ।
ಅಕ್ಷರ ಜೇಷ್ಠಾ ಬಾ ನಿರುತ ವಿಶಿಷ್ಟಾ ಬಾ
ಹಸಿಯಾ ಜಗುಲೀಗೇ ೨

ಮಾತುಳ ರಿಪು ವನ ಅನಳ ಬಾ ।
ಶ್ವೇತವಹನ ರಥ ಸಾರಥಿ ಬಾ ।
ಮಾತಿ ಶಿರ ಕಡಿದು ಬಾಹುಜರೊರಸಿದ ನಾಥಾ ಬಾ ॥
ಗೋಕುಲ ತ್ರಾತಾ ಬಾ ಲೋಕೈಕ ದಾತಾ ಬಾ ।
ವಸುದೇವ ಜಾತಾ ಬಾ ಸುಪ್ರಖ್ಯಾತಾ ಬಾ
ಹಸಿಯಾ ಜಗುಲೀಗೇ ೩

ವಾಮನ ಕೇಶವ ಹಯಮುಖ ಬಾ ।
ಭೀಮ ವಿನುತ ನಿಃಸೀಮಾ ಬಾ ।
ಕಾಮಿನಿಯರ ಚೈಲಹರಣ, ಋಷಿ, ರಣಭೀಮಾ ಬಾ ॥
ದಶರಥ ರಾಮಾ ಬಾ ಬಾಣವಿರಾಮಾ ಬಾ ।
ಅಜಮುಖ ನಾಮಾ ಬಾ ಕೃಷ್ಣಾ ಪ್ರೇಮಾ ಬಾ
ಹಸಿಯಾ ಜಗುಲೀಗೇ ೪

ಕಂದರ್ಪ ಜನಕ ನರಹರಿ ಬಾ ।
ಅಂದಮೃತವ ತಂದವನೇ ಬಾ ।

ಮಂದೇತರ ಮುದ ಘಟಜ ಪ್ರಮುಖ ಮುನಿವಂದ್ಯಾ ಬಾ ॥
ಕಸ್ತುರಿ ಛಂದಾ ಬಾ ದೇವ ಮುಕುಂದಾ ಬಾ ।
ದೇವಕಿ ಕಂದಾ ಬಾ ಸದ್ಗುಣ ವೃಂದಾ ಬಾ
ಹಸಿಯಾ ಜಗುಲೀಗೆ ೫

ಕ್ಷಿತಿಧರ ಜಿನಧರ ಸಖನೇ ಬಾ ।
ಅತುಳ ಮಹಿಮನೆ ಅಜಿತನೇ ಬಾ ।
ಸತಿಗಮರ ಸದನದ ಕುಸುಮ ತಂದಚ್ಯುತನೇ ಬಾ ॥
ಮೂರುತಿ ಸುತನೆ ಬಾ ಲೋಕ ವಿತತನೆ ಬಾ ।
ಪೂಜಿಗುಚಿತನೆ ಬಾ ರಕ್ಷಣರತನೇ ಬಾ
ಹಸಿಯಾ ಜಗುಲೀಗೆ ೬

ಪ್ರಾಣೇಶ ವಿಠ್ಠಲರಾಯಾ ಬಾ ।
ವೀಣಾಪಾಣೀ ಜನಕನೆ ಬಾ ।
ಮಾಣದೆ ಭಕ್ತರ ಪೊರವುತಿಹನೆ ಸತ್ರಾಣಾ ಬಾ ॥
ಸತ್ಯಾ ಪ್ರಾಣಾ ಬಾ ಶ್ರೀ ಪಾರೀಣಾ ಬಾ ।
ನಿಜ ವಿಜ್ಞಾನಾ ಬಾ ನಿತ್ಯ ಕಲ್ಯಾಣಾ ಬಾ
ಹಸಿಯಾ ಜಗುಲೀಗೆ ೭

## ೨೪೮

## ಕಂಕಣ ಕಟ್ಟುವ ಪದ

ಶೋಭಾನ ಕಾಮಜನಕನಿಗೆ । ಶೋಭನ ಶ್ರೀ ಮಹಾ ಲಕುಮಿಗೆ ।
ಶೋಭಾನವೆನ್ನೀ ಬುಧರೆಲ್ಲಾ ಪ

ಪಾಲ ಸಮುದ್ರವು ಹೆಣ್ಣಿನ ಮನೀ ।
ಮೇಲಾದ ದ್ವಾರಕಿ ಗಂಡಿನ ಮನಿ ॥

ಮೂಲೋಕದೊಳಗಿಹ ನಿಬ್ಬಣದವ- ।
ರೋಲಯ ಒದಗೀದಾರು ಶೋಭಾನ ೧

ಅಂಬರ ಛಪ್ಪರ ರವಿಚಂದ್ರರು ।
ಸಂಭ್ರಮ ತೋರಣಗಳು ಮದುವೀಗೆ ॥
ಇಂಬಾದ ಮೇದಿನಿ ಪರದಿಯ ಶ್ಯಾಲಿ ।
ಹೊಂಬಣ್ಣನ ಗಿರಿಜಗುಲೀ ಶೋಭಾನ ೨

ಆ ಮಹಾ ಸುರರಂಗನಿಯರು ಬಹ- ।
ಳಾ ಮುದದಲಿ ಪ್ರಾಣೇಶ ವಿಠ್ಠಲಗೆ ॥
ಶ್ರೀ ಮಾಯಾದೇವಿಗೆ ಕಂಕಣ ।
ನೇಮಿಸಿ ಕಟ್ಟಿದರೂ ಶೋಭಾನ ೩

## ೨೪೯

## ಉರುಟಣೀ ಪದ

ಜಯತೂ ರುಗ್ಮಿಣಿ ಕಾಂತಾ । ಜಯತೂ ಕಂಸ ಕೃತಾಂತಾ ।
ಜಯ ಜಯತೂ ಧೀಮಂತಾ ಜಯ ನಿಶ್ಚಿಂತಾ । ಪ

ಖಳರಾ ಬಾಧಿಗೆ ಭೂಮಿ । ಲಲನೇ ಗೋ ರೂಪದಲಿ ॥
ನಳಿನಾ ಪೀಠನ ಕೂಡಿ ಬಿನ್ನೈಸಲು ಕೇಳಿ ೧

ತ್ರಿಗುಣಾ ವರ್ಜಿತವಾದಾ । ಯುಗ ಒಂದೂಮಾತ್ಮ ಕಥಾ ॥
ಮಗಳಲ್ಲಿದ್ದಾ ಉತ್ಸಾಹ ತೋರುವೆ ಜಗತಿಯೊಳೆಂದೂ ೨

ವಾರಿಧಿಯಾ ಮಧ್ಯದಲೀ । ದ್ವಾರಕಿಯಾ ವಿರಚಿಸೀ ॥
ಕ್ರೂರಾ ದೈತ್ಯರ ಗೆಲಿದು ರುಗ್ಮಿಣಿಯಾ ತಂದೂ ೩

ನಿತ್ಯದಲಿ ಅವಿಯೋಗಿ । ಸತ್ಯಾವಾದರು ಶ್ರೀಶಾ ॥
ಮತ್ತೂ ಹಮ್ಮುತಲೀ ವಿವಾಹ ಮನುಜಾರಂತೇ ೪

ಬ್ರಹ್ಮಾದಿ ನಿರ್ಜರರಾ । ಸುಮ್ಮನದಿ ಕರಿಸಾಲೂ ॥
ಒಮ್ಮೇಲೆ ಬಂದರು ತಮ್ಮಯ ಸ್ತ್ರೀಯರ ಕೂಡೀ ೫

ನಿತ್ಯಾನಂದಗೆ ಮದುವೀ । ಮತ್ತೆಲ್ಲೀದೀಗಮ್ಮಾ ॥
ಮೊತ್ತಕೆ ಸಂತೋಷವ ಮಾಡಲು ರಚಿಸಿದನೀಗಾ ೬

ಆವಾವಾ ಕಾಲದಲೀ । ಆವಾ ಪುಣ್ಯದ ಫಲವೂ ॥
ಆವಲ್ಲಿಂದೊದಗಿತೊ ಇಂದಿಗೆ ಬಹು ಮುದವೆಂದೂ ೭

ಸರಸ್ವತಿ ಭಾರತಿ ಶಚಿಯೂ । ಗಿರಿಜೆ ವಾರುಣಿಯು ಸೌ ॥
ಪರಣೀ ಗಂಗಾದಿಗಳೂ ಶುಭದಿನದಲ್ಲೀ ೮

ಗುರು ಆಜ್ಞಾದಲಿ ಕಲ್ಲೂ । ಒರಳೂ ಪೂಜಿಯ ಮಾಡೀ ॥
ಸ್ವರಗೈದು ಪಾಡಿದರೆಲ್ಲರು ಸುವ್ವೀ ಎಂದೂ ೯

ಮರುತಾ ದೇವರು ಹರಿಯಾ । ಪುರವಾ ಶೃಂಗರಿಸೀದಾ ॥
ಶರಧೀಜಾದಿತ್ಯರು ತೋರಣಕೊಪ್ಪಿದರಾಗಾ ೧೦

ಚಿತ್ರಾ ವೇದಿಕದಲ್ಲಿ । ಸಪ್ತಾ ವಾಹನ ಹರಿಯಾ ॥
ಮುತ್ತೈದೇರೆಲ್ಲರು ಕರದರು ಶೋಭಾನೆಂದೂ ೧೧

ಶಂಖಿಣೆ ಪದ್ಮಿಣಿಯರು ವಸ್ತ್ರಾ । ಲಂಕರದಿಂ ಶೃಂಗರಿಸಿ ಅರಿಷಿಣ ॥
ಕಂಕಣಧಾರಗಳನು ಕಟ್ಟಿದರೂ ವೆಂಕಟಗಿಂದಿರಿಗೇ ೧೨

ಮಾಂಗಲ್ಯತಂತೂ ನಾನೆ ನಂಬೀ । ಮಂಗಳತರ ವಾಕ್ಯಗಳಂದಾ ॥
ಮಂಗಳಸೂತ್ರ ಸು ಕರಿಮಣಿ ಕಟ್ಟಿದ ಮಂಗಳೆಗೀಶಾ ೧೩

ಬಳಿಕಾ ಲಾಜಾಹೋಮಾ । ಗಳು ವಿದ್ಯುಕ್ತದಿ ಮಾಡಿ ॥
ಜಲಜಾನಾಭನಿಗೆ ಭೂಮವ ಬಡಿಸಿದರಾಗಾ ೧೪

ಆ ತರುವಾಯದಲಿ ದೇ । ವಾ ತರುಣೀರೆಲ್ಲಾರೂ ॥
ಸೂತವಕಾದಿಂದಲಿ ಬನ್ನಿರಿ ಉರುಟಣೆಗೆಂದೂ ೧೫

ಸ್ವರ್ಣದ ಬಟ್ಟಲದೊಳಗೇ । ಎಣ್ಣೆ ಅರಿಶಿನವನು ಕಲಿಸೀ ॥
ಚೆನ್ನೆ ಭಾರತಿ ಕರಿಸಿದಳಾನಂದಾದಿಂದಾ ೧೬

ಸೂರುತಿ ಸೀರಿ ಕೆಲರೂ । ಸಾರಾವಾಳೀ ಕೆಲರೂ ॥
ಚ್ಯಾರು ವಸ್ತ್ರಗಳನ್ನೂ ಉಟ್ಟರು ಸ್ತ್ರೀಯರು ಬ್ಯಾಗಾ ೧೭

ಕಂಚುಕ ತೊಟ್ಟರು ಬಿಗಿದೂ । ಮಿಂಚುವ ವಸ್ತಗಳಿಟ್ಟೂ ॥
ಕುಂಚಿಗಿ ಬಾಲಕರನ್ನೂ ತಮ್ಮಯ ಕೊಂಕಳೋಳಿಟ್ಟೂ ೧೮

ವರುಷಾ ಕಾಲದ ನದಿಯಂತೆ । ಹರುಷುಬ್ಬಿ ಬಂದಾರೂ ॥
ಸರಸೀಜಾಕ್ಷನು ರಮೆ ಮಾಡುವ ಊರುಟಣಿ ನೋಡಾ ೧೯

ಗಿರಿಜೆ ಬಟ್ಟಲು ಪಿಡಿದೂ । ಶಿರಿಯಾ ಮುಂದಕೆ ಕರದೂ ॥
ಸರುವೇಶಾಗೂಟಣಿ ಮಾಡೆಂದರಿಶಿನ ಕೊಡಾಲೂ ೨೦

ತುಂಗಾ ವಿಕ್ರಮ ಹರಿಯೇ । ಶೃಂಗಾರಾಂಬುಧಿಯೇ ಕಾ- ॥
ಳಿಂಗನ ಮರ್ದಿಸಿದಂಥಾ ಕಾಲ್ಕೊಡು ಅರಿಶೀನ ಹಚ್ಚೂವೇ ೨೧

ಒದಗೀದಾ ಖಳಗಂಜೀ । ಎದಿಗೊಟ್ಟೂ ನಿಲ್ಲದಲೇ ॥
ಹದಿನ್ಯೋಳಾವರ್ತ್ಯೋಡಿದ ಪದಕೊಡು ಅರಿಶಿನ ಹಚ್ಚೂವೇ ೨೨

ಆ ಪಾರ್ಥನ ತೇರಿನ ಹಗ್ಗಾ । ನೀ ಪಿಡಿಯೆ ಕುದರಿ ಖುರ ಧೂಳೀ ॥
ಲೇಪಿಸಿದಂಥಾ ಮುಖ ಕೊಡು ಅರಿಶಿನ ಕುಂಕುಮ ಹಚ್ಚೂವೆ ೨೩

ಜನನೀಯಾ ಮೊಗ ನೋಡುತಾ । ವಿನಿಯದಲಿಂ ಜುರು ಜುರು ಮೆಲುತಾ ॥
ಸ್ತನ ಪಿಡಿದಾಡಿದ ಕರ ಯುಗವನೆ ಕೊಡು ಗಂಧವ ಹಾಕೂವೆ ೨೪

ತುಂಬೀದಾ ಕೌಸ್ತುಭ ಕಾಂತೀ । ಗಿಂಬಾಗಿ ತೋರಿಸುವಾ ॥
ಕಂಬು ಕಂಧರವನೆ ಕೊಡು ಪದ್ಮದ ಮಾಲಿಕಿ ಹಚ್ಚೂವೆ ೨೫

ಅಂದೀ ಪರಿಯಿಂದರ್ಚಿಸೀ । ಹೊಂದೀ ಕುಳ್ಳಿರೆ ಗಿರಿಜೇ ॥
ಮಂದಾರೋದ್ಧರ ಊಟಣಿ ಮಾಡೇಳೆಂದಾಳೂ ೨೬

ಇಂದಿರೇ ಬಲು ಸುಂದಾರೆ । ಚಂದೀರಾಸ್ಯನ್ನರಸೀ ॥
ಮಂದಸ್ಮಿತ ಮುಖವನು ಕೊಡು ಅರಿಶಿನ ಕುಂಕುಮ ಹಚ್ಚೂವೆ ೨೭

ಮುನಿನುಡಿಗೆ ಮರುಳಾಗೀ । ಎನ ಬಯಸೀ ಕಣ್ಣಿನ ಅಂ– ।
ಜನದಿಂ ಪತ್ರವ ಬರದಿಹ ಕರ ಕೊಡು ಗಂಧವ ಹಚ್ಚೂವೆ ೨೮

ಅರಸೂ ನೇಮಿಸಿದಂಥಾ । ದೊರೆಗಳ ವಂಚಕಳೆಂಬಾ ॥
ಹರಲೀಯಾ ಹೊತ್ತಿಹ ಶಿರವನೆ ಕೊಡು ನಾ ಸೂಸುಕ ಮುಡಿಸುವೆ ೨೯

ಪಾಕೀ ಕೊಟ್ಟು ಚೇಳು ಬೇಕೆಂದು ಕಚ್ಚಿಸಿಕೊಂಡಂತೇ ॥
ಕಾಕು ಮಾತುಗಳಾಡೀ ಎನ್ನಿಂದಾಡಿಸಿಕೊಂಡೀ ೩೦

ಎನುತಾ ಗಂಧಾದಿಗಳೂ । ವನಿತಿಗೇ ಉಪಚರಿಸೀ ॥
ಅನಿಮಿಷೇಶನು ಕುಳಿತನು ಸಂತೋಷದಿ ಪೀಠದಲೀ ೩೧

ಅಂಬೂಜಾಕ್ಷನ ತೊಡಿಯಲ್ಲೀ । ಅಂಬೀಯಾ ಬರಿ ಎಂದೂ ಜಗ ॥
ದಂಬಿಯಾ ನಿಲ್ಲಿಸಿ ಬರಸಿದರೆಲ್ಲರು ಕೂಡೀ ೩೨

ಬಂಧಕ ಶಕುತೀಯಾಲಿಂದಾ । ಇಂದಿರಿಯಾ ಮೋಹಿಪ ಗೋ– ॥
ವಿಂದಗೆ ಕಂಚುಕ ಗ್ರಂಥಿಯ ಬಿಚ್ಚೆಂದಾಡಿದರೆಲ್ಲಾ ೩೩

ಲೋಕವತೂ ಲೀಲಾ ಕೈವಲ್ಯಂ । ಶ್ರೀ ಕಾಂತಾ ನರರಂತೇ ॥
ತಾ ಕಂಚುಕ ಬಿಚ್ಚಿಟ್ಟನು ಪದದಡಿ ನೀ ಕೊಳ್ಳೆಂದೂ ೩೪

ನಖ ಮಹಿಮೆರಿಯದವಳು ನಿನ್ನಾ । ಅಕಳಂಕಡಿಗಳೆತ್ತುವಳೇ ॥
ಸುಕರುಣದಲಿ ಕೊಡು ಭೃತ್ಯಳಿಹಳು ನಿನಗೆಂದಳು ಗೌರೀ ೩೫

ಸರ್ಪ ಶಕಟ ಪೂತನಿ ಪ್ರಮುಖರ ಭಯ । ಕ್ಷಿಪ್ರ ಕಳದು ಬಹು ಮೆರದವಗೇ ॥
ಉಪ್ಪಕ್ಕಿಗಳು ನಿವಾಳಿಸುತಿಹರಿದು ಸೋಜಿಗವಲ್ಲೇ ೩೬

ಪೂಗೀ ಫಲ ತಾಂಬೂಲವನೂ । ಆ ಗೊರಕನ್ನಿಕಿಗಳು ಮೆದ್ದೂ ॥
ಈಗಿನ ಜನ ಮಾಡಿದ ತೆರ ಲೀಲೆಯ ಮಾಡಿದರಾಗಾ ೩೭

ಪಾವಕನೆಲ್ಲವು ಉಂಬಾ । ತಾ ವರ್ಣಾ ವಿಕಾರಾಗ ಹರೀ ॥
ಆವನ ಚಾರಿಯ ಫಲ ಭಕ್ಷೀಸಿದವಗೀದೋಷಗಳುಂಟೇ ೩೮

ಇನಿತೂ ಸ್ತೋತ್ರವ ಮಾಡೀ । ಅನಿಮಿಷರಾ ರಾಣಿಯರೂ ॥
ಮಣಿ ಮುತ್ತಿನ ಆರುತಿ ಎತ್ತಿದರತಿ ಸಂಭ್ರಮದಿಂದಲ್ಲೀ ೩೯

ಉರುವಶಿಯರು ನಲಿದಾಡುವರು । ಸುರರು ಸುಮನ ಮಳೆ ಸುರಿಸುವರೂ ॥
ಮೊರಿಯಲು ದುಂದುಭಿ ನಭದಲಿ ನಾರದಮುನಿ ಕುಣಿದಾಡುತಿರೇ ೪೦

ಮಂಗಳ ಝಷ ಕೂರ್ಮ ಕಿಟಿ ನರಸಿಂಹಗೆ । ಮಂಗಳ ವಟು ಭಾರ್ಗವ ದಾಶರಥಿಗೇ ॥
ಮಂಗಳ ಕೃಷ್ಣಜಿನಜ ಹಯವಹನಗೆ ಮಂಗಳ ಪದಗಳಿಗೇ ೪೧

ವ್ಯಾಸೋಕ್ತಿಗಳಲಿ ಬಹಳುಂಟಾದದು । ನಾ ಶಕುತಿದ್ದಷ್ಟೇಳಿದೆ ನೀ ಕಥಿ ॥
ದೋಷಿರೆ ಕ್ಷಮಿಸಿ ಗ್ರಹಿಸತಕ್ಕದು ಕೇತಕಿಯಂತೆ ಸುಜನರೂ ೪೨

ಪ್ರಾಣೇಶ ವಿಠಲನ ಉರುಟಣಿ ಪದವನು । ಸಾನುರಾಗದಲಿ ಕೇಳ್ದರಿಗೇ ॥
ಏನು ಬೇಡಿದಿಷ್ಟಾರ್ಥವ ಕೊಡುವನು ಇಹಪರದಲ್ಲೀ ೪೩

೨೫೦

## ಉಡಿ ತುಂಬುವ ಪದ

ಶೋಭನ ಶ್ರೀನಾರಾಯಣಗೆ ಇಂದಿರಿಗೇ ।
ಶೋಭನ ಕ್ಷೀರಾಬ್ಧಿ ನಿಲಯಗಂಭೃಣೆಗೇ ॥
ಶೋಭನ ಕೃಷ್ಣಗೆ ಭೀಷ್ಮ ಕುವರಿಗೇ ।
ಶೋಭನ ದಶರಥರಾಮ ಜಾನಕಿಗೆ ।
ಶೋಭನವೆನ್ನೀ ಬುಧರೆಲ್ಲಾ ಪ

ಜ್ಞಾನಿ ವಶಿಷ್ಠಾ ಮುಖ್ಯಾ ಋಷಿ ಬ್ರಹ್ಮಾದಿಗಳೂ ।
ವಾಣೀ ಭಾರತಿ ಗೌರಿ ಪ್ರಮುಖ ನಾರಿಯರೂ ॥
ಕ್ಷೋಣಿಯೊಳಗೆ ಮಿಗಿಲಾದ ಸಂಭ್ರಮದಿಂದಾ ।
ಜಾನಕಿಗುಡಿಯಾ ತುಂಬಿದ ಕಥಿ ಪದವನು ॥
ಧೇನಿಸಿ ಪಾಡುವದು ಪ್ರತಿದಿನಾ ೧

ಸರಸ್ವತಿ ಪಾರ್ವತಿ ಕೂಡಿ ಇಂದಿರಿಗೇ ।
ಸರುವಾಭರಣ ಶ್ರಿಂಗರಿಸಿ ತವಕದಲೀ ॥
ಇರಸೀ ತಟ್ಟಿಯೊಳು ಮುತ್ತು ಮಾಣಿಕ ಪ್ರವಾಳಾ ।
ಹರಿಗರ್ಪಿಸೀ ಮೂಲೋಕಾ ಜನನಿಯ ಮುಂದಕೆ ॥
ಕರದು ತುಂಬಿದಾರು ಉಡಿಯೊಳು ೨

ವಾರುಣೀ ಸೌಪರಣೀ ದೇವಿಯರೊದಗೀ ।
ಸೂರುತಿ ಉಡುಸಿ ಚಿನ್ನದ ಬಟ್ಟಲೊಳಗೇ ॥
ನಾರಿಕೇಳ ದಾಳಿಂಬು ನಿಂಬಿ ಕದಳಿ ಫಲಾ ।
ನಾರಾಯಣಗರ್ಪಿಸಿ ಉಡಿಯಾ ತುಂಬಿದರು ॥
ಮಾರಾ ಜನನೀಗೆ ಜಯವೆಂದೂ ೩

ಉತ್ತೂಮ ಶಚಿದೇವ ದಿವ್ಯಾಂಬರುಡಿಸೀ ।
ಕಿತ್ತಳಿ ಜಂಬು ದ್ರಾಕ್ಷ ಚೂತ ಫಲಗಳೂ ॥
ಉತ್ತುತ್ತಿ ತಾಂಬೂಲ ಪೂಗಿ ಫಲಗಳನ್ನೂ ।
ಸಪ್ತವಾಹನಗರ್ಪಿಸ್ಯುಡಿಯ ತುಂಬಿದಳು ॥
ಸತ್ಯಾಭಾಮಿನಿಗೆ ಶುಭವೆಂದೂ ೪

ದಿಟ್ಟಾಂತಕನ ರಾಣೀ ಚಿನ್ನದಂಬರವಾ ।
ಥಟ್ಟಾನುಡಸಿ ನಾನಾ ಜಾತಿ ಪುಷ್ಪಗಳಾ ॥
ಷಟ್ಟಿ ತಂಡೂಲ ಸಾವೀರ ಹೊನ್ನು ಬೆರಸಿ ಉಡಿ ।
ಘಟ್ಯಾಗಿ ಬಿಗಿ ಎಂದು ತುಂಬಿದಳೂ ॥
ಪ್ರಾಣೇಶ ವಿಠ್ಠಲಗರ್ಪಿಸುತಾ ಶುಭವೆಂದೂ ೫

## ವಿವಾಹ ಮಂಗಳಾರತಿ ಪದಗಳು

### ೨೫೧

ಕರಿವರದಗೆ ಹರಿಯರ್ಧಾಂಗಿಗೆ
ಸುರರಂಗನಿಯರು ಬಹು ಹರುಷದಿ ॥
ನೆರದು ಆರುತಿಯ ಬೆಳಗೀರೆ । ಶೋಭನವೇ ಪ

ರಾಮಗೆ ದಶರಥನಂದಗೆ ಸು ।
ಧಾಮನ ಸಖ ಮಧು ಮುರ ಭಂಜಗೇ ॥
ಶ್ರೀಮಾಯಾದೇವಿಗೆ ಹರುಷಾದಿ ।
ಹರುಷದಿ ಮುತ್ತಿನ ಆರತಿ ।
ಭಾಮಿನಿಯೇರೆಲ್ಲ ಬೆಳಗೀರೆ ೧

ನಾರಾಯಣ ಅಚ್ಯುತ ಕೃಷ್ಣಗೇ ।
ಪಾರಶರನಾ ಸುತ ವ್ಯಾಸಗೇ ॥
ಕ್ಷೀರಾಬ್ಧಿ ಸುತಿಗೆ ಹಿತದಿಂದಾ ।

ಹಿತದಿಂದ ಹವಳದ ಆರುತಿ ।
ನಾರಿಯರು ತಂದು ಬೆಳಗೀರೆ ೨

ಕೇಶವಗೆ ತ್ರಿವಿಕ್ರಮನಿಗೆ ಶ್ರೀ ।
ವಾಸುಕಿ ಶಯನಗೆ ಅನಿರುದ್ಧಗೇ ॥
ದೋಷ ವಿರಹಿತೆ ಲಕುಮಿಗೆ ।
ಲಕುಮಿದೇವಿಗೆ ಆರುತಿಯನು ।
ಭೇಶಾ ಮುಖಿಯರು ಬೆಳಗೀರೆ ೩

ಗಂಗೆಯ ಪಡದಿಹ ಗೋವಿಂದಗೇ ।
ಅಂಗಜ ಜನಕಗೆ ಪುರುಷೋತ್ತುಮಗೆ ॥
ಮಂಗಳ ದೇವಿಗೇ ಸೊಗಸೀಲಿ ।
ಸೊಗಸೀಲಿ ಮಾಣಿಕದಾರುತಿ ।
ಅಂಗನಿಯರೆಲ್ಲಾ ಬೆಳಗೀರೆ ೪

ಜಂಗಮ ಜಡದೊಳು ವ್ಯಾಪಿಸಿಹಗೇ ।
ರಂಗಗೆ ಸುತ್ರಿಧಾಮಗೆ ವರದಗೇ ॥
ಇಂಗಿತಜ್ಞಳಿಗೆ ಜಯಂತೀಗೆ ।
ಜಯಂತೀಗೆ ರತ್ನದಾರುತಿ ।
ಹೆಂಗಳೆರೆಲ್ಲಾ ಬೆಳಗೀರೆ ೫

ವಾರಿಧಿ ಆರೊಂದು ಘನೋದಕ ।
ಮೀರುತ ವಿಪ್ರನ ಬಾಲಕರನು ।
ತೋರಿಸಿದವಗೆ ಇಂದಿರಿಗೆ ।
ಇಂದಿರಿಗೆ ಮಾಣಿಕದಾರುತಿ ।
ನೀರಜಾಕ್ಷಿಯನು ಬೆಳಗೀರೆ ೬

ದಾಮೋದರ ಪ್ರಾಣೇಶ ವಿಠಲಗೆ ।
ರಾಮನ ಅನುಜಗೆ ಜಗನ್ಮಾತಿಗೇ ॥
ಹೇಮಮಯವಾದಾ ಹರಿವಾಣಾ ।

ಹರಿವಾಣದೊಳು ಶ್ರಿಂಗರಿಸಿ ।
ಪ್ರೇಮದಲಿ ತಂದು ಬೆಳಗೀರೆ ೭

## ೨೫೨

ವಾಸೂಕಿ ಶಯನ ಅಶೋಕ ಪರಾಕೂ ।
ವಾಸುದೇವಾನಿರುದ್ಧ ಶ್ರೀ ಕೃಷ್ಣ ಪರಾಕೂ ॥
ಸಾಸಿರನಾಮದ ಹರಿಯೆ ಪರಾಕೂ ।
ದೋಷರಹಿತ ರಘುಪತಿಯೆ ಪರಾಕೆಂದು ॥
ಮೀಸಲಾರುತಿಯಾ ಬೆಳಗೀರೆ ಪ

ವೃಂದಾವನದೊಳಗಿಹನೆ ಪರಾಕೂ ।
ತಂದಿ ತಾಯ್ಗಳ ಬಿಡಿಸಿಹನೆ ಪರಾಕೂ ॥
ಸಿಂಧುರ ವರದ ಗೋಪಾಲ ಪರಾಕೂ ॥
ಸಿಂಧುಶಯನ ಪದ್ಮನಾಭ ಪರಾಕೆಂದು ॥
ಛಂದದಲಾರುತಿಯಾ ಬೆಳಗೀರೆ ೧

ಸತ್ಯಾಭಾಮಿ ರುಗ್ಮಿಣಿ ರಮಣಾ ಪರಾಕೂ ।
ಮುತ್ಯಗ ಪಟ್ಟಗಟ್ಟಿದವನೆ ಪರಾಕೂ ॥
ಭಕ್ತ ಪೋಷಕ ತ್ರಿವಿಕ್ರಮನೆ ಪರಾಕೂ ।
ಸತ್ಯಸಂಕಲ್ಪ ಹೃಷಿಕೇಶ ಪರಾಕೆಂದು ॥
ಮುತ್ತಿನಾರುತಿಯಾ ಬೆಳಗೀರೆ ೨

ಮಾಧವ ಖರ ದೂಷಣಾರಿ ಪರಾಕೂ ।
ಬಾದರಾಯಣ ಪುರುಷೋತ್ತಮ ಪರಾಕೂ ॥
ಯಾದವರೊಳು ಪುಟ್ಟಿದನೆ ಪರಾಕೂ ।
ವೇದ ಉದ್ಧರ ಮತ್ಸ್ಯರೂಪಿ ಪರಾಕೆಂದು ॥
ಮೋದದಲಾರುತಿಯಾ ಬೆಳಗೀರೆ ೩

ಇಂದ್ರ ಬಲಿಯನುಂಡಾ ಧೀರ ಪರಕೂ ।
ಕಂದಗೊಲಿದ ನರಸಿಂಹ ಪರಾಕೂ ॥
ನಂದನಂದನ ಶೌರಿ ಪರಾಕೂ ।
ಮಂದರ ಪರ್ವತ ಧರನೆ ಪರಾಕೆಂದು ॥
ಕುಂದಣದಾರುತಿಯಾ ಬೆಳಗೀರೆ ೪

ಜಟ್ಟೇರ ಹುಡಿಗುಟ್ಟೇದವನೆ ಪರಾಕೂ ।
ದುಷ್ಟ ಕಂಸನ ತರಿದವನೆ ಪರಾಕೂ ॥
ಕೆಟ್ಟಾಜಾಮಿಳಗೊಲಿದವನೆ ಪರಾಕೂ ।
ಅಷ್ಟು ಲೋಕವ ಸಲಹುವನೆ ಪರಾಕೆಂದು ॥
ತಟ್ಟಿಯೊಳಾರುತಿಯಾ ಬೆಳಗೀರೆ ೫

ಮಾರನಯ್ಯಾ ಪ್ರಾಣೇಶ ವಿಠಲ ಪರಾಕೂ ।
ನೀರಜಾಂಬಕ ಶ್ರೀನಿವಾಸ ಪರಾಕೂ ॥
ದ್ವಾರಕಿ ನಿಲಯ ಮುರಾರೆ ಪರಾಕೂ ।
ಕ್ಷೀರಾಬ್ಧಿ ಸುತಿಯ ವಲ್ಲಭನೆ ಪರಾಕೆಂದು ॥
ನಾರಿಯರಾರುತಿಯಾ ಬೆಳಗೀರೆ ೬

## ೨೫೩

ಮಂಗಳ ರಾಘವ ಜಾನಕಿಗೆ । ಮಂಗಳ ಕೃಷ್ಣಗೆ ರುಕ್ಮಿಣಿಗೇ ॥
ಮಂಗಳ ಋಷಭ ಜಯಂತಿಗೇ । ಶೋಭಾನೆ ಪ

ವೃಂದಾವನ ಪತಿ ಕೇಶವಗೆ । ಮಂದರಧರ ನಾರಾಯಣಗೇ ।
ಇಂದ್ರಕೃತ್ಯ ಪರಿಹರ ಮಾಧವ । ಗೋವಿಂದನಿಗೇ ॥ ಸಾಗರ
ನಂದನಿಗೇ ದೈತ್ಯನಿಕೃಂದನಿಗೇ । ಅಂಡಜ
ಶ್ಯಂದನಿಗಾರುತಿಯಾ ಬೆಳಗೀರೆ ೧

ವಿಷ್ಣು ಮಧುರಿ ಪುತ್ರಿ ವಿಕ್ರಮಗೇ ।
ಸೃಷ್ಟಿಪ ವಾಮನ ಶ್ರೀಧರಗೇ ॥
ದುಷ್ಟಮದ ಹೃಷಿಕೇಶ ಪ್ರಸಿದ್ಧ ಸು ವಿಠ್ಠಲಗೇ ॥ ದೇವ್ರೋ-
ತ್ಕೃಷ್ಟಳಿಗೇ ಕನಕೊಸನುಟ್ಟಳಿಗೇ । ವಿಧಿಗೊರ-
ಕೊಟ್ಟಳಿಗಾರುತೀಯಾ ಬೆಳಗೀರೆ ೨

ಕಂಜನಾಭ ದಾಮೋದರೆಗೆ । ಕಂಜವರದ ಸಂಕರುಷಣಗೆ ।
ಕುಂಜರ ಪಾಲಕ ವಾಸುದೇವ ವಿಷಭುಂಜನಿಗೇ ॥ ನಿತ್ಯ ನಿ
ರಂಜನಿಗೇ ಖಳಕುಲ ಭಂಜನಿಗೇ । ಕುಮತ್ವಾಂ-
ಥಾಂಜನಿಗಾರುತಿಯಾ ಬೆಳಗೀರೆ ೩

ಪ್ರದ್ಯುಮ್ನಗೆ ಅನಿರುದ್ಧನಿಗೆ । ಸಿದ್ಧರೊಡಿಯ ಪುರಷೋತ್ತುಮಗೆ ।
ಶುದ್ಧ ಅಧೋಕ್ಷಜ ನಾರಸಿಂಹ ಶ್ರೀ ಬುದ್ಧನಿಗೇ ॥ ಸರ್ವದ
ಇದ್ದಳಿಗೇ ದೋಷ ಅಬದ್ಧಳಿಗೇ । ಕುಸುತನ
ಗೆದ್ದಳಿಗಾರುತಿಯಾ ಬೆಳಗೀರೆ ೪

ತಂದೆ ಶ್ರೀ ಪ್ರಾಣೇಶ ವಿಠ್ಠಲಗೇ । ವಂದ್ಯಾಚ್ಯುತ ಜನಾರ್ದನಿಗೇ ।
ಇಂದ್ರಪ್ರಕಾಶ ಉಪೇಂದ್ರಗೆ ಹರಿಯದು ನಂದನಗೇ ॥ ಭಾಗ್ಯದ
ಇಂದಿರಿಗೇ ಜಗಕತಿ ಸುಂದರಿಗೇ । ಸರಸಿಜ
ಮಂದಿರಿಗಾರುತಿಯಾ ಬೆಳಗೀರೆ ೫

## ೨೫೪

ಜಯಮಂಗಳಂ ನಿತ್ಯ ಶುಭ ಮಂಗಳಂ ಪ

ಶ್ರೀ ವತ್ಸ ಲಾಂಛನಗೆ ಕೌಸ್ತುಭ ಸುಭೂಷಣಗೆ ।
ಗೋವಿಂದನಿಗೆ ರುಗ್ಮಿಣೀ ರಮಣಗೇ ॥
ಭಾವಜ ಪಿತಗೆ ಮಂದರಗಿರಿ ಧರಿಸಿದವನಿಗೆ ।
ಮಾಂವನಳಿದವಗೆ ಮಧು ಹಿಂಸಕನಿಗೇ ೧

ನೀಲಾಂಬುದಾಭಗೆ ಸತ್ಯಭಾಮಿ ಪತಿಗೆ ।
ಫಾಲಾಕ್ಷ ಸಖಗೆ ಪುರುಷೋತ್ತುಮನಿಗೇ ॥
ವಾಲಯ ಸುರರಿಗಮೃತ ಉಣಿಸಿದವನಿಗೆ ।
ಕಾಳಿಂಗ ಮರ್ದನಗೆ ಶ್ರೀಕೃಷ್ಣಗೇ ೨

ಶಂಕರಾದಿ ಸಮಸ್ತ ಅನಿಮಿಷಾರಾಧ್ಯನಿಗೆ ।
ಪಂಕಜೋದ್ಭವನ ಪಿತ ಶ್ರೀ ರಾಮಗೇ ॥
ಕಿಂಕರನ ರೀತಿಯಲಿ ನರನ ರಥವ ನಡಿಸಿದಗೆ ।
ವೆಂಕಟಗೆ ಪ್ರಾಣೇಶ ವಿಠ್ಠಲನಿಗೇ ೩

## ೨೫೫

ಗೋಪಾಲಕೃಷ್ಣನಿಗೆ ಮಂಗಳಾ । ಘೋರ
ಪಾಪಾರಣ್ಯ ಧನಂಜಯಗೆ ಮಂಗಳ ಪ

ಚಿಕ್ಕವನಾಗಿ ಬಲಿಯ ದಾನವ ಬೇಡಿ ನೆಲಾ ।
ಕಿಕ್ಕಿ ತುಳಿದಂವಗೆ ಮಂಗಳಾ ॥
ಸೊಕ್ಕಿದ ಜಾಂಬುನದಾಕ್ಷನ ಹುಡಿಗುಟ್ಟೀ ।
ಅಕ್ಕರೆಲ್ಲರಿಗೆ ಮಾಡ್ದಗೆ ಮಂಗಳಾ ೧

ಕಿಡಿಯನುಗುಳುತಲಿ ಚಟಚಟ ಕಂಬದಿಂದ ।
ಒಡದು, ಬಂದವನಿಗೆ ಮಂಗಳಾ ॥
ಕಡು ಕೋಪದಿಂದ ಶಾತ ಕುಂಭ ಕಶ್ಯಪುವಿನಾ ।
ಪಿಡಿದೊಡಲು ಬಗದವಗೆ ಮಂಗಳಾ ೨

ನುಡಿಯಲು ಜನನಿಯು ಕೇಳಿ ಪುರವ ಬಿಟ್ಟು ।
ಅಡವಿಗೆ ಹೋದಂವಗೆ ಮಂಗಳಾ ॥
ಮಡದೀಯಾಕೃತಿವ್ಯೆದ ಸುರನ ಕೊಂದವನಿಗೆ ।
ಕಡಲಾ ಮಂದಿರನಿಗೆ ಶುಭ ಮಂಗಳಾ ೩

ಪಾಷಾಣಳಾದವಳ ಉದ್ಧಾರ ಮಾಡಿದವಗೇ ।
ದೋಷರಹಿತನಿಗೆ ಮಂಗಳಾ ॥
ಭೇಶ ಭಾಸ್ಕರ ಕೋಟಿ ತೇಜ ಹರಿಗೆ ಸ- ।
ರ್ವೇಶ ಮುರಾಂತಕಗೆ ಶುಭಮಂಗಳಾ ೪

ಶ್ರೀರಮಣ ಶ್ರೀಮಂತ ಪ್ರಾಣೇಶ ವಿಠ್ಠಲನೀಗೆ ।
ವಾರೀಜ ನಯನಗೆ ಮಂಗಳಾ ॥
ನಾರಾಯಣಗೆ ದಯಸಾಂದ್ರಗೆ ದಶ ಅವ- ।
ತಾರ ಗೋವಿಂದ ವಾಮನಗೆ ಮಂಗಳಾ ೫

## ೨೫೬

## ಜೋಗುಳ ಹಾಡು

ಜೋ ಜೋ ವೃಷ್ಣಿ ಕುಲಾಂಬುಧಿ ಚಂದ್ರಾ ।
ಜೋ ಜೋ ಚಿತ್ಸುಖ ಬಲ ಗುಣ ಸಾಂದ್ರಾ ॥
ಜೋ ಜೋ ಭಕ್ತೌಘ ದೋಷಾಹಿವೀಂದ್ರಾ ।
ಜೋ ಜೋ ಅಸುರಾರಿ ಹರಿ ದಿವಿಜೇಂದ್ರಾ ಪ

ಮಧ್ವ ಮನಾಬ್ಜ ಮಂಟಪದಲ್ಲಿ ಶೋಭಿಪ ।
ಶುದ್ಧಮಾತ್ಮಕ ಹೇಮ ನಿರ್ಮಿತ ತೊಟ್ಟಿಲ ॥
ಮಧ್ಯ ಶ್ರೀ ಸಹಿತ ಉಯ್ಯಾಲಿಯನಾಡುವ ।
ಸಿದ್ಧಾರರಸ ವೇದ ವೇದ್ಯ ಕೇಶವನೇ ೧

ಶಿರಿ ವಿಧಿ ಶಿವ ಶಕ್ರ ರವಿ ಶಶಿ ಮೊದಲಾದ ।
ಸುರರೆಲ್ಲ ಕಲ್ಪ ಕಲ್ಪದಲಿ ಮಾಡಿದ ಸೇವೆ ॥
ಚರಣ ಕಮಲಕರ್ಪಿಸಿದ ರುಚಿನೋಳ್ಪಂತೆ ।
ಜುರು ಜುರುಂಗುಟ ಮೆಲುತಿಹ ಮುದ್ದು ಕೂಸೇ ೨

ಅನ್ನಾಜ ಪ್ರಾಣಾಜ್ಯ ಶಿವ ದಿವಿಜರ ಶಾಖ- ।
ವನ್ನು ಬೊಮ್ಮಾಂಡಾಖ್ಯ ಹರಿವಾಣದೊಳಗೇ ॥
ಚನ್ನಾಗಿ ಲಲನಿ ಸಹಿತವಾಗಿ ಭುಂಜಿಸಿ ।
ನುಣ್ಣಾನ ವಟಪತ್ರ ಶಾಯಿ ಕೃಪಾಂಗಾ ೩

ವೇದ ನಗೋದ್ಧಾರಿ ಕೋಲ ನರಹರೀ ।
ಭೂದಾನ ಬೇಡ್ದ ರೇಣುಕ ರಾವಣಾರೀ ॥
ಯಾದವ ಪತಿ ಬುದ್ಧ ವಾಜೀಯನೇರಿ ।
ಮೇದಿನಿಯಾಳ್ದ ಸುಜನರುಪಕಾರೀ ೪

ಮಾನಿ ಮಾನಿದ ಬಕ ಶಕಟಾದಿ ಕಾಲಾ ವಿ- ।
ತಾನ ನಂದನ ಕಾಳಿ ಕುಂಜರ ಪಾಲಾ ॥
ಭಾನು ಶತಾಭ ಗೋಪಾಂಗನ ಲೋಲಾ ।
ಸ್ಥಾಣು ಮೋಹಿಸಿದಾ ಶ್ರೀ ಪ್ರಾಣೇಶ ವಿಠಲಾ ೫

## ೨೫೭

ಅಂಗನಾಕುಲ ಶಿರೋಮಣಿ ಶ್ರೀಮಾ ।
ಶೃಂಗಾರ ವನಧಿ ಗರುಡಧ್ವಜೆ
ಮಂಗಳಾದೇವಿ ಹಸೆಗೇಳು ಪ

ಕ್ಷೀರಸಾಗರ ಕನ್ಯಾ ವಿಧಿ ।
ಮಾರಾಂತಕ ಶಕ್ರಕರಾರ್ಚಿತೆ ॥
ವಾರಿಜಸದನೆ ಸಿರಿದೇವಿ ।
ಸಿರಿದೇವಿ ತ್ರೈಲೋಕಕೆ ಜನನೀ ರಕ್ಕಸಾರಿ ಹಸೆಗೇಳು ೧

ಭಾರತಿ ಪಾರ್ವತಿ ಶಾಮಲ ಮುಖ ।
ನೂರು ಸುರರರಸಿಯರೆಲ್ಲರು ॥

ಮೀರಿಧರುಷದಲಿ ಪದಪಾಡಿ । ಹಸೆಯ
ಬರೆದಿಹರೆಲೆ ನಾರಾಯಣನ ರಾಣೀ ॥ ಹಸೆಗೇಳು ೨

ಋಷಿಗಳು ವೇದ ಪುರಾಣಗಳುಪ ।
ನಿಷದ್ವಾಕ್ಯಗಳಿಂದ ತುತಿಸುವರು ॥
ವಸುಧೆಗಾನಂದ ಪಡಿಸಲು । ಶುಭ ಕುಂದರದನೆ
ಅಸಿತಕುಂತಲೆಯೇ ಹಸೆಗೇಳು ೩

ಕಡೆಗಣ್ಣಿನ ನೋಟದಿ ಲೋಕವ ।
ತಡೆಯದೆ ಪುಟ್ಟಿಸಿ ಪಾಲಿಸಿ ಪುನಃ ॥
ಕೆಡಿಸುವೆ ಸ್ವೇಚ್ಛೆಯಲಿ ವೈದರ್ಭೆ ಸತ್ರಾಜಿತೆ ಕೃತಿ ।
ಯೊಡತಿ ಜಯಮಾಯಾ ಹಸೆಗೇಳು ೪

ಪ್ರಾಣೇಶ ವಿಠಲನೊಳು ದ್ವೇಷಿಪ ।
ಹೀನರ ಸಂಹರಕೋಸುಗ ಶರ ॥
ಪಾಣಿಯಾಗಿಹಳೆ ಶ್ರುತಿ ವೇದ್ಯೆ । ಶ್ರುತಿವೇದ್ಯೆ ದೇವದೇವಿಕ ಅಹಿ
ವೇಣಿ ಶುಕವಾಣಿ । ಹಸೆಗೇಳು ೫

## ೨೫೮

## ಮುಯ್ಯದ ಪದದಲ್ಲಿಯ ಲಕ್ಷ್ಮೀದೇವಿಯ ಸ್ತುತಿ

ಮಾಯೆ ವಾಸುದೇವನಾ ।
ಜಾಯೆ ಪೊಂದೀದೆ ಯನ್ನ
ಕಾಯೆ ನಿನ್ನವಾನೆಂದು
ತಾಯೆ ಸುಕಾಯೆ ೧

ಇಂದೀರೆ ಸರಸೀಜ
ಮಂದೀರೆ ನಿನ್ನ ಪಾದ ॥

ಪೊಂದೀರೆ ಭವದೊಳು
ನೊಂದೀರೆ ನೀರೆ ೨

ಗುರು ಪ್ರಾಣೇಶಾ ವಿಠ್ಠಲ
ಗೆರಗೀ ನಿನ್ನ ವಂದೀಸಿ
ಬರೆವೆ ಮುಯ್ಯಾದ ಕಥೀಯಾ
ಕರುಣೀಸು ಮತೀಯಾ ೩

## ಮಂಗಳಾರತಿ ಕೀರ್ತನೆಗಳು

### ೨೫೫

ಮಂಗಳಂ ಜಯ ಮಂಗಳಂ । ಜಯ
ಮಂಗಳಂ ಪರಮೇಷ್ಟಿ ಜನಕ ಉಪೇಂದ್ರಾ ಪ

ವೇದ ಉದ್ಧಾರ ಶ್ರೀ ಬಾದರಾಯಣ ಮಧು ।
ಸೂದನ ಅಮರರ ಕಾಯ್ದ ದಯಾಬ್ಧೀ ೧

ನಂದಗೋಪಾತ್ಮಜ ಸಿಂಧೂರ ಪಾಲ ಮು- ।
ಕುಂದ ಪಾಲಿಪುದೆನ್ನ ಇಂದೀವರಾಕ್ಷಾ ೨

ತುಂಗ ವಿಕ್ರಮನೆ ಕಾಳಿಂಗ ಮರ್ದನ ದೇವಾ ।
ಗಂಗ ಜನಕ ಶ್ರೀ ವಿಹಂಗ ವಾಹನನೇ ೩

ಸಣ್ಣರೂಪದಿ ಬಲಿಯನ್ನು ತುಳಿದ ಶ್ರೀ ವಾ- ।
ಮನ್ನ ಕ್ಷಿತಿಪಹರ ಪನ್ನಜನಾಭಾ ೪

ಪ್ರಾಣೇಶ ವಿಠಲ ಶ್ರೀ ಮಾನಿನಿ ಪ್ರತಿ ಶತ ।
ಮೀನಾಂಕ ಲಾವಣ್ಯ ಭಾನು ಪ್ರಕಾಶಾ ೫

## ೨೬೦

ಮಂಗಳಂ ಜಯ ಮಂಗಳಂ । ಶುಭ
ಮಂಗಳ ಅಕ್ರೂರ ವರದನಿಗೇ ಪ

ಕ್ಷರ ಅಕ್ಷರ ಪುರುಷ ವಿನುತಗೇ ।
ಕ್ಷೀರಸಾಗರದಿ ನಿವಾಸನಿಗೇ ॥
ಪಾರಶರನ ಸುತ ಬಾದರಾಯಣನಿಗೆ ।
ಮಾರನಪಿತ ಮಧುಸೂದನಗೇ ೧

ಶುಂಡಲವರದ ಮೃಡ ನರ ಸಖಗೇ ।
ಪಾಂಡವ ಪಕ್ಷ ಕೌರವಾ ಶಿಕ್ಷಾಗೆ ॥
ಲೆಂಡ ಚಾಣೂರ ಮುಷ್ಟಿಕರ ಸಂಹಾರಗೇ ।
ಅಂಡಜವಹನಿಗೆ ಸರ್ವನಾಮಗೇ ೨

ಸಚ್ಚಿದಾನಂದ ಪೂರ್ಣ ಶಾಮನಿಗೇ ।
ಮತ್ಸ್ಯ ವಾಮನ ನರಸಿಂಹನಿಗೇ ॥
ಹೆಚ್ಚಿನ ಹಯವೇರಿ ಮೆರವ ದೇವಗೆ ಭಕ್ತಾ ।
ವತ್ಸಲ ಶ್ರೀ ಪ್ರಾಣೇಶ ವಿಠ್ಠಲನಿಗೇ ೩

## ೨೬೧

ಮಂಗಳಂ ಮಂಗಳಂ । ಜಡ
ಜಂಗಮ ವ್ಯಾಪ್ತ ನಿರ್ಲಿಪ್ತ ಸು ಕಲ್ಕೀ ಪ

ತುಚ್ಛೇತರಜ್ಞ ಭಿ । ಭತ್ಸು ಪೂಜಿತ ಪಾದ ।
ವತ್ಸ ಲೇಖಪ ಭಕ್ತ । ವತ್ಸಲ ಹರಿತೇ ೧

ವಿದ್ಯುನಾಥನೆ ಕೋಟಿ । ವಿದ್ಯುಧ್ಥ ಲೋಕೇಶ ।
ಶುದ್ಧ ಸತ್ವಾಂಗ ಪ್ರಸಿದ್ಧ ಪುರುಷ ತೇ ೨

ಪ್ರಾಣೇಶ ವಿಠಲ ಕ । ಲ್ಯಾಣ ಮೂರುತಿ ದಾಸ ।
ಮಾನಸ ನಿಲಯ ವಿಜ್ಞಾನದಾಯಕತೇ ೩

## ೨೬೨

ಮಂಗಳಂ ಮಂಗಳಂ । ದೇವ
ಗಂಗಜನಕ ಶ್ಯಾಮಲಾಂಗ ಮುರಾರೇ ಪ

ಸಾಮಜ ಪಾಲ ಅ । ಸಮಾನ ಮೂರ್ತೆ ಸು ॥
ಸಾಮಗ ಭೂಮ ತ್ರಿ । ಧಾಮ ಶ್ರೀ ರಾಮ ತೇ ೧

ದಕ್ಷಿಣ ಪೂಜ್ಯ ಸಂ । ರಕ್ಷಣ ಗೋಕುಲ ಜಗ ॥
ತ್ಕುಕ್ಷೆ ಹೇ ಪಾಂಡವ । ಪಕ್ಷಾನಪೇ ತೇ ೨

ದೀನ ಮಂದಾರ ವಿ । ಹೀನ ವಿಕಾರ ರ– ।
ಮಾನಾಥ ಶ್ರೀ ಪ್ರಾಣೇಶ ವಿಠ್ಠಲ ತೇ ೩

## ೨೬೩

ಜಯ ಮಂಗಳಂ ನಿತ್ಯ ಶುಭ ಮಂಗಳಂ ಪ

ಕೋಪದಿಂ ಭೂಪರಳಿದವಗೆ ಋಷಿವರ್ಯಗೆ ।
ಶ್ರೀಪಾದ ಜಲದಿ ಉದ್ಧರಿಸಿದವಗೇ ॥
ಭೂಪ ಲೀಲಿಯ ತೋರಿ ತುರಗ ಕಟ್ಟಿದವನಿಗೆ ।
ಶ್ರೀ ಪೂಜ್ಯ ನಿರ್ದೋಷ ವರ ಕಪಿಲಗೇ ೧

ಪಡದ ತಾಯಿಗೆ ತತ್ವ ಉಪದೇಶ ಮಾಡ್ದವಗೇ ।
ಕಡು ದಯಾವಂತ ಸಾಮಗ ದೇವಗೇ ॥
ಬಿಡದೆ ಸ್ತ್ರೀ ಪುರುಷರಲಿ ನಾಲ್ಕು ರೂಪದಲಿಪಗೆ ।
ನಡುಗೇಹ ಸುತಗೊಲಿದ ಮುನಿಪುತ್ರಗೇ ೨

ಕಪಟರೂಪದಿ ರಾಯ ಸುತನಂಗ ಬೇಡ್ದವಗೆ ।
ಶಪಿಸಲ್ಕೆ ಶಿಲಿಯಾದ ಚರಣಧರಗೇ ॥
ಅಪರಿಮಿತ ಮಹಿಮ ಶ್ರೀ ಪ್ರಾಣೇಶ ವಿಠ್ಠಲನಿಗೆ ।
ಶಫರಾದಿ ದಶರೂಪ ತಾಳ್ದ ಹರಿಗೇ ೩

## ೨೬೪

ಮಂಗಳಂ ಮಂಗಳಂ ಪ

ಮೂಜ್ಜಗದೊಡಿಯಗೆ ಮಾರಶತ ಲಾವಣ್ಯನಿಗೆ ।
ಅರ್ಜುನ ಸಖ ಸಮಾಧಿಕ ಶೂನ್ಯಗೇ ॥
ದುರ್ಜನರ ಸಂಹಾರಿ ಹತ್ತಾವತಾರನಿಗೆ ।
ಸಜ್ಜನಮನ ಮಂದಿರಗೆ ಸ್ವಾಮಿಗೇ ೧

ಜಾನಕೀ ರಮಣಗೇ ರಘುನಾಥ ಜಗದೀಶಗೆ ।
ಮೌನಿ ಕುಲ ಸನ್ಮಾನ್ಯ ವಿಧಿ ಪೂಜ್ಯಗೇ ॥
ಏನೆಂಬೆನದ್ಭುತ ಚರಿತ್ರೆ ತೋರಿಸುವನಿಗೆ ।
ಶ್ರೀನಿವಾಸನಿಗೆ ಪುರುಷೋತ್ತುಮನಿಗೇ ೨

ತೃಣ ಮೊದಲು ಮಾಂತ ಚೇಷ್ಟಪ್ರದಗೆ । ಸುಂದರಗೆ
ಗುಣಪೂರ್ಣನಿಗೆ ಭೈಷ್ಮಿ ವಲ್ಲಭನಿಗೇ ॥
ಅನಿಮಿಷಾರ್ಚಿತ ಪಾದ ಪ್ರಾಣೇಶ ವಿಠಲನಿಗೆ ।
ಘನ ವರ್ಣನಿಗೆ ಪರಾಶರ ಸುತನಿಗೇ ೩

## ೨೬೫

ಮಂಗಳ ವಿಶ್ವವ್ಯಾಪ್ತ ವಿಶ್ವಭಿನ್ನನಿಗೇ ।
ಮಂಗಳ ಸರ್ವನಾಮ ಸರ್ವರೂಪನಿಗೆ ॥
ಮಂಗಳಾನಂತಾ ಅನಂತ ಮಹಿಮಗೆ ।
ಮಂಗಳ ವಾಯುವಹನಗೆ ಜಗನ್ಮಾತೆಗೆ ॥
ಮಂಗಳವೆನ್ನೀ ಮುದದಿಂದ ಪ

ಕೇಶವಗೆ ಶ್ರೀದೇವಿಗೆ ನಾರಾಯಣ ಲಕ್ಷುಮಿಗೆ ।
ಈಶ ಮಾಧವಗೆ ಕಮಲೆ ಪದಗಳಿಗೇ ॥
ದೋಷಹ ಗೋವಿಂದನಂಘ್ರಿಗೆ ಪದ್ಮದೇವಿಗೆ ।
ಶೇಷಶಯನ ವಿಷ್ಣುವಿಗೆ ಪದ್ಮಿಣಿ ದೇವಿಗೇ ॥
ಮೀಸಲಾರುತಿಯಾ ಬೆಳಗೀರೆ ೧

ಮಧು ರಿಪುವಿಗೆ ಕಮಲಾಲಯ ಪದಗಳಿಗೇ ।
ವಿಧಿನುತ ತ್ರಿವಿಕ್ರಮಗೆ ರಮ ಜನನಿಗೇ ॥
ನದಿ ಪಿತ ವಾಮನನಂಘ್ರಿಗೆ ವೃಷಕಪಿಗೆ ।
ಬುಧಜನಾರ್ಚಿತ ಶ್ರೀಧರಗೆ ಧನ್ಯದೇವಿಗೆ ॥
ಸುದತಿಯರಾರುತಿಯಾ ಬೆಳಗೀರೆ ೨

ಹೃಷಿಕೇಶನಂಘ್ರಿಗಳಿಗೆ ಮಂಗಳದೇವಿಗೆ ।
ಬಿಸಜನಾಭ ಬುದ್ಧಿಗೆ ದಾಮೋದರಿಂದಿರೀಗೆ ॥
ವಿಷಕಂಠಾರ್ಚಿತ ಸಂಕರುಷಣ ಹರಿಣಿಗೆ ।
ಅಸಮ ವಾಸುದೇವಗೆ ದಕ್ಷಿಣ ದೇವಿಯಂಘ್ರಿಗೇ ॥
ಶಶಿಮುಖಿಯಾರಾರುತಿಯಾ ಬೆಳಗೀರೆ ೩

ಅನಘಾ ಶ್ರೀ ಪ್ರದ್ಯುಮ್ನಗೆ ನಿತ್ಯಾ ಎಂಬಳಿಗೇ ।
ಅನಿರುದ್ಧಗೆ ಆನಂದದೇವಿ ಪದಗಳಿಗೆ ॥
ಮುನಿಗೇಯ ಪುರುಷೋತ್ತಮಂಗೆ ಸದಶ್ರಯಳಿಗೇ ।

ಘನ ನಿಭಾಧೋಕ್ಷಜ ದೇವಾಗೆ ಶುಭದೇವಿಗೇ ॥
ವನುತಿಯರಾರುತಿಯಾ ಬೆಳಗೀರೆ ೪

ನರಸಿಂಹಗೆ ಯಜ್ಞಳಿಗೆ ಅಚ್ಯುತ ಸುಖದೇವಿಗೆ ।
ವರದ ಜನಾರ್ದನ ಸೌಗಂಧಿದೇವಿಯಳಿಗೇ ॥
ವರ ಉಪೇಂದ್ರ ಸುಂದರಿಗೆ ಹರಿಗೆ ವಿದ್ಯದೇವಿಗೆ ।
ಕರುಣಿ ಕೃಷ್ಣ ಪ್ರಾಣೇಶ ವಿಠ್ಠಲ ಸುಶೀಲಿಗೇ ॥
ತರುಣಿಯರಾರುತಿಯಾ ಬೆಳಗೀರೆ ೫

## ೨೬೬

ಶ್ರೀ ನಾರಸಿಂಹಾ ಕಾಯೊ । ದಾನವಾನೀಕಾಧ್ವಾಂತಾ ॥
ಭಾನು ಕಾಮಿತ ಸುರಧೇನು ಪ

ಘೋರ ದುರಿತಾ ಪರಿಹಾರ ಮಾಳ್ಪರ ಕಾಣೆ ।
ವೀರಾ ನಿನ್ನುಳಿದು ಇನ್ನಾರಾ ೧

ಭೀಷಾಣ ಉಗ್ರ ವಿಶ್ವ ವಾಸಾ ಭದ್ರಾನೆ ಸ್ವ ಪ್ರ ।
ಕಾಶಾ ಮೃತ್ಯು ಮೃತ್ಯು ನಿರ್ದೋಷಾ ೨

ಪ್ರಬಲಾ ನೀ ತುಚ್ಛಮಾಡಿ ಅಬಲಾರ ಕೈಬಿಡಲು ।
ಸುಬಲಾರ್ಮೇಚ್ಚೋರೆ ಶಾಮ ಸಬಲಾ ೩

ಜ್ಞಾನ ಶೂನ್ಯ ನಾ ನಿನ್ನ ಧ್ಯಾನವ ಮರೆತರೆ ।
ನೀನು ಹಾಗೆ ಮರಿಯಬೇಕೇನೂ ೪

ಎಲ್ಲಾರಿಗೊಡಿಯಾ ಲಕ್ಷ್ಮೀ ನಲ್ಲಾ ಪ್ರಾಣೇಶ ವಿಠಲಾ ।
ಬಲ್ಲೀದ ಭಯವಾ ಕಳಿಯಬಲ್ಲೀ ೫

## ಉಗಾಭೋಗ

### ೨೬೭

ದ್ವಯ ಪರ್ವ ನಾಮಿಕ । ಕನಿಷ್ಠಾದಿ ಕ್ರಮ ತರ್ಜ- ।
ನಿಯ ಮೂಲ ತನಕ ಗಾಯಿತ್ರಿ ಮಂತ್ರಾ ॥
ನಯದಿಂದ ಶಕ್ತ್ಯಾನುಸಾರ ಜಪಿಸಲು ರಮಾ ।
ಲಯ ಸು ಪ್ರಾಣೇಶ ವಿಠಲನ ಕಾಂಬರೂ ೧

### ೨೬೮

ಮಂಗಳಂ ಮಂಗಳಂ । ಜಯ
ಮಂಗಳ ಶ್ರೀ ಸುಧೀಂದ್ರಾಬ್ಧಿಜ ಚಂದ್ರಾ ಪ

ನಾಭಿಜ ನಾಭಿಜ ನಾಭಿಜ ಪದ ಕಂಜ ॥
ಶೋಭಿತ ಕೇಳಿ ಬಿಡದೆ ಮನಾಳೀ ೧

ಕೋಲಜ ಕೂಲ ವಿಶಾಲ ಮಂತ್ರಾ ಮಂದಿರಾಲಯ ॥
ವಾಲಯ ಪಾಲಯಮಾಂ ಗುರು ೨

ಏನೇನು ಮಾಡಲು ನೀನೊಲಿಯದಲೆಂದು ॥
ಪ್ರಾಣೇಶ ವಿಠಲನ ಕಾಣರೋ ಜನರೂ ೩

### ೨೬೯

ಮಂಗಳಂ ಮಂಗಳಂ ಜಯ
ಮಂಗಳ ಭುವನೇಂದ್ರ ಪೂಜ್ಯ ಪದಾಬ್ಜಾ ಪ

ಪಿಂಗಳ ಭಂಗ ಸುಸಂಗನ್ನೈವಾದಿ । ಭು-
ಜಂಗ ವಿಹಂಗ ಉತ್ತುಂಗ ನಿಸ್ಸಂಗಾ ೧

ದಾತ ವಿಖ್ಯಾತ ವಿಧಾತಾಂಶ ಸದ್ಗುಣ ।
ವ್ರಾತಿಳೇಂದ್ರ ಕರಜಾತ ಸುನಾಥಾ ೨

ಪ್ರಾಣೇಶ ವಿಠಲನ ಪ್ರಾಣ ಪ್ರವೀಣ । ಸು
ಪ್ರಾಣ ಮತಾಬ್ಧಿ ಪಾರೀಣ ಕಲ್ಯಾಣ ೩

೨೭೦

ಶೋಭನ ಶ್ರೀ ಭೂ ದುರ್ಗಿಗೆ
ಶೋಭನ ಜಯ ಮಾಯಾಕೃತಿಗೆ ।
ಶೋಭನ ಶಾಂತಿ ಜಯಂತಿಗೆ । ಶೋಭನವೇ ಪ

ಕಡು ಹರುಷದಿ ದಿವಿಜರು ದನುಜರು ।
ಕಡಲನು ನಗದಿಂ ಮಥಿಸುತಲಿರೆ ।
ಸಡಗರದಿಂದಲಿ ಪಯೋನಿಧಿಯೊಳಗುದ್ಭವಿಸಿದ ।
ಬಡ ನಡುವಿನ ಸುಂದರಿಯ ರಾಮನ ।
ಮಡದಿ ಸೂಸುಕವಾ ಮುಡಿ ಬಾರೇ ೧

ಕಮಲಜ ಈರ ಭವ ಸುರೇಂದ್ರರ ।
ರಮಣಿಯರಾನಂದದಿ ಪರಿಪರಿ ।
ಸುಮನಗಳಿಂ ನಿರ್ಮಿಸಿದ ಪ್ರತಿಯೆಂಬಾ ಸೂಸುಕವ ।
ಸುಮನದಲರ್ಪಿಸಲೈತಂದರೆ ।
ರಮೆ ತ್ವರ ದಯಮಾಡಿ ಮುಡಿ ಬಾರೆ ೨

ಪ್ರಾಣೇಶ ವಿಠ್ಠಲನ ವಕ್ಷಸ್ಥಳ ।
ನೀನಾಶ್ರಯಿಸಿಹೆ ಅದಕಿನ್ನೊರ ।
ಕ್ಷೋಣಿಯೊಳಗಿಲ್ಲೆಲೆ ಭೂಷಣಗಳು ಆದರೂ ।
ಸೇವಕರ ಆನಂದಾಭಿವೃದ್ಧಿಗೆ ತಂದ ಪ್ರ
ಸೂನ ಪವಿತ್ರವಗೈಸಲ್ಕೇ ನೀ ಮುಡಿ ಬಾರೇ ೩

## ೨೭೧

ಜೋ ಜೋ ಇಂದಿರೆ ಲಕುಮಿ ಜಯಂತೆ ।
ಜೋ ಜೋ ದಿನಮಣಿ ವಿಧುಕೋಟಿ ಕಾಂತೆ ॥
ಜೋ ಜೋ ಅಕ್ಷರೆ ಅಸುರ ಕೃತಾಂತೆ ।
ಜೋ ಜೋ ಕರುಣಾವಾರಿಧೆ ಜಯವಂತೆ ॥ ಜೋ ಜೋ ಪ

ಧಾಮತ್ರಯಾಂಬರಾಲಂಕಾರ ಯುಧಳಾಗಿ ।
ಸ್ವಾಮಿ ಸೇವೆಯ ಮಾಡಿ ಸಾಲದೆ ನೀ ಪೂರ್ಣ ॥
ಕಾಮಳಾದರೂ ಯಿನ್ನು ಆತಸಲ್ಲಿಪೆ ಗುಣ ।
ಸೀಮೆಯಿಲ್ಲದವು ನೋಡುತಲಿ ಹಿಗ್ಗುವಳೆ ೧

ಪ್ರಳಯ ಕಾಲದೊಳಾರಾರಿಲ್ಲದಾಗಲು ಆಲ ।
ದೆಲೆಯಾಗಿ ಸಂತೋಷದಿಂದ ಗಂಡನ ಮೇಲೆ ॥
ಮಲಗಿಸಿಕೊಂಡು ಕೃತಾರ್ಥಳಾದೆಲೆ ತಾಯಿ ।
ಭಳಿರೆ ನಿನ್ನೆಷ್ಟು ಬಣ್ಣಿಪೆ ಜಗನ್ಮಾತೆ ೨

ಎಲ್ಲರ ಗುಣ ವಿಚಾರಿಸಿ ಮಾಲಿಕೆಯ ಖಳ ।
ದಲ್ಲಣನಿಗೆ ಹಾಕಿ ಸತಿಯೆನಿಸಿದೆ ದೇವಿ ॥
ಎಲ್ಲೆಲ್ಲಿ ಪತಿಯ ಅಪ್ರತಿ ರೂಪವಿಹುವೋ ನೀ ।
ನಲ್ಲೆಲ್ಲ ವಕ್ಷದೊಳಿಹ ಭಾಗ್ಯವಂತೆ ೩

ಧನುಕೊಂಡು ಶಕ್ರ ನರಕರೊಳು ಕಾದಿದೆ ।
ದನುಜನ ವಂಚಿಸಿ ನಿಜ ರಮಣನಯ್ದಿದೆ ॥
ವನಜ ಜಾಂಡವ ಬಸುರೊಳಗಿಟ್ಟು ಪಡೆದೆ ಪ- ।
ವನ ಮಾತೆ ವಿಖ್ಯಾತೆ ಶರನಿಧಿ ಜಾತೆ ॥ ಜೋ ಜೋ ೪

ಮಾನಿ ಜಯಾ ಮಾಯಾಕೃತಿ ಶಾಂತೆ ಶ್ರೀ ಸೀತೆ ।
ಜ್ಞಾನಿ ಅಂಭ್ರುಣಿ ದುರ್ಗೆ ದಕ್ಷಿಣೆ ನೀ ಯನ್ನ ॥

ಹೀನತೆಯೆಣಿಸದೆ ಪೋಣಿಸಿ ಸನ್ಮತಿ ।
ಪ್ರಾಣೇಶ ವಿಠಲನ ಧ್ಯಾನದೊಳಿರಿಸೆ ॥ ಜೋ ಜೋ ೫

## ೨೭೨

ರೋಚನ ಪೂರ್ವೇಂದ್ರಾ ಧೀರ ಪರಾಕು ।
ಖೇಚರ ಸರ್ವ ಚೇಷ್ಟಕನೆ ಪರಾಕು ।
ಯಾಚಕರಿಗೆ ಕಲ್ಪತರುವೆ ಪರಾಕು ॥
ಸುಚಾಮೀಕರವರ್ಣ ದೇವ ಪರಾಕೆಂದು ।
ಸೂಚಿಸಿಯಾರತಿಯ ಬೆಳಗಿರೆ ಪ

ಜಾನಕೀಪತಿ ದೂತ ವಾಯು ಪರಾಕು ।
ದಾನವರಳಿದ ವಿಕ್ರಮನೆ ಪರಾಕು ।
ಜ್ಞಾನಿಗಳೊಡೆಯ ಕೇಸರಿಜ ಪರಾಕು ।
ದೀನರಕ್ಷಕ ಹನುಮಂತ ಪರಾಕೆಂದು ।
ಮಾಣಿಕದಾರತಿಯ ಬೆಳಗಿರೆ ೧

ದ್ವಾಪರಾನುಗರಾರಿ ಭೀಮ ಪರಾಕು ।
ಪಾಪಿ ಜರಾಸಂಧನ ವೈರಿ ಪರಾಕು ।
ಭೂಪರ ಸೆರೆ ಬಿಡಿಸಿದನೆ ಪರಾಕು ।
ದ್ರೌಪದೀಪತಿ ವೃಕೋದರನೆ ಪರಾಕೆಂದು ।
ದೀಪದಾರತಿಯ ಬೆಳಗಿರೆ ೨

ಗುರುಮಧ್ವ ಮುನಿರಾಯ ಆರ್ಯ ಪರಾಕು ।
ವರಗ್ರಂಥ ವಿರಚಿಸಿದವನೆ ಪರಾಕು ।
ಧರೆಯೊಳು ಬದರೀ ನಿವಾಸ ಪರಾಕು ।
ಸಿರಿ ಪ್ರಾಣೇಶ ವಿಠಲ ಪ್ರಿಯ ಪರಾಕೆಂದು ।
ಹರದಿಯರಾರತಿಯ ಬೆಳಗಿರೆ ೩

## ೨೭೩

ಜಯ ಮಂಗಳಂ ನಿತ್ಯ ಶುಭಮಂಗಳಂ ಪ

ಅಂಜನಾಸುತನಿಗೆ ಅಗಣಿತ ದನುಜ ಸಂಹರಗೆ ।
ಕಂಜನಾಭನ ಭಜನೆ ಮಾಡುವವಗೆ ॥
ಭುಂಜಿಸಿ ವಿಷವ ಸುರರ ಪಂಥವ ಗೆಲಿಸಿದವನಿಗೆ ।
ಸಂಜೀವನವ ತಂದ ಹನುಮಂತಗೆ ೧




ಕುಂತೀನಂದನ ವೃಕೋದರಗೆ ಅಘದೂರಗೆ ।
ಸಂತರೊಡೆಯಗೆ ದ್ರೌಪದಿಯರಸಗೆ ॥
ಅಂತರಾತ್ಮಜಗೆ ಉಪದೇಶವನು ಮಾಡ್ದವಗೆ ।
ಚಿಂತರಹಿತಗೆ ಭಕ್ತಜನಪಾಲಗೆ ೨

ಕಲಿಯುಗದಿ ಮಧ್ವಮುನಿಯಾಗಿ ಅವತರಿಸಿದಗೆ ।
ಹಲವು ಮತಗಳ ಸೋಲಿಸಿದ ಧೀರಗೆ ॥
ಸುಲಭ ಜ್ಞಾನವನು ಬುಧರಿಗೊರೆದ ದಯಾಸಾಗರಗೆ ।
ಕಲಿಹ ಪ್ರಾಣೇಶ ವಿಠಲನ ದಾಸಗೆ ೩

## ೨೭೪

ಮಂಗಳಂ ಜಯ ಮಂಗಳಂ ।
ಶುಭ ಮಂಗಳ ಶ್ರೀ ಕೃಷ್ಣೆ ವಲ್ಲಭಗೆ ಪ

ವೈನತೇಯಾಹಂಕಾರ ಪರಿಹರಗೆ ।
ಭಾನು ಪುತ್ರಾರಿಧ್ವಜವೇರಿದಗೆ ॥
ಸ್ಥಾಣು ರೂಪಗಳ ಕೋಟಿ ರೋಮದಿ ತೋರಿದಗೆ ।
ಆನಗಜ ವಂದ್ಯ ಪದಾಂಬುಜಗೆ ೧

ಪಾದೋದಕದಿ ಬಿದ್ದು ಎದ್ದವಗೆ ।
ಕಾದ ಬಂದವರ ವಧಿಸಿದವಗೆ ॥
ಹೇ ದಯಾಂಬುಧೆ ಕಾಯೆಂದಂಬೆ ಬಿನ್ನೈಸಲು ।
ಮೋದವಿತ್ತಹಿಗಳಿಗೊಲಿದವಗೆ ೨

ಗೋಪೀ ಚಂದನ ತಂದ ಮುನಿವರಗೆ ।
ಗೋಪೀ ಕಂದನ ಪ್ರತಿಷ್ಠಿಸಿದವಗೆ ॥
ಗೋಪಾರಿ ನಗ ಕುಲಿಶಗೆ । ತ್ರಯ
ರೂಪಗೆ ಶ್ರೀ ಪ್ರಾಣೇಶ ವಿಠಲನ ದೂತಗೆ ೩

೨೭೫

ಭಾರತೀ ರಮಣಗೆ ಮಂಗಳ ದ್ವಿಜ ।
ಮಾರಾರಿ ಮುಖ ವಿನುತಗೆ ಮಂಗಳ ಪ

ದೋಷ ರಹಿತಗೆ ಆಂಜನೇಯನಿಗೆ । ರಘುಪತಿ
ದಾಸ ಪವಮಾನಿಗೆ ಮಂಗಳ ॥
ಆಶೆಯಿಲ್ಲದೆ ಶ್ರೀಶನಂಘ್ರಿ ಪೂಜಿಸಿದಗೆ ।
ಶ್ವಾಸ ಸರ್ವರಲ್ಲಿ ಮಾಳ್ಪವಗೆ ೧

ಆಯುರಾಯಜ ಅಜಗರ ಸುತ್ತಿಕೊಳಲಾಗಿ ।
ನೋಯದಲಿದ್ದವಗೆ ಮಂಗಳ ॥
ಅಯೋನಿಜೆಗೆ ಪುಷ್ಪ ತಂದು ಕೊಟ್ಟವನಿಗೆ ।
ರಾಯ ಕೌರವರಳಿದವಗೆ ಮಂಗಳ ೨

ಲೋಕದೊಳಗೆ ಮಧ್ವರಾಯಗೆ ಸದ್ವೈಷ್ಣವರಾ
ಸಾಕುವ ಮುನಿಪಗೆ ಮಂಗಳ ॥
ಮಾಕಾಂತ ಪ್ರಾಣೇಶ ವಿಠ್ಠಲ ಸರ್ವೋತ್ತಮನೆಂದು ।
ಸಾಕಲ್ಯದಿಂ ಪೇಳಿದವಗೆ ಮಂಗಳಂ ೩

## ೨೭೬

ಜಯಮಂಗಳಂ ನಿತ್ಯ ಶುಭಮಂಗಳಂ ಪ

ಯೋಗೇಂದ್ರತೀರ್ಥ ಕರ ರಾಜೀವ ಪೂಜಿತಗೆ ।
ಭಾಗವತ ಜನ ಪ್ರಿಯರೆನಿಸುವರಿಗೆ ॥
ಯೋಗಿಗಳಿಗಧಿಪತಿ ಸುಧೀಂದ್ರ ಕರ ಜಾತರಿಗೆ ।
ಬಾಗಿ ವಂದಿಪರ ಸಲಹುವ ಸ್ವಾಮಿಗೆ ೧

ವರಹಜಾ ತೀರ ಮಂತ್ರಾಲಯ ನಿಕೇತನಗೆ ।
ಧರಣಿಯೊಳಗಪ್ರತಿಮ ಚರಿತೆ ತೋರ್ವವಗೆ ॥
ಕುರುಡು ಕಿವುಡಾದಿಗಳ ಬಯಕೆ ಪೂರೈಪರಿಗೆ ।
ವರ ಸುವೃಂದಾವನದಿ ಶೋಭಿಪರಿಗೆ ೨

ಆರಾಧನೆಯ ಜನರು ಮಾಡುವದು ನೋಡಲ್ಕೆ ।
ವಾರ ವಾರಕ್ಕಧಿಕವೆನಿಸುವರಿಗೆ ॥
ಮಾರಮಣ ಪ್ರಾಣೇಶ ವಿಠಲನಂಘ್ರಿ ಜಲಜಕೆ ।
ಆರುಪದವೆನಿಪಗೆ ಕರುಣಾ ಜಲಧಿಗೆ ೩

## ೨೭೭

ಶ್ರೀರಾಮಚಂದ್ರಾಂಘ್ರಿ ಸರಸೀರುಹ ಭೃಂಗನಿಗೆ ।
ಧೀರ ಸುಧೀಂದ್ರ ಕರ ಸಂಭೂತಗೆ ॥
ವಾರಾಹಿ ತೀರ ಮಂತ್ರಾಲಯ ನಿಕೇತನಿಗೆ ।
ಶ್ರೀ ರಾಘವೇಂದ್ರರಾಯರ ಚರಣಕೆ ೧

ಪರಮತ ಧ್ವಾಂತ ಭಾಸ್ಕರಗೆ ಸ್ವರ್ಣಾಭಗೆ ।
ಶರಣರಭಿಲಾಷೆ ಪೂರೈಸುವರಿಗೆ ॥
ದರುಶನಾದಿ ತ್ರಿಭಾಷದರ್ಥ ಬಲ್ಲವರಿಗೆ ।
ಮರುತ ಮತ ಕಡಲಿಗುಡುಪತಿಯೆನಿಪಗೆ ೨

ಪ್ರಾಣೇಶ ವಿಠ್ಠಲನವರೊಳು ಪ್ರೀತಿಯುಳ್ಳವಗೆ ।
ಕ್ಷೋಣಿಯೊಳು ಸರಿಯಿಲ್ಲದ ಮಹಿಮನಿಗೆ ॥
ಧ್ಯಾನಕ್ಕೆ ಬಂದೊದಗುತಿಪ್ಪ ಗುರುರಾಯರಿಗೆ ।
ಮೀನಾಂಕ ಜಿತಗೆ ದೇಶಿಕವರ್ಯಗೆ ೩
ಜಯಮಂಗಳಂ ನಿತ್ಯ ಶುಭಮಂಗಳಂ ॥

## ೨೭೮

ಜಯ ಮಂಗಳಂ ನಿತ್ಯ ಶುಭಮಂಗಳಂ ಪ

ಪುಣ್ಯಾಲಯ ನಿಲಯಗೆ ವಸುಧೇಂದ್ರ ಕುವರಗೆ ।
ಸನ್ನುತ ಜನ ಸುರತರು ರವಿತೇಜಗೆ ॥
ಪನ್ನಗಶಯನನ್ನ ಪದ ವನಜ ಭೃಂಗಗೆ ।
ಅನ್ಯಮತ ಜೀಮೂತ ಪವಮಾನಗೆ ೧

ಗುರು ಮಧ್ವಮುನಿ ಮತ ಜಲಧಿ ಪೂರ್ಣ ಚಂದ್ರಮಗೆ ।
ಧರಣಿ ಸುರ ವಂದ್ಯನಿಗೆ ಸ್ವರ್ಣಾಭಗೆ ।
ದುರ್ಮತಿಯ ಕಳೆದು ಸುಜ್ಞಾನ ಪ್ರೇರಿಸುವರಿಗೆ ।
ಹರಿಯೇ ಪರನೆಂದು ಮೆರೆಸಿದ ಮುನಿಪಗೆ ೨

ಪ್ರಾಣೇಶ ವಿಠಲನ್ನ ತನ್ನ ನೆನೆವರ ಮನದಿ ।
ಕಾಣಿಸಿಕೊಡುವ ಕೃಪಾ ಸಾಗರನಿಗೆ ।
ಮೀನಾಂಕಜಿತಗೆ ಅಗಣಿತ ಚರಿತೆ ತೋರ್ದವಂಗೆ ।
ಕ್ಷೋಣಿಯೊಳಗಪ್ರತಿವದಾನ್ಯಾರ್ಯಗೆ ೩

## ೨೭೯

ಜಯ ಮಂಗಳಂ ನಿತ್ಯ ಶುಭಮಂಗಳಂ ಪ

ಭುವನೇಂದ್ರ ಗುರುಕರ ಕಮಲದಿಂದ ಪೂಜಿತಗೆ ।
ಅವನಿಯೋಳ್ಪೆಸರಾದ ವರದೇಂದ್ರಗೆ ।
ಹವರನ ಮತಿಯ ಕೊಟ್ಟು ಅಜ್ಞಾನ ಕಳೆವರಿಗೆ ।
ಶಿವನೇ ಪರನೆಂಬುವರ ಶಿಕ್ಷಿಪರಿಗೆ ೧

ವಸುಧೇಂದ್ರ ತೀರ್ಥ ರಾಯರ ಪುತ್ರರೆನಿಪರಿಗೆ ।
ಬಿಸಜನಾಭನ ಚರಣ ಕಂಜಾಗಳಿಗೆ ।
ಝುಷಕೇತುವಿನ ಮೇಳ ತುಚ್ಛ ಮಾಡಿದವರಿಗೆ ।
ಅಸದೃಶ ಮಹಿಮ ಪಿಂಗಳ ತೇಜಗೆ ೨

ಕಿವುಡ ಅಂಧಕ ಕುಂಟರಿಗೆ ವರಗಳ ಕೊಡುವವಗೆ ।
ಭವ ಸಮುದ್ರವ ದಾಂಟಿಸುವ ಶಕ್ತಂಗೆ ।
ದಿವಿಜೇಶ ಪ್ರಾಣೇಶ ವಿಠಲನ್ನ ದಾಸನಿಗೆ ।
ಜವನ ಬಾಧೆಯ ಬಿಡಿಸಿ ಸಲಹುವವಗೇ ೩

## ೨೮೦

### ಶ್ರೀ ದೇವರ ಸ್ತೋತ್ರ

ಪಾಹಿ ಪಂಢರಿರಾಯಾ । ಮಾಂ ।
ಪಾಹಿ ಪಾಂಡವ ಪ್ರೀಯಾ ಪ

ಹಿಂದೆ ನಾನು ನಿನ್ನಾ । ದರುಶನ ।
ಕೆಂದು ಬಂದು ಘನ್ನಾ ॥
ನಂದದಿ ನಿಂದವನಾ । ರಕ್ಕಿಸಿ
ಮುಂದೆ ನಲಿದೆ ಚೆನ್ನಾ ೧

ಅಷ್ಟೆ ಮಾತ್ರ ಸಾಕು । ದುರಿತಗ ।
ಳಟ್ಟಿ ಕಾಯಬೇಕು ॥
ಮಟ್ಟು ಮಾಡಬೇಕು । ವಿಷಯಗ ।
ಳಟ್ಟಿ ಹಾಕಿ– ನೂಕು ೨

ಮರುತ ಮತದೊಳಿಟ್ಟು । ನಿನ್ನನು ।
ಸ್ಮರಿಪ ಭಾಗ್ಯಕೊಟ್ಟು ॥
ಗುರು ಪ್ರಾಣೇಶ ವಿಠಲ । ನಿನ್ನವನೆಂದು
ಕರ ಪಿಡಿದು ಕರೆಯೋ ೩

## ೨೮೧

ಪೊರಿಯ ಬೇಕೆಲಾ ।
ಮರಿ ನೀನು ಛಲಾ ಪ

ಏಸು ಜನ್ಮದಿ ನಿನ್ನ ದಾಸನೆನಿಸಿದೆ । ಉ ।
ದಾಸ ಮಾಡದೆ ಮಹಿದಾಸ ಎನ್ನನು ನೀ ೧

ನಿನ್ನನೆ ಮರೆವುದು ಎನ್ನ ಸ್ವಧರ್ಮವು ।
ನಿನ್ನ ಘನ್ನತಿಗಿದು ಸನ್ನು ಮತವೆ ಹರಿ ೨

ಸರುವಜ್ಞ ನೀನೆಂದೂ ಒರೆದವು ಶೃತಿಗಳು ।
ಮರೆವುದುಚಿತವೇನೊ ಗುರು ಪ್ರಾಣೇಶ ವಿಠಲಾ ೩

## ೨೮೨

ದಯಾನಿಧೆ ದಯ ಮಾಡಬೇಕು ।
ದಯ ಮಾಡಬೇಕು ಎನ್ನಯ ದೋಷಾವೆಣಿಸದೆ ।
ಹಯಮುಖ ಲೋಕಾತ್ರಯ ವ್ಯಾಪ್ತ ಪರಮಾಪ್ತ ಪ

ನಿನ್ನ ನಂಬಿದ ಭುಕುತರನ್ನ ಚೆನ್ನಾಗಿ ಕಾಯ್ದಾ ।
ಘನ್ನಾ ಕೀರುತಿ ಕೇಳಿ ಮನ್ನಾದಿ ನಮಿಸುವೆ
ಬನ್ನಾ ಬಡಿಸದೆ ಸಂಪನ್ನ ಗುಣಾರ್ಣವ ೧

ಮಾನಿ ಮಾನದನೇ ದ್ರೌಪದಿ ಅಭಿಮಾನ ರಕ್ಷಕನೆ ।
ಭಾನು ಜನಕ ಮುಖ್ಯಪ್ರಾಣ ವಂದಿತಾಂಘ್ರಿ ।
ನೀನೊಲಿಯದಿರೆ ಸುಜ್ಞಾನ ಮಾರ್ಗವ ಕಾಣೆ ೨

ಹರಿಕೋಟಿ ತೇಜಾ ಕಾಮಿತ ಕಲ್ಪತರು ಮಹರಾಜಾ ।
ಸುರ ನದಿ ಜನಕ ಅಸುರ ಶೀಕ್ಷಾ ಕಮಲಾಕ್ಷ ।
ಕರುಣಿ ಕಪಿಲ ವ್ಯಾಸಾ ಗುರು ಪ್ರಾಣೇಶ ವಿಠಲಾ ೩

## ೨೮೩

ಸುಖದ ಸುಂದರ ವಿಠಲರಾಯಾ । ಈ ।
ಭಕುತಗೆ ವಿಜ್ಞಾನ ಕೊಡು ಜೀಯಾ ಪ

ಸುಖತೀರ್ಥ ಶಾಸ್ತ್ರ ಸಮ್ಮತವಾಗಿ । ಈ ।
ಸುಕವನಕ್ಕೆ ವಾಕ್ಯವದಾಗಲಿ ॥
ಸಕಲ ಜನರು ಕೇಳಿ ಪಾಡಲಿ । ಇದು ।
ಮುಕುತಿಗೆ ಸತ್ಪಥವಾಗಲಿ ೧

ಆಯುರಾರೋಗ್ಯವು ಪೆಚ್ಚಲಿ । ಕೇಳಿ ।
ಮಾಯಾವಾದಿಗಳು ಬಾಯ್ಮುಚ್ಚಲಿ ॥
ಶ್ರೇಯಸ್ಸು ಬಂದು ಕೈಗೂಡಲಿ ॥ ಶ್ರೀ ॥
ವಾಯುದೇವನು ಪ್ರೀತನಾಗಲಿ ೨

ಗುರು ಪ್ರಾಣೇಶ ವಿಠ್ಠಲ ನೀನೂ । ತ್ವರ ।
ಕರ ಪಿಡಿ ಶರಣರ ಸುರಧೇನು ॥
ಮರತವನಲ್ಲವೊ ನಿನ್ನನು । ಈ ।
ಬಿರುದು ನಿನ್ನದು ಕರ ಮುಗಿವೆನೊ ೩

## ೨೮೪

ತಂದೆ ಪ್ರಾಣೇಶವಿಠ್ಠಲರಾಯ ಒಲಿದು ಆ ।
ನಂದ ಕೊಡು ಈ ಭಕ್ತಗೆ ॥
ಪೊಂದಿಕೊಂಡಿಹ ನಿನ್ನನೆಂದು ನಾ ಪ್ರಾರ್ಥಿಸುವೆ
ಮಂದರೋದ್ಧರ ಮುಕುಂದಾ । ನಂದಾ ಪ

ಅನವರತ ನಿನ್ನ ಧೇನಿಸುವಂತೆ ಮನವು ಬಹು ಅನುಕೂಲವಾಗಿರಲಿ ।
ಅನಘ ನಿನ್ನಂಘ್ರಿಗಳ ಪೂಜಿಸುವದಕೆ ಕರಗಳನುಕೂಲವಾಗಿರಲಿ ॥
ಅನಿಮಿಷಾರಾಧ್ಯ ನಿನ್ನ ಕೀರ್ತಿ ಪದಕೆ ಜಿಂಹೆ ಅನುಕೂಲವಾಗಿರಲಿ ।
ದನುಜಕುಲ ವೈರಿ ನಿನ್ನವರಡಿಗೆ ನಡಿಯೆ ಪದವನುಕೂಲವಾಗಿರಲೀ ಬರಲಿ ೧

ಇವನ ಕವನಾ ಕೇಳಿ ಹರುಷಯುತರಾಗಿ ಸತ್ಕವಿಗಳೂ ತಲಿದೂಗಲಿ ।
ಪವನ ಮತದಲಿ ಪೇಳಿದಂತೆ ಅದನನುಸರಿಸಿ ಕವಿತೆಯು ಬಂದೊದಗಲಿ ॥
ನವರಾಗಗಳಿಂದೊಪ್ಪಿ ಲಘು ದೀರ್ಘ ಮೊದಲು ಮರ್ಮವ ತಿಳಿದು ಪೇಳುತಿರಲಿ ।
ಭುವನದೊಳಗುಳ್ಳ ಸುಜ್ಞನರು ಶೋಧಿಸಿ ಆಶುಕವಿಯೆಂದು ಕರೆಯುತಿರಲಿ । ಮೆರೆಯಲಿ॥

ಚಿರಕಾಲ ಬಾಳಿ ಬಹು ಕೀರ್ತಿಯುತನಾಗಿ ಈ ಧರಿಯೊಳಗೆ ಸುಖಿಸುತಿರಲಿ
ಪರಮ ಭಕುತಿಯು ಪೆಚ್ಚಿ ಸೋತ್ತುಮರ ಪದಗಳಿಗೆ ಎರಗಿ ಕರುಣವ ಪಡೆಯಲಿ ॥
ಮರೆಯದಲೆ ಇಹಪರದಿ ಸುಖಗಳನು ಕೊಟ್ಟು ಶ್ರೀ ಹರಿಯೆ ಪೊರೆಯಂದಾಡಲಿ ।
ಮರುತಾಂತರ್ಯಾಮಿ ಗುರು ಪ್ರಾಣೇಶ ವಿಠಲನೆ ಶರಣ ಜನ ಕಾಮಧೇನೂ ನೀನು ೩

## ೨೮೫

## ಸುವ್ವಿ ಪದ

ಪಂಚಶರ ಪಿತನೆ ಅಹಿಮಂಚದಲಿ ಮಲಗಿಹನೆ ।
ಪಂಚಾನನಾದಿ ಸುರವಂದ್ಯ । ಸುರವಂದ್ಯ ದುರಿತಾರಿ ।
ಪಂಚಾಸ್ಯ ವದನ ಸಲಹೆಮ್ಮ ೧

ಅಂಬುಜಾಸನ ವಾಯು ಶಂಭುಸುರಮುಖ ಪೂಜ್ಯ ।
ಅಂಬುಜಾನಾಭಿ ಅರ್ಕಾಭಾ । ಅರ್ಕಾಭಾ ಎನ್ನ ಕು- ।
ಟುಂಬ ಸಲಹುವದೊ ನರಸಿಂಹ ೨

ಘೋರ ದುರಿತಗಳ ಪರಿಹಾರ ಮಾಳ್ಪರ ಕಾಣೆ ।

ನಾರಸಿಂಹನೆ ನಿನ್ನ ವ್ಯತಿರಿಕ್ತ । ವ್ಯತಿರಿಕ್ತ ।
ಕಾರುಣ್ಯಸಿಂಧು ಸಂಸಾರಾಬ್ಧಿಯಿಂದ ಕಡೆಗೆತ್ತೊ ೩

ಕಲಿಕಲುಷದಿಂ ಮನಸು ಮಲಿನವಾಗಿದೆ ದೇವ
ಉಳಿವ ಬಗಿ ಕಾಣೆ ಕಲಿಕಾಲ । ಕಲಿಕಾಲ ಕರುಣ ।
ದಲಿ ಸಲಹುವದು ನೀನೆ ಬಲ್ಲಿ ೪

ನೀನೊಲಿದು ಕೊಟ್ಟದ್ದು ಏನಾದರೂ ಇರಲಿ ।
ಸಾನುರಾಗದಲಿ ಸವಿವಂಥ । ಸವಿವಂಥ ಮತಿ ।
ಇತ್ತು ಗುರು ಪ್ರಾಣೇಶ ವಿಠಲಾ ಪೊರಿಯಮ್ಮಾ ೫

## ೨೮೬

ಶ್ರೀಹರಿ ಸ್ಮರಣೆಯ ಮಾಡೋ ಸ್ವಾಮಿ ॥ ಶ್ರೀ ಹರಿ ।
ಕುಹಕರ ಸಂಗಕೆ ಬ್ಯಾಡೋ ಪ್ರಾಣಿ ಪ

ಉರಿಹಸ್ತ ವರಕೊಟ್ಟು ಹರನು ಬಳಲಿದಾಗ
ತ್ವರದಿಂದವನ ಪೊರೆದ ಸುರನ ಸಂಹರಿಸಿದ ೧

ದಿತಿಜರ ಬಾಧೆಗೆ ಶತಮಖ ಪ್ರಾರ್ಥಿಸಲ
ಮೃತವ ಕರದು ಅಹಿತರನು ವಂಚಿಸಿದ ೨

ತರಳ ಪ್ರಹ್ಲಾದ ಕರ್ಬುರ ದೈತನ ಬಾಧಿಗೆ
ಹರಿಯೆಂದೊರಲವನ ಪೊರೆದು ದೈತ್ಯನ ತರಿದ ೩

ಶಿಷ್ಟೇಷ್ಟಪ್ರದ ಪರಮೇಷ್ಟಿ ಜನಕನಲ್ಲಿ
ಅಷ್ಟೆ ಕರ್ತೃತ್ವವಿರಲು ಇಷ್ವಾಕ ಬಳಲುವಿ ೪

ಗುರು ಮಧ್ವಾಂತರ್ಗತ ಗುರು ಪ್ರಾಣೇಶ ವಿಠಲ ವಿಠಲಾ
ಸುರ ಮುಖ್ಯರಳಿದು ತನ್ನ ಶರಣ ಜನರ ಪೊರೆದಾ ೫

೨೮೭

## ಉಪದೇಶಪರ ಪದ

ಯಾಯಾ ವರವ ನೀಡಿ ಶ್ರೀ ।
ಮಾಯಾ ರಮಣನ ಭಕುತರಿಗೆ ಪ

ಅರುಣೋದಯ ಕಾಲದಲೆದ್ದು ಶ್ರೀ ।
ಹರಿಸ್ಮರಣೆ ಮಾಡುತಲಿದ್ದು ॥
ಕರಚರಣಾದ್ಯವಯವ ಶುದ್ಧಿ ।
ವಿರಚಿಸಿ ನಿರ್ಮಲ ಮನವಿ ೧

ಆದ್ಯಂತ ಗುರುವಾದ ।
ಮಧ್ವರಾಯರ ಮತವ
ಪೊದ್ದಿದ ಭಗವದ್ದಾಸರು ಬಂದರೆ
ಇದ್ದಿಲ್ಲವು ಎಂದೆನ ಬ್ಯಾಡಿ ೨

ಘನ ಮಹಿಮ ನಾರಾಯಣನು ಇವ ।
ರನು ಕರತಂದಿಹನೆಂದರಿದೂ ॥
ಮನದಲಿ ಯೋಚಿಸಿ ।
ಸನುಮಾನವನು ಪಡುತಲಿ ೩

ಯಾಚನೆ ಮಾಡುವರೆಲ್ಲಾ ಬಲು ।
ನಾಚಿಕೆ ಉಳ್ಳವರೆಂದು ॥
ಖೇಚರ ವಾಹನ ಪ್ರಿಯರು ಶು– ।
ದ್ಧಾಚರಣೆಯವರೆಂದು ೪

ನರರಂತೆ ಇವರಲ್ಲ
ಗುರು ಪ್ರಾಣೇಶ ವಿಠಲನಂಘ್ರಿ ॥

ಸರಸೀಜ ಧೇನಿಸುತ ಯ
ಮ್ಮರ ಸುತ ಬಂದಿಹರೆಂದೂ ೫

## ೨೮೮

## ಲಕ್ಷ್ಮೀದೇವಿ ಸ್ತೋತ್ರ

ದಯಮಾಡೆ ದಯಮಾಡೆ ॥
ಹಯಮುಖನಿಗೆ ಅತಿ ಪ್ರಿಯ ಕಮಲಾಲಯೆ ಪ

ಹೊಲಬುಗಾಣೆ ಭವ ಜಲಧಿಯೊಳಗೆ ತ್ವರ ।
ಸಲಹು ನಿನ್ನ ಕರಜಲಜದಿ ಪಿಡಿದು ೧

ನಳಿನ ಭವಾದ್ಯರ ಸಲಹುವಿ ಈಪ್ಸಿತ ।
ಫಲವಿತ್ತು ಕರುಣದಲಿ ಮಹಲಕುಮಿ ೨

ಕ್ಷೋಣಿ ಭಣಗು ನಾನೋರ್ವನು ನಿನ್ನಯ ।
ಧ್ಯಾನವೆ ಪಾಲಿಸು ಮಾಣದೆ ಜವದಿಂ ೩

ಶರಣು ಪೊಕ್ಕವರ ಜರಿದರೆ ನನ್ನಯ ।
ಬಿರುದಿಗೆ ಬಾಹದೆ ಕೊರತೆಯು ಜಾನಕಿ ೪

ಜ್ಞಾನಗಮ್ಯ ಗುರುಪ್ರಾಣೇಶ ವಿಠಲನ
ಮಾನಿನಿ ಎನ್ನನು ಹೀನತೆ ಎಣಿಸದೆ ೫

## ೨೮೯

ಮಂಗಳಂ ಮಂಗಳಂ । ಜಯ । ಮಂಗಳ
ಶ್ರೀ ಶ್ರೀನಿವಾಸನರ್ಧಾಂಗಿ ಪ

ಭೃಗುಕಾಲಿಲೊದಿಯಲು । ಅಗಲಿ ಬಂದಳು ಎಂಬೋ ॥
ಬಗೆ ತೋರಿ ಮೋಹಿಸಿ ಇಗಡ ಜನರ ನಾ ॥ ಮಂಗಳಂ ೧

ಪರಮ ಧಾರ್ಮಿಕನಾದ । ವರನಾರಾಯಣ ಋಷಿ
ಗೊರವಿತ್ತು ನಡೆತಂದೆ । ಮೆರೆವ ಸನ್ನತಿಗೆ ॥ ಮಂಗಳಂ ೨

ಕೋಲಾಸುರನ ಕೊಂದು । ಪಾಲಿಸಿ ಪುರವನ್ನು ।
ಶೀಲೆ ಚಂದ್ರಾದೇವಿ ಆಳಿದಗೊಲಿದೆ ॥ ಮಂಗಳಂ ೩

ಆತ ತಕ್ಷಣದಲಿ । ಶ್ವೇತುರಾಯನ ಕೊಂದು ।
ಮಾತು ಲಾಲಿಸಿ ಅವನ ಪಾತಕ ಕಳದೆ ॥ ಮಂಗಳಂ ೪

ಗುರುಪ್ರಾಣೇಶ ವಿಠಲಾ । ಇರುವ ನೀನಿದ್ದಲ್ಲಿ
ಎರವಿಲ್ಲೀ ಮಾತಿಗೆ ಸುರರ ಸಮ್ಮತವೂ ॥ ಮಂಗಳಂ ೫

## ೨೯೦

## ಶ್ರೀ ವಾಯುದೇವರ ಸ್ತುತಿ

ಶ್ರೀಮದಾನಂದ ತೀರ್ಥರೆಂಬ ।
ಅರ್ಥೀಯ ಪೆಸರುಳ್ಳ ।
ಗುರುಮಧ್ವಮುನಿರಾಯ ।
ಏನೆಂಬೆ ನಾನಿನ್ನ ಕರುಣಕೆ ಎಣೆಗಾಣೆ ಪ

ಬ್ಯಾಸರದೆ ಸರ್ವರಲ್ಲಿ ।
ಶ್ವಾಸ ಜಪಗಳ ಮಾಡಿಗುಂ ॥
ಶ್ರೀಶಗರ್ಪಿಸುತ ಹರಿ ।
ದಾಸರನ್ನು ಪಾಲಿಸಿದೆ ೧

ಅಂದು ಹನುಮಂತನಾಗಿ
ಬಂದು ಸುಗ್ರೀವಗೆ ಗುರುಂ ॥
ಅಂದವಾದ ಪದವಿತ್ತಾ ।
ನಂದವನು ಬಡಿಸಿದೆ ಗುರುಂ ೨

ಕುಂತಿಯ ಕುಮಾರನಾಗಿ ।
ಹಂತ ಕೌರವರನ ಕೊಂದಿ ಗುರುಂ ॥
ಅಂತು ಪುಣ್ಯವ ಶ್ರೀ ।
ಕಂತು ಪಿತಗರ್ಪಿಸಿದೆಯೋ ೩

ಅದ್ವೈತರನು ಕಾದಿ ।
ಗೆದ್ದು ನಿನ ಭಕ್ತರಿಗೆ ಗುರುಮಧ್ವಮುನಿರಾಯ ॥
ಶುದ್ಧ ತಾತ್ಪರ್ಯ ವಾಕ್ಯ ।
ಪದ್ಧತಿಯ ತಿಳಿಸಿದಿ ಗುರುಂ ೪

ಗುರುಪ್ರಾಣೇಶ ವಿಠಲಾ
ಪರನೆಂದು ಡಂಗುರವ ಗುರುಂ ॥
ಸಾರಿಸಿ ಸಜ್ಜನರನ್ನು ।
ಹರಿಲೋಕ ಸೇರಿಸಿದಿ ಗುರುಂ ೫

## ೨೯೧

ಪವನಾ ಸಂಭೂತಾ ಒಲಿದೂ
ತವಕಾದಿ ಕಾಯಬೇಕೂ ।
ಇವನಾರೋ ಎಂದೂ ದಾಸಿನಾ ।
ಮಾಡದಲೆ ಎನ್ನಾ ಪ

ಹರಿವೇಷಧರನೆ ನರ ।
ಹರಿಭಕುತರ ಪೊರೆಯುವದಕ್ಕೇ ॥
ಹರಿಯಂತೆ ಒದಗುವೆಯೋ ನೀನೂ । ಹರಿದಾಸ ನಾನೂ ೧

ಕಪಿಪಾ ಕಪಿಯಾಜ್ಞದಂತೇ ।
ಕಪಿಲನ್ನ ಪತ್ನಿಯನ್ನೂ ॥
ಕಪಿಗಳು ಹುಡುಕಿ ಮಿಡುಕಲು । ಕಾಯ್ದೆ ಆವಾಗಲೂ ೨

ಅಜಸುತನ ಶಾಪದಿಂದ ।
ಅಜಗರನಾದ ವನಪಾದ ॥
ರಜದೀ ಪೂನೀತನ ಮಾಡಿದನೇ । ಅಜಪದವಿಗೆ ಬಹನೇ ೩

ಕಲಿಯುಗದಿ ಕವಿಗಳೆಲ್ಲಾ ।
ಕಲಿಯಾ ಬಾಧೆಗೆ ಬಳಲಿ ।
ಕಲಿವೈರಿ ಮುನಿಯೆಂದೆನಿಸಿದೇ । ಕಲಿಮಲವಾ ಕಳೆದೆ ೪

ಗುರು ಪ್ರಾಣೇಶ ವಿಠಲಾ ।
ಗುರುವರನೆಂಬೊ ಜ್ಞಾನಾ ॥
ಗುರು ಮಧ್ವರಾಯಾ ಕರುಣಿಸೋ । ಗುರುಮತಿಯನು ಬಿಡಿಸೋ ೫

## ೨೯೨

## ಸರಸ್ವತಿದೇವಿ ಸ್ತುತಿ

ವಾಣಿ ಬ್ರಹ್ಮನರಾಣಿ
ಜಾಣೆ ಸು । ಶುಕ ವಾಣಿ ಪ

ಪ್ರೀಯಳೇ ಹರಿಯಾ ।
ನವ ವಿಧದಿ ಭಜಿಸುವಾ ॥
ಕವಿಗಳೊಳಿಡಬೇಕು । ನಿನ್ನನೇ ಒಂದರಿಯಬೇಕು ೧

ವೀಣಾಪಾಣಿಯೆ ಪಿತನಾ ।
ಧ್ಯಾನಾದೊಳಿರಿಸೆನ್ನ ।

ಹೀನಾ ವೈಷಿಕಗಳನ ।
ನಾನೊಲ್ಲೆನನುಗಾಲಾ ೨

ಗುರುಪ್ರಾಣೇಶವಿಠ್ಠಲಾ ।
ತ್ವರಿತಾ ತಾನೊಲಿವಂತೆ ॥
ವರಮತಿಯನಿತ್ತೆಮ್ಮ ।
ಪೊರಿಯಲಿ ಬೇಕಮ್ಮಾ ೩

## ೨೯೩

## ರುದ್ರದೇವರ ಸ್ತುತಿ

ಮಹದೇವಾ ಮಹದೇವಾ ।
ಕಾಯೋ ಮಹದೇವ ಎನ್ನನೀ ॥
ನೋಯಗೊಡದೆ ತ್ವರ ।
ಪಾವನ ಮಾಡಿ ಪ

ಅಸಮ ರಕ್ಕಸಗೆ ।
ವಶವಾಗೆ ವನನು
ಬಿಸಜಾಕ್ಷಗೆ ಒಪ್ಪಿಸಿ ।
ಕೊಲಿಸಿದನೇ ೧

ನಂಜುಂಡರಗಿಸಿ ।
ದಂಜನೆ ಕುವರ ಪ್ರ ॥
ಭಂಜನ ಸುತನಾ
ನಂಜುವೆನೀಗಾ ೨

ಸೂಸುವ ಭವಶರ ।
ದೀಸದೆ ಗುರು ಪ್ರಾ ॥

ಣೇಶ ವಿಠ್ಠಲನ ।
ದಾಸ ಮಣಿಗುವೆ ೩

೨೯೪

## ಶ್ರೀ ಪ್ರಾಣೇಶದಾಸಾರ್ಯರ ಸ್ತುತಿ

ತೆರಳಿದರು ಪರಮ ತೋಷದಲಿ ಹರಿಪರಕೆ ।
ಹರಿಪ್ರೀಯರಾದ ಪ್ರಾಣೇಶದಾಸರು ತ್ವರದಿ ಪ

ನಿರುತದಲಿ ಹರಿಪೂಜೆ ।
ಮರಿಯದಲಿ ಮಾಡಿ ಬಲು ।
ಸ್ಥಿರ ಬುದ್ಧಿ ಪೂರ್ವಕದಲಿ ।
ಗುರುಗಳಲಿ ಸರ್ವಜ್ಞರಾಯರಿಂದಧಿಕ ಮ ॥
ತ್ತಿರಲುಂಟೆ ಎಂದು ತಿಳುಹಿ ।
ದುರುಳ ಜನರನುಸರಿಸದಲೆ ಕವಿಗಳೊಡನಾಡಿ ।
ಚರಿಸಿ ದೇಶಗಳಲ್ಲಿ ಮೆರೆದು ಖ್ಯಾತಿಯ ಪಡದು ೧

ಭಾಗವತ ಶ್ರೇಷ್ಟ ಜಗನ್ನಾಥ ದಾಸಾಖ್ಯರಡಿ ।
ಜಾಗುಮಾಡದಲರ್ಚಿಸಿ ।
ಭೋಗಿವರ ಶಯನ ಪ್ರಾಣೇಶವಿಠಲಾಂಕಿತವ ॥
ಆ ಗುರುಗಳಿಂದ ಕೊಂಡು ।
ರಾಗದ್ವೇಷಗಳೆಂಬ ಅರಿಗಳನು ಸಂಹರಿಸಿ ।
ರಾಗದಲಿ ಹರಿಕಥನ ಕವನ ರೂಪದಿ ಪೇಳಿ ೨

ಪ್ರಾಣಮತವನನುಸರಿಸಿ ಆಚರಣೆಯನು ಮಾಡಿ ।
ಪ್ರಾಣಿಗಳಿಗೆ ತಿಳಿಸದೆ ।
ಕ್ಷೋಣಿಯೊಳಗಿನ್ನು ಇರಸಾಕೆಂದು ಆ ।
ಚಿತ್ರಭಾನು ಅಶ್ವಯುಜ ಶುದ್ಧ ಸಪ್ತಮಿಯಲಿ ॥

ಜ್ಞಾನಪೂರ್ವಕ ಲಯ ಚಿಂತನೆಯ ಮಾಡಿ ಗುರು ।
ಪ್ರಾಣೇಶ ವಿಠಲನಿದ್ದಾ ಪುರಕೆ ಜವದಿಂದ ೩

## ೨೯೫

## ಶ್ರೀ ರಾಘವೇಂದ್ರಸ್ವಾಮಿಗಳ ಸ್ತೋತ್ರ

ತಂಗಿನೀ ಕೇಳಿದ್ಯಾ ರಾಘವೇಂದ್ರಾ । ಘಂಗಳ ಕಳದು ಸು
ಖಂಗಳ ಕೊಡುವದು ॥ ತಂಗಿ ನೀ ಕೇಳಿದ್ಯಾ ಪ

ಶ್ರೀ ಪೂರ್ಣಬೋಧರ ಮತಾಪಯೋಬ್ಧಿಗೆ ಚಂದ್ರ ।
ತಾಪಸೋತ್ತಮರ ದಿವ್ಯಾಪಾರ ಮಹಿಮೆಯ ೧

ಅಂಗಹೀನರಿಗೆ ದಿವ್ಯಾಂಗ ಕೊಟ್ಟರೆಂದು ।
ಸಂಗೀತ ಮುಖದಿ ಜನಂಗಳು ಪಾಡುವದು ೨

ಕಿವಿಯಿಲ್ಲದವರಿಗೆ ತವಕಾದಿ ಕೊಟ್ಟರೆಂದು ।
ಸುವಿವೇಕ ಮನದಿಂದ ಕವಿಜನ ಪಾಡುವದು ೩

ವಂಧ್ಯಾಸ್ತ್ರೀಯರು ಬಂದು ನಿಂದು ಆರಾಧಿಸೆ ।
ಸಂದೇಹವಿಲ್ಲ ಬಹು ಮಂದಿ ಮಕ್ಕಳ ಕೊಟ್ಟ ೪

ಗುರು ಪ್ರಾಣೇಶ ವಿಠಲಾ ಸರುವ ಕಾಮಿತಾರ್ಥವಾ ।
ಗುರು ರಾಘವೇಂದ್ರರಲ್ಲಿ ನಿರುತದಿ ಕೊಡಿಸುವ ೫

## ೨೯೬

ತಪ್ಪುಗಳೆಣಿಸಾದೆನ್ನಪ್ಪ ಕಾಯಲಿಬೇಕು ।
ಸರ್ಪಶಯನನ ದೂತಾ ॥

ಇಪ್ಪತು ಒಂದು ಕುಭಾಷ್ಯ ಮುರಿದ । ರಾ ಮ ।
ತ ಪ್ರವರ್ತಕ ರಾಘವೇಂದ್ರ ಮುನಿಪ ಮಹಾ ಪ

ಪ್ರತಿ ವರುಷಕೆ ಬಂದು ಸನುತಿಸಿ ಪೋಗು ಎಂದು ।
ನತ ಸ್ವಪ್ನದಲಿ ನೀ ಬಂದೂ ॥
ಹಿತದಿಂದ ಪೇಳಲು ರತನಾಗಿ ಧನದಿ ಮ ।
ರತು ಬಿಟ್ಟೆ ನಿಮ್ಮನು ಯತಿಕುಲೋತ್ತಮ ಇಂಥಾ ೧

ಸ್ನಾನ ಸಂಧ್ಯಾನ ಸುಜಪತಪ ವ್ರತಹೋಮ ।
ಮೌನ ಮಾರ್ಗಗಳರಿಯೆ ॥
ಜ್ಞಾನಿಗಳಾನು ಸಂಧಾನ ಪೂರ್ವಕ ಪೂಜೆ ।
ಯಾನು ಮಾಡದೆ ದುಷ್ಟ ಮಾನವರೊಳಗಿದ್ದೆ ೨

ಏಸು ಜನ್ಮದಿ ಬಂದಾ ದೋಷವ ಕಳದು ವಿ ।
ಶೇಷ ಸುಖವ ಕೊಡುವಾ ॥
ಈ ಸುವಾರ್ತೆಯ ಕೇಳಿ ಮೊರೆಹೊಕ್ಕೆ ಗುರು ಪ್ರಾ ॥
ಣೇಶ ವಿಠಲನ ದೂತಾ ಮತಪ್ರೀತಾ ೩

## ೨೯೭

## ಶ್ರೀ ಸತ್ಯಪರಾಯಣ ಸ್ವಾಮಿಗಳ ಸ್ತುತಿ

ಕಂಗಳು ದಣಿಯ ನೋಡೆಲೆ ಮನವೆ ।
ಮಂಗಳಾಂಗ ಸತ್ಯಪರಾಯಣ ಗುರುಗಳ ಪ

ಹಿಂದಿನ ಜನುಮದಿಂದ । ಬಂದ ಪಾಪಂಗಳ ॥
ಇಂದು ತಮ್ಮ ದರುಶನ । ದಿಂದ ಕಳದಾ ೧

ನಂದತೀರ್ಥ ಶಾಸ್ತ್ರ । ಸಿಂಧುವಿಗೆ ಪೂರ್ಣ ಚಂದ್ರಾ ।
ನಂದದಲೊಪ್ಪುವ ಗುಣ । ಸಾಂದ್ರರ ಪದಂಗಳ ೨

ವರಸೀತಾರಾಮ ಪದ । ಸರಸಿಜಕೆ ಮಧುಪಾ ॥
ಗುರುಪ್ರಾಣೇಶ ವಿಠಲಾ ನಿರಸಿಹ ಹೃದಯದಿ ೩

# ಶ್ರೀ ಶ್ರೀಶಪ್ರಾಣೇಶವಿಠಲರ ಹಾಡುಗಳು

೨೯೮ – ೩೧೭

## ೨೯೮

## ಶ್ರೀ ವೆಂಕಟೇಶ ದೇವರ ಸ್ತೋತ್ರ

ದಯಮಾಡೊ ದಯಮಾಡೋ
ಪಯಸಾಗರದೊಡೆಯನೆ ಶ್ರೀಕೃಷ್ಣಾ ಪ

ಬನ್ನಬಿಡಿಸುವರ್ಭಕನ ದುರಿತವ
ಘನ್ನ ಮಹಿಮ ನೀಜವದಿಂ ತರದು ೧

ನೀ ಪೊರಿಯದೆ ಜರಿದರೆ ಕಾಯ್ವರನಾ ।
ಈ ಪೊಡವಿಯೊಳೆಲ್ಲೆಲಿ ಕಾಣೇ ೨

ಶೇಷಗಿರಿ ನಿಲಯ ಬಿನ್ನಪ ಲಾಲಿಸೋ ।
ಶ್ರೀಶ ಪ್ರಾಣೇಶ ವಿಠಲ ದಯಾಳೋ ೩

## ೨೯೯

## ಶ್ರೀ ಅನಂತಶಯನನ ಸ್ತೋತ್ರ

(ಬೆಳಗಾವಿಯ ಶಹಪೂರ ಪೇಟೆಯ ಅನಂತಶಯನನು ಸ್ತುತಿಸುತ್ತ ಅಲ್ಲಿಯ ಕಟ್ಟಿಯ ಆಚಾರ್ಯರನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದ್ದು)

ನೋಡಿ ನಾನು ಧನ್ಯನಾದೆನು ಅನಂತಶಯನನ ।
ನೋಡಿ ನಾನು ಧನ್ಯನಾದೆನು ಪ

ನೋಡಿ ನಾನು ಧನ್ಯನಾದೆ ।
ರೂಢಿಯೊಳಗೆ ಮರುತಮಂದಿರ ।
ರೂಢಿ ಬೆಳಗಾವಿಯೊಳು ನಿಂದು ।
ಈಡು ಇಲ್ಲದೆ ಮೆರೆವ ದೇವನ ಅ.ಪ.

ಮೂಲರೂಪನು ವೈಕುಂಠ ಬಿಟ್ಟು ।
ಪಾಲ ಸಾಗರ ಶಾಯಿ ಶ್ರೀಲೋಲ ।
ಕಾಲಕಾಲದಿ ಭಕ್ತರ ಮೌಳಿ ।
ಪೊರಿಯಬೇಕೆಂದು ನಿಂದನ ೧

ಸಂತಾನ ಸಂಪತ್ತು ಜ್ಞಾನ ಸುಬುದ್ಧಿಯ ।
ನಂತ ಶಯನ ಇವರಿಗಾ ।
ನೆಂತು ಸುಖವ ನೀವೆನೆಂದು ।
ಸ್ವಾಂತದೊಳಗೆ ಬಂದು ನಿಂದನ ೨

ಶ್ರೀಶ ಪ್ರಾಣೇಶ ವಿಠಲರೇಯ ।
ಶ್ರೀ ಸಹಿತವಾಸ ವಾಗಿಲ್ಲ ।
ಭೂಸುರೋತ್ತಮ ಕಟ್ಟಿಯವರನ್ನ ।
ಪೋಷಿಸಬೇಕೆಂದು ನಿಂದನ ೩

## ೩೦೦

## ದಶಾವತಾರ ಸ್ತೋತ್ರ

ನಾರಾಯಣ ಗೋವಿಂದ । ಹರಿ ।
ನಾರಾಯಣ ಗೋವಿಂದ ।

ಪಾರಾಶರ ಸುತನಂದ । ಹರಿ ।
ನಾರಾಯಣ ಗೋವಿಂದ ಪ

ವೇದವ ಕದ್ದೊಯ್ಯಲು ಆತಮನಾ ।
ಬಾಧಿಸಿ ನಿಗಮವ ತಂದ ೧

ದಿವಿಜರು ಚ್ಯುತಬಲರಾಗಿರಲಮೃತವ ।
ದಿವಿಜರಿಗುಣಿಸಿದ ನಂದಾ ೨



ಖಳನು ಭೂಮಿಯ ಕದ್ದೊಯ್ಯಲುತಾ ।
ಪೊಳೆವ ಕೋರಿಯಲಿ ತಂದಾ ೩

ತರುಳನ ಪರಿಪರಿ ಬಾಧಿಸುತಿರಲಾ ।
ದುರುಳ ದೈತ್ಯನ ಕೊಂದ ೪

ಬಲಿಯಪರಾಧವ ನೊಂದೆಣಿಸದೆ ತಾ ।
ವರಿದು ಬಾಗಿಲಲಿ ನಿಂದ ೫

ಕ್ಷತ್ರಿಯ ಬಲವನೆಲ್ಲ ಸವರಿ ನಿ ।
(ಶ್ಚ) ಕ್ಷತ್ರರ ಮಾಡಿದ ನಂದಾ ೬

ವರಮುನಿ ಶಾಪದಿ ಶಿಲೆಯಾಗಿರಲು ।
ದ್ಧರಿಸಿದ ಪರಮಾನಂದಾ ೭

ಮಡದಿ ಗೋಪಿಯರ ಒಡನಾಡಿದ ।
ಪಾಲ್ಗಡಲ ಶಯನ ಮುಕ್ಕುಂದಾ ೮

ತ್ರಿಪುರದ ಸ್ತ್ರೀಯರ ವೃತಗೆಡಿಸಿದ । ವಟು ।
ವಪು ಮೃಡಮುಖ ಸುರವಂದ್ಯಾ ೯

ಪುರುಷೋತ್ತಮ ಯವನರ ಸಂಹರಿಸಿ ।
ತುರಗವನೇರಿ ನಿಂದಾ ೧೦

ಶ್ರೀಶ ಪ್ರಾಣೇಶ ವಿಠಲ ಈ ಸರ್ವರ ।
ಪೋಷಕ ನಾನಹುದೆಂದಾ ೧೧

## ೩೦೧

## ಶ್ರೀ ಮುಖ್ಯ ಪ್ರಾಣದೇವರ ಸ್ತೋತ್ರ

ಪಾಲಿಸಯ್ಯಾ ಶ್ರೀ । ಪ್ರಾಣರಾಯ । ಪಾಲಿಸಯ್ಯಾ ॥
ಪಾಲಿಸಯ್ಯಾ ಶ್ರೀ ಲೋಲನ ಭೃತ್ಯನೆ ।
ವಾಲಯದಲಿ, ಮಹದುರಿತವ ತರಿದು ಪ.

ಶರಣು ಪೊಕ್ಕವರ ಸಲಹುವನೆಂದು ।
ವರವೇದಂಗಳು ಸಾರುತಲಿಹವೊ ೧

ಶಿಶುವಿನ ತಪ್ಪೆಣಿಸದೆ ಆ ಜನನಿಯು ।
ಬಿಸುಟದೆ ತ್ವರದಿಂ ಕರುಣ ಮಾಳ್ಪವೋಲ್ ೨

ಶ್ರೀಶ ಪ್ರಾಣೇಶ ವಿಠಲನ ದಾಸಾಗ್ರಣಿ ।
ನೀ ಸದಾ ಕರುಣ್ಯುಪೇಕ್ಷ ಮಾಡದೇ ೩

## ೩೦೨

## ಸಂತಿಯ ಕೆಲವುರ ವಾಸನ ಸ್ತೋತ್ರ

(ಲಿಂಗಸುಗೂರಿನ ಹತ್ತಿರವಿರುವ ಸಂತಿಕೆಲೂರ ಗ್ರಾಮದಲ್ಲಿಯ ಪ್ರಾಣದೇವರು)

ಸಂತಿಯ ಕೆಲವುರವಾಸ ಭಾರತಿ ।
ಕಾಂತನು ಶ್ರೀ ಹರಿದಾಸಾ ॥

ಸಂತಸ ಸೇವಿಪರಘ ಓಡಿಸಿ । ನೀ ।
ಕ್ಷಿಂತರಮಾಡಿ ಪೊರೆವ ದಯಾಳೋ ಪ

ದಾಶರಥಿಯ ಪದಕೆರಗೀ । ನಿಂದು
ಲೇಸಾಗಿ ತುತಿಸುವ ಯೋಗೀ ॥
ಸಾಸಿರ ನಾಮನ ರಾಣಿಯಕಂಡು ।
ತೋಷದಿ ಸ್ವಾಮಿಗೆ ವಾರ್ತೆಯ ಪೇಳಿದ ೧

ಕುಂಚಿ ಕುಮಾರಕ ನೆನಸೀ । ಮಹ
ಹಂತ ಕೌರವರನೊರಸೀ ॥
ಕಾಂತಿಗೆ ಸೌಗಂಧಿಕ ಪುಷ್ಪವ ಮುಡಿಸಿ । ಶ್ರೀ
ಕಾಂತನ ಪ್ರಿಯ ಭೂಭಾರವನಿಳುಹಿದ ೨

ಆನಂದ ತೀರಥರಾಗಿ । ಪರ
ಮಾನಂದದಿ ಕುಮತವನೀಗಿ ॥
ನಂದನ ಸುತ ಶ್ರೀಶ ಪ್ರಾಣೇಶ ವಿಠಲಾ ।
ನಂದನೆ ಪರನೆಂದು ಡಂಗುರ ಸಾರಿದ ೩

## ೩೦೩

(ಲಿಂಗಸುಗೂರಿನ ಹತ್ತಿರ ಇರುವ ಬಾಗಿಸೋಪಿನ
ಗ್ರಾಮದ ಶ್ರೀ ಪ್ರಾಣೇಶನ ಸ್ತೋತ್ರ)

ಬಾಗಿ ಸೋಪಿಲಿ ವಾಸವಾಗಿಹ ।
ಯೋಗಿ ಪ್ರಾಣರಾಯಾ ॥
ಬಾಗುಮಾಡದೆ ಭಕ್ತರ ದುರಿತವ ।
ನೀಗಿ ಸಲಹಯ್ಯಾ ಪ

ಕಪಿಗಳೆಲ್ಲಾ ಸುಗ್ರೀವನ ಭಯದಿಂ ।
ತಪಿಸುತಲಿರೆ ಅವರಾ ॥
ಲಪನ ಕಾಣುತಲೆ ಅಭಯವನಿತ್ತು ।
ನಿಪೊರೆದೆ ಕಪಿವರಾ ೧

ಹಿಂದೆ ಭೂಸುರನು ಚಿಂತಿಸುತಿರಲಾ ।
ನಂದದಿಂದ ಏನಾ ॥
ಬಂಧನಾ ಬಿಡಿಸಿದೆ ಬಕನನು ಕೊಂದು ।
ತಂದೇ ಶ್ರೀಪವನಾ ೨

ಈಶನೆ ತಾನೆಂತೆಬುವ ಖಳರಾ
ಸೋಸಿನಲ್ಲಿ ಮುರಿದೇ ॥
ಶ್ರೀಶ ಪ್ರಾಣೇಶ ವಿಠಲರಾಯನೇ ।
ಪರದೈವವೆಂದೊರದೇ ೩

## ೩೦೪

ಪ್ರಾಣರಾಯ ನೀನಲ್ಲದೆ ಮತ್ತನ್ಯ ।
ಪ್ರಾಣರು ಜಗದೊಳುಂಟೇ ॥
ದೀನರಕ್ಷಕನೆಂಬ ಬಿರುದಿಗೆ । ಪ್ರೇಮಾದಿ (ಪ್ರೇಮದಿ)
ನೀನೆ ರಕ್ಷಿಸಬೇಕೈ ಪರಾಕೈ ಪ

ಹಿಂದೆ ಭಕುತರನು ಪೊರೆದನಂಬುದು ಕೇಳಿ ।
ಬಂದು ವಂದಿಸುವೆ ನನ್ನ ॥
ಕಂದನ ಅಪರಾಧ ನೀನೆಣಿಸದೆ ಭವ ।
ಬಂಧನ ಪರಿಹರಿಸೋ ಉದರಿಸೋ ೧

ವಂದಿಪ ಶರಣರ ಪೊರೆಯಬೇಕೆನುತಲಿ ।
ಬಂದು ಬಾಗಿಸೋಪಿಲಿ ॥

ಪರಿಯೊಳು ಚಿಲಕರಾಗಿ ಗ್ರಾಮದೊಳು ।
ಮೆರೆಯುವ ಯತಿಯೋಗೀ ॥
ಗುರುಶ್ರೀಶ ಪ್ರಾಣೇಶ ವಿಠಲನ ।
ಚರಣ ಪೊಕ್ಕವರ ಸಲಹುವ ಕರುಣೀ । ಯೇಧಣಿ ೩

## ೩೦೬

## ಶ್ರೀ ರಾಘವೇಂದ್ರ ಗುರುರಾಜರ ಸ್ತೋತ್ರ

ರಾಯರ ನೋಡಿರೈ ಶ್ರೀ ಗುರು ।
ರಾಯರ ಪಾಡಿರೈ ।
ಶ್ರೀ ಯರಸನ ಪ್ರಿಯಕಂಜಾಪ್ತಾಭಸು ।
ಕಾಯ ಕವಿಜನಗೇಯಾ ಪ

ಶ್ರೀ ಸುಧೀಂದ್ರ ಕರಕಮಲದಲಿ ಸಂಭೂತಾ ।
ಬಹು ವಿಖ್ಯಾತಾ ।
ಶ್ರೀಶನ ಗುಣಗಳ ತುತಿಸುವ ಯತಿ ಶಿರೋಮಣಿಯೊ ।
ಚಿಂತಾಮಣಿಯೊ ।
ಈ ಸುಜನರ ಮನಸಿಗೆ ತೋರುವದಹಲ್ಲಾದಾ ।
ಶಿರಿ ಪ್ರಲ್ಹಾದಾ ೧

ದಂಡಕಮಂಡಲ ಕಾಷಾಯವು ಸೂವಸನಾ ।
ವೇದ ವ್ಯಸನಾ ।
ಪುಂಡರೀಕ ಪದಭೃಂಗಾ ಮುನಿಕುಲೋತ್ತುಂಗಾ ।
ಕರುಣಾಪಾಂಗಾ ।
ಮಂಡಲದೊಳು ಬಹುತೋಂಡರ ಪರಿಪಾಲಕಾ ।
ವರ ಬಾಹ್ಲೀಕಾ ೨

ತುಂಗಾ ತೀರದಿ ಮಂತ್ರಾಲಯದೊಳಗಿರುವೊ ।
ಕಲ್ಪ ತರುವೊ ।
ಗಂಗಾಜನಕ ವಿಹಂಗವಾಹನ ಇಲ್ಲಿಹನು ।
ನತ ಸುರದೇನು ।
ಮಂಗಳ ಮಹಿಮರ ದರುಶನ ಮಾತ್ರಾ ಘನಾಶಾ ।
ಶ್ರೀ ಗುರುವ್ಯಾಸಾ ೩

ಪರಿಮಳ ವಿರಚಿಸಿ ಬುಧರಿಗೆ ಬೀರಿದದೀಶಾ ।
ಗುಣಗಂಭೀರಾ ।
ಪರಿಪರಿ ಚರಿತೆಯ ತೋರ್ದಭೂದೇವರ ದೇವಾ ।
ದೇವ ಸ್ವಭಾವಾ ।
ನರ ಇವರನು ಕ್ಷಣಬಿಡದಲೆ ಭಜಿಸಲು ಸುಖವೊ ।
ಅಹಿಕಾಮುಕವೊ (ಅಘ ಪರಿಹರವೊ) ೪

ದುಷ್ಟ ಮತವ ಖಂಡಿಸಿ ಹರಿಪರನೆಂದೊರೆದಾ ।
ಭೀಷ್ಟಿಯಗರದಾ ।
ಸೃಷ್ಠಿಯೊಳಗೆ ಶ್ರೀಶ ಪ್ರಾಣೇಶ ವಿಠ್ಠಲನದಾಸಾ
ಮುನಿಕುಲೋತ್ತಂಸಾ ।
ಎಷ್ಟು ಪೊಗಳಲಾಶಕ್ಯವು ಸದ್ಗುಣ ಸಾಂದ್ರಾ ।
ಶ್ರೀ ರಾಘವೇಂದ್ರಾ ೫

## ೩೦೭

ಶ್ರೀ ಗುರು ರಾಜರಿಗೆ ಆರುತಿ ಬೆಳಗಿರೆ ಪ

ಶ್ರೀ ರಾಘವೇಂದ್ರರಾಯಾ ಸೂರಿ ಪರಾಕೂ ।
ಪರಿಮಳ ವಿರಚಿಸಿದವನೆ ಪರಾಕು ।
ಧರೆಯೊಳು ಮಂತ್ರಾಲಯ ನಿಲಯ ಪರಾಕು ।

ಗುರು ವಸುಧೇಂದ್ರರ ಕುವರ ಪರಾಕೆಂದು ।
ಹರದೇರಾರುತಿಯಾ ಬೆಳಗಿರೆ ೧

ದಂಡಕಮಂಡಲಧರ ಪರಾಕು ।
ಪಂಡಿತರೊಡೆಯ ವಿಕ್ರಮನೆ ಪರಾಕು ।
ಚಂಡ ದುರ್ವಾದಿ ಮತ ಮುರಿದ ಪರಾಕು ।
ಗಂಡುಗಲಿ ಹರಿಯಾ ಪರಾಕೆಂದು ।
ಪುಂಡಲೀಕದಾರುತಿಯಾ ಬೆಳಗೀರೆ ೨

ಶ್ರೀಶ ಪ್ರಾಣೇಶ ವಿಠಲದೂತ ಪರಾಕೂ ।
ಶ್ರೀಶನ ಗುಣಗಳ ತುತಿಪ ಪರಾಕೂ ।
ಆಶೇಶು ಹೇಮಂತ ಮೆರೆವ ಪರಾಕೂ ।
ದೇಶಿಕ ಶ್ರೇಷ್ಠ ನಿರ್ದುಷ್ಟ ಪರಾಕೆಂದು ।
ಸಾಸಿರ ಆರುತಿಯ ಬೆಳಗಿರೆ ೩

## ೩೦೮

## ಶ್ರೀ ಜಗನ್ನಾಥದಾಸರ ಸ್ತೋತ್ರ

ರಾಯರ ನೋಡಿರೈ ದಾಸರಾಯರ ಪಾಡಿರೈ ।
ಮಾಯ ರಮಣಪ್ರಿಯಾ ।
ಇವರ ಮನದೊಳಗೆ ಸುಳಿದಾ । ಶ್ರೀರಂಗವಲಿದ ಪ

ಭೂಮಿಯೊಳಗೆ ಜನಿಸಿದ, ಪ್ರಥಮದಿಸುಲ್ಹಾದ ।
ಜನರಿಗೆ ಮೋದ ।
ಕಾಣಿಸುವದು ಜಗದೊಳಗೆ, ಇವರಿಗೆ ಕೀರುತಿಯ ।
ಪುಣ್ಯ ಮೂರುತಿಯು ।
ಧೇನಿಸಿ ಎರಡನೆ ಜನ್ಮದಿ, ಈತನೆ ಶಲ್ಯಾ ।
ತತ್ವವ ಬಲ್ಲಾ ೧

ಮೂರನೆ ಜನ್ಮದಿ ಕೊಂಡಪ್ಪ, ರಾಜನದೂತ ।
ಸುಪ್ರಖ್ಯಾತಾ ।
ಸಾರ ಜನರ ಪ್ರಿಯ ಶ್ರೀ ಪುರಂದರದಾಸಾರ್ಯ ।
ಸುತ ಆಶ್ಚರ್ಯ ।
ತೋರುವ ಐದನೆ ಜನ್ಮದಿ ಶ್ರೀಹರಿದೂತ ।
ಗುರು, ಜಗನ್ನಾಥ ೨

ನರಹರಿಯ ತುತಿಪ ವಂದಂಶದಿ ಸಾಂಶರೆಂದು
ಖಂಬದಿ ನಿಂದು ।
ಮೆರೆವರು ಊರ್ಧ್ವಪುಂಢವು ತುಲಸಿಯಮಾಲಾ ।
ಅಕ್ಷ ಸುಶೀಲಾ ।
ಪರಿಪರಿ ಸೇವಿಪ ಜನರಿಗಭೀಷ್ಟವ ಗೆರೆವಾ ।
ದುರಿತವ ತರಿವಾ ೩

ದೇಶದೇಶವ ಜನರುಗಳೆಲ್ಲರು ಬಂದು ।
ನೋಡಲು ನಿಂದು ।
ಸೋಸಿಲಿ ದರುಶನಕೊಳಲವರಿಗೆ ಆನಂದ ।
ವಾಹುದು ಛಂದ ।
ಮೀಸಲಹುದು ಮನ, ಕೈಸೇರುವ ಶ್ರೀಪತಿಯೂ ।
ಹರ ಅಘತತಿಯು ೪

ಎಷ್ಟು ಪೇಳಲಿ ಇವರ ಮಹಿಮೆ ತುತಿಸಲ್ಕೆ ।
ವಶವಲ್ಲ ಮನಕೆ ।
ನಿಷ್ಠೆಯಿಂದಿವರನು ತುತಿಸಲು ಶ್ರೀವರತುಷ್ಟಾ ।
ಪಾಪವು ನಷ್ಟಾ ।
ಸೃಷ್ಟಿಯೊಳಗೆ ಶ್ರೀಶ ಪ್ರಾಣೇಶವಿಠಲನ ದಾಸ ।
ದಾಸೋತ್ತಂಸ ೫

## ೩೦೯

ದಾಸರ ಭಾಗ್ಯವಿದು । ಶ್ರೀ ಹರಿ ।
ದಾಸರ ಭಾಗ್ಯವಿದು ಪ

ತರುಳ ತನದಲಿ ಬಲುಮಂದ ಬುದ್ಧಿಯಲಿ ।
ತರುಳರ ಕರಕರೀ ಬಡಿಸುವನಾ ॥
ಕರವ ಪಿಡಿದು ಉದ್ಧರಿಸಿ ನಾಮಾಮೃತ ।
ಎರದು ದೇಶದೊಳು ಮೆರಸಿದಿ ಎಲ್ಲಾ ೧

ಪದ ಸುಳಾದಿಗಳು ತಾಳ ಪ್ರಾಸದಿಂ ।
ಪದುಮನಾಭನ ಚರಿತೆಯನೂ ॥
ಮುದದಿಂದಲಿ ಕೊಂಡಾಡುತ ವದನದಿ ।
ಪದ ಪದಿಗೆ ಅಡಿಗೆರಗುವದೆಲ್ಲಾ ೨

ಯೇಸು ಜನ್ಮದಾ ಸುಕೃತೊದಗಿತೊ ಹರಿ ।
ದಾಸಾರ್ಯರು ಇತ್ತರು ಪರವಾ ॥
ಶ್ರೀಶ ಪ್ರಾಣೇಶ ವಿಠ್ಠಲದಾಸಾರ್ಯರ ।
ದಾಸರ ದಾಸನು ಎನಿಸುವದೆಲ್ಲಾ ೩

## ೩೧೦

ದಾಸರಾಯರಾ ಚರಣಕಮಲ ಭಜಿಸೋ ।
ದುರ್ವಿಷಯವ ತ್ಯಜಿಸೋ ॥
ಶ್ರೀಶ ಭಜಕ ಗುರು ಪ್ರಾಣೇಶದಾಸಾರ್ಯ ।
ಹರಿದಾಸ ವರ್ಯಾ ಪ

ಸದ್ವೈಷ್ಣವ ಅಧ್ಯಕ್ಷರೆಂದೆನಿಪರೊ ।
ಕರ್ಮಠರೆನಿಪರೋ ।

ಮಧ್ವಮತ ಪ್ರವರ್ತಕರೆನಿಪರೋ ।
ಜ್ಞಾನಿಗಳೆನಿಪರೊ ॥
ಪದ್ಧತಿ ಪೂರ್ವಕ ಕವನವ ಪೇಳುವರೊ ।
ಹರಿ ಪರನೆಂಬುವರೊ ।
ಶುದ್ಧಾತ್ಮರಿಗತಿ ಪ್ರಿಯರೆಂದೆನಿಸುವರೋ ।
ಸತ್ಕಥಾಲಾಪರೋ ೧

ಕಾಮಕ್ರೋಧ ಮದಮತ್ಸರವನು ಗೆಲಿದೂ ।
ತಾಮಸರನು ಹಳಿದೂ ।
ನೇಮದಿಂದ ಯಮನಿಯಮಗಳನು ವಹಿಸೀ ।
ಇಂದ್ರಿಯಗಳ ಜೈಸೀ ।
ತಾಮುದದಿಂದಲಿ ಹರಿಗುಣ ಕೀರ್ತನೆಯಾ ।
ಮಾಡುತ ನರ್ತನೆಯಾ ॥
ಪ್ರೇಮದಿಂದ ಮಾಡಿ ದೇಶದಲ್ಲಿ ಮೆರೆದಾ ।
ನಾಮ ಸುಧೆಯನ್ನೆರದಾ ೨

ಏಸು ಪೇಳಲಿ ಇವರ ಚರಿತೆಯನ್ನು ।
ಆ ಪಾರವು ಇನ್ನೂ ।
ಸೋಸಿನೋಡಲು ಎನಗೆ ವಶವಲ್ಲಾ ।
ಇದು ಪುಸಿಯೂ ಅಲ್ಲಾ ॥
ಮೀಸಲ ಮನದಲಿ ತುತಿಸಲು ಸಂತಾಪಾ ।
ಪೋಪದು ನಿರ್ಲೇಪಾ ।
ಶ್ರೀಶ ಪ್ರಾಣೇಶ ವಿಠಲ ತಾ ಬಲ್ಲಾ ।
ವಲಿದಿಹನಲ್ಲಾ ೩

## ೩೧೧

ಪೋಷಿಸೆನ್ನ ಜೀಯಾ । ಗುರು ।
ಪ್ರಾಣೇಶ ದಾಸರಾಯಾ ।

ಶ್ರೀಶನ ಗುಣ ಸಂತೋಷದಿ ಪಾಡುವ ।
ದಾಸ ಕುಲಾಗ್ರಣಿಯೇ । ಎಣಿಯೆ ಪ

ಹರಿಸ್ಮರಣೆಯ ಮರೆದೂ । ಸರ್ವದ ।
ಪದದನ್ನಕೆ ಬೆರಿದೂ ।
ದುರುಳ ಜನರ ಸಹವಾಸವನ್ನು ಮಾಡಿ ।
ಬಂದೆ ದಿನವ ಕಳೆದೇ ಉಳದೇ ೧

ಪವನ ಮತದೊಳಿಟ್ಟೊ । ಶ್ರೀ ಹರಿ ।
ಸ್ತವನವನ್ನೆ ಕೊಟ್ಟೊ ।
ಕವಿಗಳ ಮುಖದಿಂ ತತ್ವವಿಚಾರದಿ ।
ಕವಲ ಮತಿಯ ಪಾಲಿಸೀ, ಉದ್ಧರಿಸೀ ೨

ಮನ್ನ ಭಿನ್ನಪವನ್ನು ಕೇಳಿ ।
ಮನ್ನಿಸು ಸುರಧೇನೂ ।
ಘನ್ನ ಶ್ರೀಶ ಪ್ರಾಣೇಶ ವಿಠಲನ ಧ್ಯಾನ ।
ವನ್ನು ಮಾಳ್ಪ ಶಕ್ತಾ ವಿರಕ್ತಾ ೩

## ೩೧೨

## ನಿರ್ಯಾಣ ಸ್ತೋತ್ರ

ವಾಸುದೇವನ ಪುರಕೆ ತೆರಳಿದಾರು ।
ಶ್ರೀಶನಾ ಪ್ರಿಯ ಗುರು ಪ್ರಾಣೇಶ ದಾಸಾರ್ಯ ಪ

ಸ್ನಾನ ಊರ್ಧ್ವಪುಂಡ್ರಗಳ ವಿಧಿಯಿಂಧರಿಸೀ ಸಂ ।
ಧ್ಯಾನ ಗಾಯತ್ರಿ ಜಪವನ್ನು ಮಾಡಿ ॥
ಮನುರಾಗದಿ ಬಿಂಬ ಮೂರ್ತಿ ಧ್ಯಾನಮಾಡೀ ತತ್ವ ।
ಮಾನಿಗಳೊಳೊಂಮ್ಮಿಂದೊಮ್ಮೆ ಆನಂದದಿಂದಲೀ ೧

ಹರಿಯೆ ಸರ್ವೋತ್ತಮಾ ತದ್ರಾಣಿ ಶಿರಿಬೊಮ್ಮ ।
ಮರುತ ದೇವರೆ ಗುರುವು, ತಾರತಮ್ಯ ॥
ವರಪಂಚಭೇದ ಜ್ಞಾನವನರಿತು ಮನದಿ ಹರಿ ।
ಪುರದೊಳಿಹ ಪರಮ ಭಕ್ತರ ಕಾಣಬೇಕೆನುತ ೨

ಮೋಕ್ಷರೌದ್ರೀ ಅಬ್ಧಮಾಘದರ್ಶಾ ಪೂರ್ವಭಾದ್ಧರಾ ।
ನಕ್ಷತ್ರ ಸೋಮವಾರದಿದ್ದವ ದ್ವಿತಿಯ ಯಾಮದೀ ।
ಲಕ್ಷಿ ಇಟ್ಟೂ ಲಯದ ಚಿಂತನೆಯ ಗೈಯುತಲಿ ।
ಪಕ್ಷಿವಾಹನ ಶ್ರೀಶಪ್ರಾಣೇಶ ವಿಠಲೆನುತ ೩

## ೩೧೩

## ಶ್ರೀ ಜಂಬುಖಂಡಿ ವಾದಿರಾಜಾಚಾರ್ಯರ ಸ್ತೋತ್ರ

ಕಂಡು ಬಹಳ ಧನ್ಯನಾದೆನೋ ।
ಸಿರಿಮಂಗಳಾತ್ಮರ ಪ

ಕಂಡು ಬಹಳ ಧನ್ಯನಾದೆ ।
ಪುಂಡರೀಕಾಕ್ಷ ತೋಂಡರ ಪಾದ ॥
ಪುಂಡರೀಕ ವೀಕ್ಷಣ ಮಾತ್ರ ಫ ।
ತುಂಡುಗೈಸಿ ಪೊರೆವರನ್ನ ಅ.ಪ.

ಆ ಸುಕೃತ ಜಂಬುಖಂಡಿ ಶ್ರೀನಿ ।
ವಾಸಾರ್ಯಾಬ್ಧಿ ಸಂಭವ ॥
ಕೋವಿದಾಗ್ರಣಿಯ ಆದ ।
ಶ್ರೀ ವಾದಿರಾಜಾಚಾರ್ಯರನ್ನ ೧

ಭೂತದಯಾ ಶೀಲ ದಮನಮೋ ।
ಪೇತರಾಗಿ ಪೃಥ್ವಿಯೊಳು ಶ್ರೀ ।

ನಾಥನೊಲುಮೆಯನ್ನು ಪಡೆದು ।
ಖ್ಯಾತ ಭುವನ ಪಾವನ ಮಾಳ್ಪರಾ ೨

ಶ್ರೀಶ ಪ್ರಾಣೇಶ ವಿಠಲ ಹೃದಯಾ ।
ಕಾಶದಲ್ಲಿ ಸಿರಿಯು ಸಹಿತ ॥
ವಾಸವಾಗಿ ತೋರಿ ಪೊಳೆವ ।
ಭಾಸುರ ಕೀರ್ತಿಲಿ ಮೆರೆವರನ್ನೆ ೩

## ೩೧೪

## ಶ್ರೀ ಮೊದಲಗಿತ್ತಿ ಕೃಷ್ಣಣ್ಣನವರಿಗೆ ಅಂಕಿತಪದ

ವೆಂಕಟ ವಿಠಲರೇಯ ನಿನ್ನಯಪದ ।
ಪಂಕಜ ಸ್ಮರಣೆಯಿತ್ತು ॥
ಕೊಂಕು ಮತಿಯ ಕಳೆದು ।
ಸಂಕಟ ಪರಿಹರಿಸಿ ಕ ।
ಳಂಕ ರಹಿತನ ಮಾಡೋ ನೀ ಮಾಡೋ ಅ.ಪ.

ಸಂತತ ನಿನ್ನಯ ಚರಿತೆಯ ಕೇಳಲಿ ।
ಅಂತರಾಗದಿ ಪಾಡಲಿ ।
ಸಂತರ ಸಹವಾಸವನು ಕೊಟ್ಟು ಸತತ ನಿ ।
ಶ್ಚಿಂತ ಪುರುಷನ ಮಾಡೋ ಕಾಪಾಡೋ ೧

ತರತಮ ಪಂಚಭೇದ ಮತಿಯನಿತು ।
ಮರುತ ಮತವನ್ನು ಪೊಂದಿ ।
ಸಿರಿಯರಸನೆ ತವಗುಣ ಕರ್ಮನಾಮವ ।
ವರ ಜಿಂಪ್ವಯೊಳಿರಿಸೋ, ಉದ್ಧರಿಸೋ ೨

ಶ್ರೀಶ ಪ್ರಾಣೇಶ ವಿಠಲರೇಯ ನೀನ್ನನು ।
ಲೇಸಾಗಿ ಪ್ರಾರ್ಥಿಸುವೆ ।
ಆಶಿಯ ಬಿಡಿಸಿನ್ನು ಮೀಸಲ ಮನಮಾಡಿ ।
ನೀ ಸುಜ್ಞಾನವನೆ ಪಾಲಿಸೋ, ಲಾಲಿಸೋ ೩

## ೩೧೫




## ಶ್ರೀಫಲಮಾರು ಕೃಷ್ಣಣ್ಣನವರಿಗೆ

### ಅಂಕಿತಪದ

ಇಂದಿರೇಶ ವಿಠಲರಾಯ ಆ ।
ನಂದದೀಯೋ ಭಕುತಗೆ ಜೀಯ್ಯಾ ಪ

ನಿನ್ನ ನಾಮ ಸ್ಮೃತಿ ಒದಗಲಿ ಪಾ ।
ವನ್ನ ಮತದೀ ನಡೆಯಲೀ ।
ನಿನ್ನ ಕಥೆಗಳ ಕೇಳಲಿ ಪ್ರ ।
ಪನ್ನರ ಸಹವಾಸವಾಗಲಿ ೧

ಅನ್ಯ ದೈವಂಗಳ ನೋಡದೆ ಮ ।
ತ್ತನ್ಯ ಶಾಸ್ತ್ರಂಗಳೋದದೇ ॥
ಅನ್ಯರನು ಕೊಂಡಾಡದೇ ಹರಿ ।
ನಿನ್ನನೇ ನೋಡಿ ಹಿಗ್ಗುವದೇ ೨

ಶ್ರೀಶ ಪ್ರಾಣೇಶ ವಿಠ್ಠಲರೇಯಾ ದು ।
ರಾಶಿ ಎಂಬುದು ನೀ ಬಿಡಿಸಯ್ಯಾ ॥
ಲೇಸಾಗಿ ಇವನೆ ಬೇಡುವನಯ್ಯಾ ನೀ ।
ಮೀಸಲ ಮನವಿತ್ತು ಸಲಹಯ್ಯಾ ೩

## ೩೧೬

ಶ್ರೀ ರಮಣಪತಿ ವಿಠಲ ನೀ ಕರುಣಿಸೋ ।
ಮಾರಪಿತ ಮರುತ ಮನೆಮಂದಿರ ನಿವಾಸಾ ಪ

ಉದಯದಲಿ ಎದ್ದು ಹರಿಧ್ಯಾನವನು ।
ಮುದದಿಂದ ಬ್ಯಾಸರದೆ ನಿರುತ ಮಾಡಿ ।
ಸದಮಲ ಶ್ರೀ ಮುದ್ರಿಊರ್ಧ್ವಪುಂಡ್ರವ ।
ಪದುಮಾಕ್ಷಿ ಶ್ರೀತುಲಸಿಸರಗಳಿಂದಾ ೧

ಹರಿಯೆ ಸರ್ವೋತ್ತಮಾ ತದ್ರಾಣಿ ಸಿರಿ ಬೊಮ್ಮ ।
ಮರುತ ದೇವರೆ ಗುರು ತಾರತಮ್ಯ ।
ವರ ಪಂಚಭೇದ ಜ್ಞಾನದ, ತತ್ವವಿಚಾರ ।
ಹರಿದಾಸ ಸಹವಾಸ ಸರ್ವದಾ ಕೊಟ್ಟು ೨

ಶ್ರೀಶ ಪ್ರಾಣೇಶ ವಿಠ್ಠಲರಾಯನೇ ನಿನ್ನ ।
ದಾಸತ್ವವನೆ ಕೊಟ್ಟು ಉದ್ಧರಿಪದೋ ॥
ಲೇಸಾಗಿ ಪ್ರಾರ್ಥಿಸದೆ ಎನ್ನ ಭಿನ್ನಪವು ಉ ।
ದಾಸಿಸದೆ ನೀ ಕರುಣಿಸೆಂದು ದಿನದೇ ೩

## ೩೧೭

ಶ್ರೀ ವೇ. ನರಸಿಂಹಾಚಾರ್ಯ ಜೋಶಿ, ಕುಷ್ಟಗಿಯವರಿಗೆ
ನೀಡಿದ ಅಂಕಿತಪದ

ಶ್ರೀಕರ ವಿಠಲರಾಯ ಕರವ ಪಿಡಿಯೋ ।
ಮಾ ಕಮಲಭವ ವಂದ್ಯ । ಭಕ್ತರುದ್ಧರಿಸೋ ಪ

ನಿನ್ನ ನಾಮಾಮೃತವು ಜಿಂಹ್ವೆಗೆಪೊದಗಲೀ ।
ನಿನ್ನ ಕಥಾಶ್ರವಣ ಕಿವಿಗಾಗಲೀ ॥
ನಿನ್ನ ಚಾರಿತ್ರಗಳ ನಿರುತಕೊಂಡಾಡಲಿ ।
ನಿನ್ನ ದಾಸರು ಕೇಳಿ ಶಿರದೊಗಲೀ ೧

ತಾರತಮ್ಯ ಪಂಚಭೇದ ಜ್ಞಾನವೇ ತಿಳಿಯಲಿ ।
ಮಾರುತಾ ಮತವನ್ನು ಅನುಸರಿಸಲಿ ॥
ಆರೆರಡು ನಾಮ ಊರ್ಧ್ವಪುಂಡ್ರವನೆ ಧರಿಸಲಿ ।
ಧೀರ ಗುರು ಮಧ್ವರಾಯರೇ ಮುಖ್ಯರೆನಲಿ ೨

ಏಸುಪರಿ ತುತಿಸಿ ವಾಣೇಶಗಸದಳವೋ ಶ್ರೀ ।
ವಾಸುದೇವನನು ತುತಿಸಲೊಶವೇ ।
ಶ್ರೀಶ ಪ್ರಾಣೇಶ ವಿಠ್ಠಲರಾಯ ದಯದಿನ್ನು ।
ದಾಸರ ದಾಸನೆಂದೆನಿಸಿ ಪೊರಿಯೊ ೩

# ಶ್ರೀಶಪ್ರಾಣೇಶದಾಸರನ್ನು ಕುರಿತ ಸ್ತೋತ್ರ ಪದಗಳು

೩೧೮ – ೩೨೫

೩೧೮

## ಗುರು ಶ್ರೀಶಪ್ರಾಣೇಶವಿಠಲರ ಹಾಡು

ಶ್ರೀಶ ಪ್ರಾಣೇಶ ವಿಠಲ ದಾಸಾರ್ಯನೆ ।
ಹ್ರಾಸಿಸೋ ದೋಷ ಕುಟಿಲ ।
ಭಾಷಾವರ್ಜಿತ ಗುಪ್ತಘೋಷ ನಂಬಿದೆ ನಿನ್ನ ।
ದಾಸರೊಳಗೆಣಿಸೆನ್ನ ಪೋಷಣ ಕರ್ತನೆ ಪ

ಕಠಿಣ ದುಸ್ಫುರುಣ ನೋಡಿ । ತ್ರಿರೂಪಾತ್ಮ ।
ಪಟುತಂತಃಕರುಣ ಮಾಡಿ । ನಟಿಸಿದನಿವರೆ ಉ ।
ದ್ಭಟ ಕರುಣೆಗಳೆಂದ । ಸ್ಫುಟದಿ ನಂಬಿದೆ ಪಾದ ।
ಘಟಸೆನಗಭಯವ । ಪಟುತರಂಕಿತ ಗುರುಪ್ರಾಣೇಶ ।
ವಿಠಲದಾಸವರ್ಯರ ದ್ವಾರದಿ ॥
ಧಟದಿ ಪಡೆದಲೆಲೋಕ ಖ್ಯಾತದಿ ।
ಚಟುಲ ಜ್ಞಾನಾನಂದ ಭೂಷಣ ೧

ಅನ್ಯ ಬಯಕೆಯ ಬಿಡಿಸಿ । ನಿನ್ನಯ ಸ್ಮರಣೆ ।
ಪುಣ್ಯ ಪಥವ ಪಿಡಿಸಿ । ಧನ್ಯನ ಮಾಡೊ ಸಂ ।
ಪನ್ನ ಗುಣಾರ್ಣ ಸೌ । ಜನ್ಯ ಪರಾತ್ಪರ ಪೂರ್ಣ ಸುಲಕ್ಷಣ ॥
ಪೀಡಿಸುವ ದುರ್ವ್ಯಸನ । ಕಳದೆ
ನ್ನಾಡಿಸೈ ಸರ್ವಜ್ಞ ಮತದಲಿ ।
ಬೇಡಿಸೈ ಗುರುದಾಸ ಭಾಗ್ಯವು ।
ಕೊಡಿಸೈ ತವ ಶಿಷ್ಯ ವರ್ಗದಿ ೨

ತ್ರಿಕಾಲದಲಿ ಕರ್ಣವು । ವಾಕಿಸುವ ತೆರದಿ ನೀವು ।
ಲೋಕೋಪಕಾರಲೋಸುಗದಿ । ಲೋಗರನ್ನೆಲ್ಲ ।
ಸಾಕಂತ ಸೇವಿಪೆ । ವಾಕ್ಪತಿ ಜನಕನ ।
ಗಣ್ಯಾಗಾಣೆನು ನಿನ್ನ ಅನುಗುಣ್ಯ ಗುಣಕತಿ ।
ಘನ್ನ ಗುರು ಶ್ರೀಶ, ಪ್ರಾಣೇಶ ವಿಠಲ ಕಿಂಕರನಾಗಿ ಬಾಳ್ದೆ ।
ಪುಣ್ಯ ಶಿಲಾಗ್ರಗಣ್ಯಧೀರ ೩

## ೩೧೯

### ಶ್ರೀನಿವಾಸವಿಠಲರ ಹಾಡು

ಶ್ರೀಶ ಪ್ರಾಣೇಶ ದಾಸರಾಯರ ।
ಬ್ಯಾಸರದಲೆ ಕೊಂಡಾಡೆಲೋ ।
ಏಸು ಜನ್ಮದ ದೋಷರಾಶಿಯು ।
ಲೇಶಿತಿಲ್ಲದೆ ಕಳೆವರು ಪ

ಉದಯ ಕಾಲಸ್ತಮಯ ಪರಿಯಲಿ ।
ಹೃದಯದೊಳು ಹರಿಯ ಮೂರ್ತಿಯಾ ।
ಮುದದಿ ಸ್ಮರಿಸುತ ಪದುಮನಾಭನ ।
ಪದಗಳರ್ಚಿಪ ಗುರುಗಳಾ ೧

ನಾನು ನನ್ನದು ಎಂಬ ದುರ್ಮತಿ ।
ಹೀನ ಜನರನು ಸೇರದೆ ॥
ಜ್ಞಾನಿಗಳವೊಡಗೂಡಿ ಹರಿಕಥೆ ।
ಸಾನುರಾಗದಿ ಪೇಳುವಾ ೨

ಅದ್ವೈತರುಸರಾಡದಂದದಿ ।
ಶುದ್ಧ ಗ್ರಂಥವ ಪಠಿಸುವಾ ॥

ಅದ್ವರತಿ ಶ್ರೀನಿವಾಸ ವಿಠಲನ ಪರ ।
ಪದ್ಮಾರಾಧಕರಿವರೆಲಾ ೩

## ೩೨೦

## ತಿರುಪತಿವಿಠಲರ ಹಾಡು

ದಾಸರಾಯರ ನೋಡಿದ್ಯಾ । ಶ್ರೀಶ ಪ್ರಾಣೇಶ ।
ದಾಸರಾಯರ ನೋಡಿದ್ಯಾ ॥
ದಾಸರಾಯರ ಪಾದಾಶ್ರಯವ ಮಾಡಲು ।
ದೋಷಗಳೋಡಿಸಿ ಶ್ರೀಶನೊಲಿಸಿ ಕೊಡುವ ಪ

ಸ್ನಾನದಿ ಮಹಮಂತ್ರವ । ನಿತ್ಯದಿ ಮಾಡಿ ।
ಜ್ಞಾನಪೂರ್ವಕ ಜಪವು ॥
ಧ್ಯಾನದಿ ಬಿಂಬನ ಹವಣಿ ಮನದಿಂದ ।
ಮೌನದಿ ಪೂಜಿಸ್ವಾನಂದದೊಳಿರುವಂಥ ೧

ಸತತ ಶ್ರೀ ಹರಿಯ ನಾಮ । ಸ್ಮರಣೆಯೊಳು ।
ರತರಾಗಿಕೊಂಡು ಪ್ರೇಮ ॥
ಗತಿಗೆ ನೀನೆ ಜಗತ್ಪತಿಯೆಂದು ನಿಶ್ಚಯ ।
ಮತಿವುಳ್ಳ ಮಹಿಮನ ತುತಿಸುವ ಗುರುಗಳ ೨

ಮೊದಲರ ಪದ್ಧತಿಯ । ತಿಳಿದು ಮಾಡೆ ।
ಪದುಮನಾಭನ ಸೇವೆಯು ॥
ಪದ ಸುಳಾದಿಗಳರ್ಥ । ಮುದದಿ ಕೇಳುತ ಜಗ ।
ದುದರ ತಿರುಪತಿ ವಿಠಲನ್ನೆನದು ನಲಿವ ಮುದ್ದು ೩

## ೩೨೧

### ವಾಮನ ವಿಠಲರ ಹಾಡು

ಶ್ರೀಶ ಪ್ರಾಣೇಶರಾಯಾ । ದಯದಿ ಎಮ್ಮ ।
ಪೋಷಿಸು ಶುಭಕಾಯ್ಯಾ ॥
ಭೂಸುರಾಗ್ರಣಿ ಗುರುಪ್ರಾಣೇಶರಾಯರಿಂದ
ಭಾಸುರ ಮಂತ್ರೋಪದೇಶವಕೊಂಡೆ ಪ

ಗುರುವೆ ನಿಮ್ಮ ಪಾದಾಯುಗಾ ।
ಸರಸಿರುಹ ನೆರೆನಂಬಿದೆ ಭಾಗ್ಯ ॥
ಕರೆಕರಿ ಸಂಸ್ಕೃತಿ ಶರಧಿಯೊಳಗೆ ಬಿದ್ದು ।
ಹೊರಳುವೆ ವೇಗದಿ ಕರಪಿಡಿದುದ್ಧರಿಸೊ ೧

ಮಂಗಳ ಮಹಿಮ ಸಿರಿವರನವೊಲಿಮಿ ।
ಸಂಗ ಪಡೆದ ಧೀರರು ।
ರಂಗವೊಲಿದ ಆರ್ಯಂಘ್ರಿಯ ಕಮಲತೆ
ಭೃಂಗನಂತಿರುಪ್ಪ ಲಿಂಗಸುಗೂರವಾಸ ೨

ಯ್ಯೋಮಗವರಕೇತನಾ ಮಾರಮ ಶ್ರೀ ।
ವಾಮನ ವಿಠಲನ್ನಾ ।
ಸೋವಥರಾಧಿ ಸುತ್ರಾಮ ವಂದಿತ ಸು ।
ನಾಮ ಸುಧೆಯಿತ್ತು ಪ್ರೇಮದಿ ಸಲಹೆಮ್ಮ ೩

## ೩೨೨

### ವರದೇಶವಿಠಲರ ಹಾಡು

ದಾಸರಾಯರ ದಿವ್ಯ ಚರಣ ಭಜಿಸಿ ।
ಶ್ರೀಶ ಪ್ರಾಣೇಶ ದಾಸಾರ್ಯ ಗುರುವರ್ಯ ಪ

ದಾಸರಾಯರ ಪಾದ ಭಜಿಪ ಸದ್ಭಕ್ತರ ।
ಏಸು ಜನ್ಮದ ಪಾಪರಾಶಿ ಪರಿಹರ ವೋ ॥
ಶ್ರೀಶನಲಿ ಸದ್ಭಕ್ತಿ ಲೇಸಾಗಿ ಪುಟ್ಟುವದು ।
ಲೇಶ ಸಂಶಯವಿಲ್ಲ ಆಲಸವು ಸಲ್ಲ ೧

ಮರುತ ಮತ ತತ್ವಗಳ ಧರೆಗಳಿಂಸೂಸುತ ।
ಧರಣಿ ದ್ವಿಜರಿಗೆ ರಾಮನಾಮ ಮೃತ ॥
ನಿರುತ ಭಜಿಸಲು ಜ್ಞಾನ ವೈರಾಗ್ಯ ತರಮಣಿಯ ।
ಹರಿಭಕುತಿ ಧೇನುವಂ ನೀಡ್ವ ಪಾಲ್ಗಡಲೆನಿಪ ೨

ಸುಜ್ಞಾನವೆಂಬಂಥ ಕಿರಣಗಳ ಪಸರಿಸುವ ।
ಅಜ್ಞಾನ ತಿಮಿರವನು ದೂರೋಡಿಪ ।
ಸೂಜ್ಞರೆಂಬುವ ತಾವರೆಗಳರಳಿಸುವಂಥ ।
ಅಜ್ಞ ಕುಮುದಗಳ ಬಾಡಿಸುವ ಭಾಸ್ಕರ ನೆನಿಪ ೩

ನಮಿತ ಜನ ಭವತಾಪ ಕಳೆದು ಸದ್ಭಕ್ತಿಯಿಂ ।
ಬಮಿತ ಆಹ್ಲಾದವನು ಬೀರುವಂಥ ॥
ಶಮದಮಾದಿಗಳ ಚಂದ್ರಿಕೆಯಿಂದ ಶೋಭಿಸುವ ।
ವಿಮಲ ಹರಿಜನ ಚಕೋರಕೆ ಚಂದ್ರನೆಂದೆನಿಪ ೪

ದಾಸ ಕುಲತಿಲಕ ಪ್ರಾಣೇಶರಾಯರ ಕವನ ।
ಶ್ರೀಶ ಕಥೆಗಳ ರಾಶಿ ಮೀಸಲಾಗಿರಲು ।
ಆಸು ಭಕ್ತರಿಗೆ ಸಂತೋಷಗೊಳಿಸಲು ಸರ್ವ ।
ದೇಶದಲಿ ಮೆರಿಸಿ ಸತ್‌ಕೀರ್ತಿಯನು ಪಡೆದಂಥ ೫

ಈ ಗುರುಗಳ ಪಾದಕ್ಕೆರಗಿದ್ದ ಶಿರಧನ್ಯ ।
ಈ ಗುರುಗಳೀಕ್ಷಿಸಿದ ನೇತ್ರ ಧನ್ಯ ॥
ಈ ಗುರುಗಳ ವಾಣಿ ಕೇಳಿದ ಕಿವಿಧನ್ಯ ।
ಈ ಗುರುಗಳನು ಮನದಿ ನೆನೆವ ನರಧನ್ಯ ೬

ರಾಗ ದ್ವೇಷಾದಿಗಳ ಗೆದ್ದು ಸದ್ಭಕ್ತಿಯಂ ।
ಶ್ರೀಗುರು ಪ್ರಾಣೇಶ ಭಜಕರೆನಿಪ ।
ನಾಗ ಪರ್ಯಂಕ ವರದೇಶ ವಿಠಲನ ಪ್ರಿಯ
ಯೋಗಿ ವರದೇಂದ್ರ ಮುನಿಗಳ ಪಾದಭೃಂಗ ೭

## ೩೨೩

## ವರದೇಂದ್ರವಿಠಲರ ಹಾಡು

ಆಶೆಯ ಬಿಡಿಸಯ್ಯಾ । ಶ್ರೀಶ ಪ್ರಾ ।
ಣೇಶ ದಾಸರಾಯಾ ॥
ವಾಸುದೇವನ ಕಥೆ ಸೋಸಿಲಿ ಪಾಡುವ ।
ಲೇಸು ಭಕುತಿ ನೀಡೋ । ನೋಡೋ ಪ

ಹರಿ ಗುರುಗಳ ಪ್ರಿಯಾ ನೆನಿಸೀ ।
ಮೆರೆದಿಯೊ ಗುರುರಾಯಾ ॥
ಸರುವದ ಶ್ರೀ ಹರಿ ಸ್ಮರಣೆಯ ಮಾಡುತ ।
ಧರೆಯೊಳು ಚರಿಸಿದ । ಭರದಿ ೧

ಜ್ಞಾನ ಶೂನ್ಯನಾಗೀ ಜಗದಿ ।
ಮಾನವರಿಗೆ ಬಾಗಿ ।
ದಾನವಾ ಧ್ಯಾನ ಮಾಡದೇ ।
ಹೀನನಾದೆನು ನಾನು । ಇನ್ನೇನು ೨

ವರದೇಂದ್ರರ ಸದನಾ । ಬಳಿಯಾ ।
ಇರುತಿಹ್ಯ ಜಿತ ಮದನಾ ॥
ಮರುತ ಮತದ ಸದ್ಗ್ರಂಥದ ಸಾರವ ।
ತ್ವರಿತದಿಂ ಪೇಳ್ದಿ । ಬಾಳ್ದಿ ೩

ಕಂದನೆಂದುಯೆನ್ನ । ಕಾಯ್ವುದು ।
ಸುಂದರ ಗುರು ಮುನ್ನಾ ॥
ನಂದ ಕಂದನ ಅಂದ ಪಾದವಾ ।
ಚಂದದಿ ತೋರೋ । ಬಾರೋ ೪

ವರದೇಂದ್ರ ವಿಠಲನ್ನ । ಧ್ಯಾನದಿ ।
ನಿರುತದಿ ಇರಿಸೆನ್ನಾ ॥
ಪರಮ ಭಾಗವತ ಪದಧೂಳಿಯಲಿ ।
ಪೊರಳಾಡಿಸೋ ಯಂದೇ । ತಂದೇ ೫




## ೩೨೪

## ವರದೇಂದ್ರವಿಠಲರ ಹಾಡು

### ನಿರ್ಯಾಣ ಸ್ತೋತ್ರ

ವಾಸುದೇವನ ಪುರ ಪ್ರವೇಶಿಸಿದರು ।
ಈಶ ಭಜಕ ಶ್ರೀಶ ಪ್ರಾಣೇಶದಾಸಾರ್ಯ ಪ

ಉತ್ತಂಕ ಋಷಿಯಂತೆ ಉತ್ತಮ ಗುರುಪಾದ ।
ಅತ್ಯಂತ ಭಕ್ತಿಯಿಂ ಸ್ತುತಿಸಿ ಯಜಿಸಿ ॥
ಉತ್ತಮ ಶ್ಲೋಕ ಶ್ರೀ ಪುರುಷೋತ್ತಮನ ಗುಣವ ।
ನೃತ್ಯ ಗೀತದಿ ಪಾಡಿ ಮೃತ್ಯಲೋಕವ ತ್ಯಜಿಸಿ ೧

ವಾಸ ವಾಸರದಲಿ ವಾಸುದೇವನ ಕಥೆಯ ।
ಭೂಸೂರರಿಗೆ ಪೇಳಿ ತೋಷದಿಂದ ॥
ವಾಸವಾದ್ಯಮರ ವಂದಿತನ ಪಾದದಿ ಭಕ್ತಿ ।
ಲೇಸಾಗಿ ತೋರಿ ಭವಕ್ಲೇಶವನು ಪರಿಹರಿಸಿ ೨

ಅಬ್ಧನಂದನ ಭಾದ್ರಪದ ತಿಥಿ ಅಷ್ಟಮಿಯ ।
ಶುದ್ಧ ಭೌಮ್ಯವಾಸರದ ಉಷಃಕಾಲದಿ ॥
ಮುದ್ದು ಪ್ರಲ್ಹಾದನ್ನ ಪೊರೆದ ನರಹರಿರೂಪ ।
ಹೃದ್ಗುಹಾದಲಿ ನೋಡಿ ಹರುಷವನು ಬಡುತಲಿ ೩

ದಾಸ ಕುಲ ಶ್ರೇಷ್ಠ ಗುರು ಪ್ರಾಣೇಶದಾಸರಿಂ ।
ಶ್ರೀಶ ಪ್ರಾಣೇಶ ವಿಠಲೆಂಬಂಕಿತಾ ॥
ಸೋಸಿನಿಂದಲಿ ಪಡೆದು ಶ್ರೀಶ ಮಹಿಮೆ ಉ– ।
ಲ್ಲಾಸದಿಂದಲಿ ಭಜಿಸಿ ಬೇಸರವನಳಿಯುತಾ ೪

ಮರುತನೆ ಪರಮ ಗುರು, ಹರಿಯೆ ಪರದೇವತೆ ।
ಪುರಂದರರೆ ದಾಸರೆಂದರುಹಿ ಧರೆಗೆ ॥
ವರದೇಂದ್ರ ವಿಠಲನ ಚರಣವನು ಪೂಜಿಸಿ ।
ದರಣಿ ಸಾಧನವನ್ನು ತ್ವರಿತದಿಂದಲಿ ಮುಗಿಸಿ ೫

## ೩೨೫

## ಶ್ರೀವರದ ವಿಠಲರ ಹಾಡು

ದೋಷರಾಶಿಯ ಕಳೆದು ಪಾಲಿಸುವದು ।
ಶ್ರೀಶ ಪ್ರಾಣೇಶ ದಾಸಾರ್ಯನೇ ಒಲಿದು ಪ

ಹರಷಮುನಿ ಮತ ತತ್ವಪರಮ ಹರುಷದಲಿಂದ ।
ಗರೆದು ಸುಜನರಿಗೆ ಸರಿಮಾರ್ಗತೋರಿ ॥
ಸಿರಿರಾಮನಾಮದ ಸವಿಯನುಣಬಡಿಸಿದೆ ।
ಕರಪಿಡಿದು ರಕ್ಷಿಪ ಭಾರ ನಿನ್ನದುಯೆಂದೆ ೧

ದಾಸಕುಲರತ್ನ ಗುರು ಪ್ರಾಣೇಶದಾಸರಲಿ ।
ವಾಸುದೇವನ ಸ್ಥಿರದಾಸ್ಯ ಪಡೆದು ॥

ಶ್ರೀಶ ಪ್ರಾಣೇಶ ವಿಠಲನ ಕುಣಿಸಿದ ಧೀರ ।
ಆಶಪಾಶವ ಬಿಡಿಸು ಎಂದು ನಾ ಬಂದೆ ೨

ನಂದ ವತ್ಸರದ ಭಾದ್ರಪದ ಮಾಸದಲ್ಲಿ ।
ಚಂದ್ರಪಕ್ಷವು ಅಷ್ಟಮಿ ತಿಥಿ ಭೌಮ್ಯದಿನದಿ ॥
ಮುಂದ ಕಾಲದಿ ನರಹರಿಯ ಧೇನಿಸಿ ನಲಿದು ।
ಇಂದಿರಾಧವ ವರದ ವಿಠಲನೂರಿಗೆ ನಡೆದೆ ೩

# ಅನುಬಂಧಗಳು

೧. ಕಠಿಣ ಶಬ್ದಗಳ ಅರ್ಥ (ಪದಸಂಖ್ಯೆಯ ಕ್ರಮದಲ್ಲಿ)

೨. ಶ್ರೀ ಪ್ರಾಣೇಶದಾಸರ ಪದಸಂಖ್ಯೆಯ ಕ್ರಮದಲ್ಲಿ ನಾಮಸೂಚಿ

೩. ಶ್ರೀ ಪ್ರಾಣೇಶದಾಸರ ಪದಸಂಖ್ಯೆಯ ಕ್ರಮದಲ್ಲಿ ವಿಶೇಷ ಪದಸೂಚಿ

೪. ಪದಸಂಖ್ಯೆಯ ಕ್ರಮದಲ್ಲಿ ನಾಮಸೂಚಿ, ವಿಶೇಷನಾಮಸೂಚಿ ಶ್ರೀಗುರುಪ್ರಾಣೇಶವಿಠಲರ ಹಾಗೂ ಶ್ರೀಪ್ರಾಣೇಶವಿಠಲರ ಪದಗಳಿಂದ

೫. ಕೀರ್ತನೆಗಳ ಅಕಾರಾದಿ

೬. ಆಕರ ಗ್ರಂಥಗಳು

# ಅನುಬಂಧ – ೧

## ಕಠಿಣ ಪದಗಳ ಅರ್ಥ

### ಪದಸಂಖ್ಯೆ ೧ :

### ಗಣಪತಿ ಸ್ತೋತ್ರ

ಕಂಬುಕಂಠ
ರಕ್ತಾಂಬರದ್ವಯ
ಭೂಷಾ – ಎರಡು ರಕ್ತ ವರ್ಣದ ವಸ್ತ್ರಗಳಿಂದ ಅಲಂಕೃತ

ಶಂಬರರಿಪು
ಶರ ವಿಜಿತಾ – ಶಂಬರನೆಂಬ ದೈತ್ಯನ ವೈರಿಯಾದ ಕಾಮನ ಬಾಣವನ್ನು ಗೆದ್ದವ

ಮೃದ್ಭವಗಾತ್ರ – ಮಣ್ಣಿನಿಂದ ಹುಟ್ಟಿದ ದೇಹವುಳ್ಳವ

ಅಂಬರಾಧಿಪ – ಆಕಾಶಕ್ಕೆ ಅಭಿಮಾನಿ

ಏಕವಿಂಶತಿ – ಇಪ್ಪತ್ತೊಂದು

ಮೂಷಕ – ಇಲಿ

ತಾರಕಾಂತರಾನುಜ – ತಾರಕಾಸುರನನ್ನು ಕೊಂದ ಷಣ್ಮುಖನ ತಮ್ಮ

ಶ್ರೀವರ ಶ್ರೀ
ರಾಮಚಂದ್ರ .......
ಪೂಜಿಸದೆ ಕೆಟ್ಟ – ಶ್ರೀರಾಮನು ರಾವಣಸಂಹಾರಕ್ಕೆ ಹೊರಟಾಗ ಸಮುದ್ರಕ್ಕೆ ಸೇತುವೆಯನ್ನು ಕಟ್ಟುವಾಗ ಗಣಪತಿಯ ಪೂಜೆ ಮಾಡಿದನು.

ಪಾಂಡು ಪುತ್ರನಾದ ಧರ್ಮರಾಯನೂ ಯುದ್ಧಪೂರ್ವದಲ್ಲಿ ಗಣಪತಿಯನ್ನು ಪೂಜಿಸಿ ಜಯಶಾಲಿಯಾದ.

ದುರ್ಯೋಧನನು ಮಾತ್ರ ಗಣಪತಿಯನ್ನು ಪೂಜಿಸದೇ ಸೋತು, ತನ್ನ ಕುಲವನ್ನೇ ನಾಶ ಮಾಡಿಕೊಂಡ.

ಭಕ್ತರು ಪ್ರತಿ ಕೃಷ್ಣಪಕ್ಷದ ಚತುರ್ಥಿಯದಿನ ಸಂಕಟ ಪರಿಹಾರಾರ್ಥವಾಗಿ ಈ ದೇವತೆಯನ್ನು ಪೂಜಿಸುತ್ತಾರೆ.

ವೇದವ್ಯಾಸರಿಂದ ರಚಿತವಾದ ಭಾರತವೇ ಮೊದಲಾದ ಗ್ರಂಥಗಳನ್ನು ಅರ್ಥಮಾಡಿಕೊಂಡು ಬಹುವೇಗದಿಂದ ಗಣೇಶನು ಬರೆದನು.

ಪಾರ್ವತಿಯ ಮೈಮಣ್ಣಿನಿಂದ ಹುಟ್ಟಿದನು. ಆಕೆಯ ಸ್ನಾನ ಸಮಯದಲ್ಲಿ ಬಚ್ಚಲು

ಮನೆಯನ್ನು ಕಾಯಲು ಕೂಡಿಸಿದಾಗ, ಆ ಮಗುವು ಶಿವನನ್ನು ಒಳಕ್ಕೆ ಬಿಡಲಿಲ್ಲ. ಕೋಪದಿಂದ ಶಿವನು ಅವನ ತಲೆಯನ್ನು ತರಿದು ಹಾಕಿದ. ಮುಂದೆ ಪಾರ್ವತಿಯ ಪ್ರಾರ್ಥನೆಯಂತೆ ದಕ್ಷಿಣ ದಿಕ್ಕಿನಲ್ಲಿ ಮಲಗಿದ್ದ ಆನೆಯ ಶಿರವನ್ನು ಆ ದೇಹಕ್ಕೆ ಜೋಡಿಸಿದ. ಅಂದಿನಿಂದ ಗಜಮುಖ ನೆಂಬ ಹೆಸರಾಯಿತು.

ಬಹು ಪ್ರಸಿದ್ಧವಾದ ಕಥೆಯಂತೆ ಗಣಪತಿಯು ದೊಡ್ಡ ಹೊಟ್ಟೆ, ಮೂಷಕ ವಾಹನ ಇವುಗಳೊಂದಿಗೆ ಹೊರಟಾಗ ನಕ್ಕ, ಚಂದ್ರನನ್ನು ತನ್ನ ಒಂದು ದಂತದಿಂದ ಹೊಡೆದು ಅವನಿಗೆ ಕ್ಷಯ ವೃದ್ಧಿಗಳುಂಟಾಗುವಂತೆ ಶಾಪಕೊಟ್ಟನು.

## ಪದಸಂಖ್ಯೆ ೨ :

### ಶ್ರೀಹರಿ ಸಂಕೀರ್ತನೆ

ಜಾತರೂಪಾಂಗದ
ವರದ – ರುಕ್ಮಾಂಗದವರದ,
ಮಂದರ–
ಧರಾಧರದೇವ – ಮಂದರ ಪರ್ವತ ಧಾರಣ ಮಾಡಿದ ಕೂರ್ಮ.
ಕುರಂಗ – ಜಿಂಕೆ
ಅಂಕ – ಚಿಹ್ನೆಯುಳ್ಳ, ಜಿಂಕೆಯ ಚಿಹ್ನೆ ಕೈಯಲ್ಲಿ ಉಳ್ಳ ಮಹಾರುದ್ರದೇವರ ಸಖ.
ಗಾಂಗೇಯ ಗೀತ – ಶರಶಯ್ಯೆಯಲ್ಲಿ ಮಲಗಿದ್ದ ಭೀಷ್ಮರ ಹತ್ತಿರ ಧರ್ಮಶ್ರವಣಕ್ಕಾಗಿ ಕೃಷ್ಣನು ಧರ್ಮರಾಯನನ್ನು ಕರೆದುಕೊಂಡು ಬಂದಾಗ ಭೀಷ್ಮರು ಶ್ರೀಕೃಷ್ಣನ ಸ್ತೋತ್ರ ಮಾಡಿದ ಗೀತ, ಭೀಷ್ಮಸ್ತವರಾಜ,
ದಂಡ – ಸೂರ್ಯ,
ಆತ್ಮಜ – ಸುಗ್ರೀವ, ಮೇಷಾಂಡಜ ಸಂಹಾರ ಇಂದ್ರ ನಿಂದ ಹುಟ್ಟಿದ ವಾಲಿಯ ಸಂಹಾರಕ, ರಾಮಚಂದ್ರ,
ಅರಿಕರಿಷಂಡ–
ಮೃಗೇಂದ್ರ – ವೈರಿಗಜ ಸಮೂಹಕ್ಕೆ ವೈರಿ

## ಪದಸಂಖ್ಯೆ ೩ :

ಜಲದ – ಮೇಘ,
ನಿಭಾಂಗ – ಮೇಘದಂತೆ ಹೊಳೆಯುವ ದೇಹ
ಯೋಗಧರ ತಾತ – ತ್ರಿಶೂಲಧರನಾದ ಮಹಾರುದ್ರನ ತಾತ, ಶ್ರೀಹರಿ, ಶೂಲನಾಮಕ ಯೋಗ,
ಕಭಿಲೋಕ ಪತಿ – ಕ, ವರ್ಗದ ಒಂದನೆಯ

| | | |
|---|---|---|
| | | ಅಕ್ಷರ ಭ, ವರ್ಗದ ನಾಲ್ಕನೆಯ ಅಕ್ಷರ, ಕ ಭ – ೧೪, ಹದಿನಾಲ್ಕು, |
| ಶಿರಿಯೋಗ | – | ಲಕ್ಷ್ಮಿಗೆ ಗಂಡ, ಇಂದು ಗಂಡ ನಾಮಕ ಯೋಗ |
| ಯೋಗಾಂಡ | – | ಬ್ರಹ್ಮಾಂಡ, ಬ್ರಹ್ಮನಾಮಕ ಯೋಗ, |
| ಯೋಗಾಂಬಧರ | – | ಶುಕ್ಲಾಂಬರಧರ (ಶುಕ್ಲ ನಾಮಕ ಯೋಗ) |
| ಘಮುಖ ಜನಕ | – | ಘ, ವರ್ಗದ ನಾಲ್ಕನೆಯ ಅಕ್ಷರ, ಚತುರ್ಮುಖಜನಕ, |
| ಯೋಗಗಾತ್ರ | – | ಶೋಭನಾಗಾತ್ರ (ಶೋಭನ ನಾಮಕ ಯೋಗ) |
| ಕ್ಷಮೂರ | – | ಷ ಅವರ್ಗೀಯ ದಲ್ಲಿ ಆರನೆಯ ಅಕ್ಷರ, ಅರುದೂರ, |
| ವರ್ಗದ್ವಯ ಅವತಾರ | – | ಎರಡು ವರ್ಗಗಳಲಿ ಹತ್ತು ಅಕ್ಷರಗಳು, ಹತ್ತು ಅವತಾರ, |
| ಯೋಗಪಾಣಿ– ಸುತಪ್ರೀಯ | – | ವಜ್ರಪಾಣಿಯಾದ ಇಂದ್ರನಸುತ ಪ್ರೀಯನಾದ ಶ್ರೀಹರಿ, (ವಜ್ರ ನಾಮಕ ಯೋಗ) |
| ಯೋಗರಾಯ | – | ಧ್ರುವರಾಯ, (ಧ್ರುವನಾಮ ಯೋಗ) ಅದೇ ಪದವಿ ..... ಧ್ರುವ ಸ್ಥಿರವಾದ ಪದವಿ ಕರುಣಿಸಿಕೊಟ್ಟ. |
| ಯೋಗೇಶ | – | ಸಿದ್ಧರಿಗೆ ಈಶ (ಸಿದ್ಧನಾಮಕ ಯೋಗ) |
| ಣಾಸ್ತ್ರಪಿತ | – | ಣ, ವರ್ಗಾ ಪಂಚಮ ಅಕ್ಷರ, ಪಂಚ ಬಾಣ ಪಿತ. |
| ಯೋಗದಲಿ ಮನಸು ನಿಶ್ಚಯಿಸು | – | ಸುಕರ್ಮದಲ್ಲಿ ಮನಸ್ಸು ನಿಶ್ಚಯಿಸು, ಸುಕರ್ಮನಾಮಕ ಯೋಗ, |
| ಹಕರ್ತೃತ್ವ | – | ಹ, ಎಂಟನೆಯ ಅಕ್ಷರ ಅಷ್ಟ ಕರ್ತೃತ್ವ, |
| ಯೋಗಫಲ | – | ಶುಭಫಲ (ಶುಭಯೋಗ) |
| ಯೋಗನಾಗಿಯು | – | ಸಾಧ್ಯನಾಗಿ, (ಸಾದ್ಯನಾಮಕಫಲ) |
| ಯೋಗಹ್ರಾಸವರ್ಜಿತ | – | ವೃದ್ಧಿಹ್ರಾಸ ವರ್ಜಿತ. (ವೃದ್ಧಿಯೋಗ) |

## ಪದಸಂಖ್ಯೆ ೫ :

ವೃಂದಾರಕಗುರು
ತಂದೆ – ದೇವತಗಳ ಗುರು ಬ್ರಹ್ಮದೇವರ ತಂದೆ,

ಅರಿಂದಸು – ಶತೃಸಂಹಾರಕ,

ಅರಾತಿ – ವೈರಿ,

ದಂಡಧರನ ಪುರ – ಯಮಪುರ,

ಶಶಿಮಂಡೆ – ತಲೆಯಲ್ಲಿ ಶಶಿಯನ್ನು ಧರಿಸಿದವನು, ಶಿವ

## ಪದಸಂಖ್ಯೆ ೬ :

### ಸಂವತ್ಸರಗಳ ಹೆಸರುಗಳು :

ಸಂವತ್ಸರಾಂಬರ–
ಧರ – ಶುಕ್ಲಾಂಬರಧರ (ಶುಕ್ಲ)

ಸಂವತ್ಸರ ಹರೆ – (ಪ್ರಜಾಪತಿ) ಸಂವತ್ಸರ

ಸಂಪವತ್ಸರಕೆ ನಿನ್ನ– ನಿನ್ನ ವಿಕ್ರಯಕೆ, (ವಿಕ್ರಮ)

ಸಂವತ್ಸರ ಜಲಜಕೆ – ಶ್ರೀಮುಖಸಂವತ್ಸರ

ಸಂವತ್ಸರುಪಮಾ – ಪಿಂಗಳುಪಮಾ

ಸಂವತ್ಸರಾಕ್ಷನುತ – ಅಗ್ನಿಯಂತೆ ಕಣ್ಣುಳ್ಳ, ರುದ್ರ ದೇವರಿಂದ ವಂದಿಸಿಕೊಳ್ಳುವ ನಾರಾಯಣ : ಚಿತ್ರಭಾನು ಸಂವತ್ಸರ

ಗಜವೈರಿ ಸಂಪಹರನೆ – ನಕ್ರಸಂಹಾರನೇ

ಸಂವತ್ಸರಾದಿ – ಖರಾದಿ,

ಸಂವತ್ಸರಿಪು – (ರಾಕ್ಷಸ ಸಂವತ್ಸರ)

ಸಂವತ್ಸರ ಕುವರ – ಶ್ರೀ ಕೃಷ್ಣ (ನಂದನ ಸಂವತ್ಸರ)

ಸಂವತ್ಸರನೇ – ಈಶ್ವರನೇ,ಬಿಂಬನೇ (ಈಶ್ವರ ಸಂವತ್ಸರ)

ಎನ್ನ ಸಂಪತ್ಸರ–
ವಳಿದು – ಎನ್ನದುರ್ಮತಿಯ ಳಿದು (ದುರ್ಮತಿ ಸಂವತ್ಸರ)

ಕೊಡು
ಸಂವತ್ಸರ ಮತಿ – ಸೌಮ್ಯಮತಿ, (ಸೌಮ್ಯ ಸಂವತ್ಸರ)

ಸಂವತ್ಸರ
ಸಮಗ್ರಾ – ಆನಂದ ಪೂರ್ಣ (ಆನಂದ ಪೂರ್ಣ ಸಂವತ್ಸರ)

ಸಂವತ್ಸರಸ್ವಾಮಿ–
ದೋಷದೂರ – ಸರ್ವದೋಷವನ್ನು ಗೆದ್ದವ, ಸ್ವಾಮಿ, ಸರ್ವೋತ್ತಮ, (ಸರ್ವಜಿತು ಸಂವತ್ಸರ)

ಸಂವತ್ಸರಪಿತ – ಮನ್ಮಥ ಪಿತ (ಮನ್ಮಥ ಸಂವತ್ಸರ)

ಶಿರಿ ಸಂವತ್ಸರ – ಅಸುರೀ ಸಂಪತ್ತನ್ನು ಕ್ಷಯಾ ಮಾಡುವ ಸ್ವಾಮಿ, (ಕ್ಷಯ ಸಂವತ್ಸರ)

## ಪದಸಂಖ್ಯೆ ೭ :

ಕ್ಲೇಶ ಸಂವತ್ಸರ
ಮಾಡು – ಕ್ಲೇಶಗಳನ್ನು ಪರಾಭವ ಮಾಡು, (ಪರಾಭವ ಸಂವತ್ಸರ)
ಸ್ವಪಾರ್ದಪ – ಕಲ್ಪವೃಕ್ಷ
ನರಪತಿ – ಅಂಬರೀಷ,
ಸಂಕ್ರಂದನ – ಇಂದ್ರ,
ವೀತ – ಅವನಿ ಮುಖ
ತನ್ಮಾತ್ರಾಗಣ – ಪಂಚಭೂತ ಪೃಥವಿಯಾದಿ ತನ್ಮಾತ್ರಾದಿ ಗುಣಗಳಿಂದ ಆಕರ್ಷಿತವಾಗದ ಮೂರ್ತಿ
ಅಘಕ್ಷಕಾನಲ – ದುರಿತವೆಂಬ ಕಾನಕೆ ಅಗ್ನಿ ಸದೃಶನು,
ನಿನ್ನನುಗರೊಳಿಗಿಡ –ನಿನ್ನಿ ಸೇವಕ ರೊಳು,ದಾಸರೊಳು,

## ಪದಸಂಖ್ಯೆ ೮ :

ವಾರಾಶಿಜಿ – ಲಕ್ಷ್ಮಿ,
ದೃಹಿಣಿ – ಬ್ರಹ್ಮ
ವಿಜಯ – ಶಂಖ, ವಿಶೇಷ ಜಯಕಾರ ದ್ಯೋತಕ,
ಗಾಂಗೇಯ – ಬಂಗಾರ,
ಚೈಲ – ಬಟ್ಟೆ,
ಪೀತಾಂಬರ – ಹಾಟಕಾಂಬರ,
ತಾಳಂಕ – ತಾಳವೃಕ್ಷದ ಚಿಹ್ನೆಯುಳ್ಳವನು, ಬಲರಾಮ.
ತ್ರ್ಯಕ್ಷ – ಸಖ,
ಝುಕ್ಷ – ಮತ್ಸ್ಯ ಮೀನು, ಮಹಾದೇವರ ಸಹ, ಶ್ರೀಹರಿ,
ವೃತತಿಜಾಕ್ಷ – ವೃತತಿ, ಬಳ್ಳಿ,
ಜ – ಹುಟ್ಟಿದ – ಕಮಲಾಕ್ಷ
ಸುತ್ರಾಮ ನಂದನ –ಅರ್ಜುನ
ದೇವತ್ರ – ದೇವತೆಗಳನ್ನು ರಕ್ಷಣೆ ಮಾಡಿದ,
ಕಿಟಿ – ವರಾಹ, ಹಂದಿ,
ಪುಷ್ಕಾರಕೇಶನನುಜ – ಶುಕ್ಲಕೇಶನ ಬಲರಾಮನ ತಮ್ಮ – ಶ್ರೀಕೃಷ್ಣ,
ವ್ಯೋಮ ಸರಿತ್ಪತಿ – ಗಂಗಾಪಿತೃ – ಶ್ರೀವಿಷ್ಣು,
ಪಿತಾಮಾತಾಮಹನು – ಬ್ರಹ್ಮನ ತಾಯಿ ಯಾದ ಲಕ್ಷ್ಮಿಗಿಂತ ದೊಡ್ಡವನು, ನಾರಾಯಣ,
ಭರ್ಮರೋಚಹ– ಹಿರಣ್ಯಾಕ್ಷನನ್ನು ಕೊಂದವನು, ವರಾಹ,
ಸುಕರ್ಮಸ್ಥಿತ – ಬ್ರಹ್ಮಚಾರಿ, ವಾಮನ

## ಪದಸಂಖ್ಯೆ ೯ :

ಅಂತರಿಕ್ಷಾಳಕ – ಅಳಕ – ಕೇಶ,
ವ್ಯೋಮಕೇಶ – ಮಹಾದೇವ,
ಋಕ್ಷ – ನಕ್ಷತ್ರ,
ಮಾಯಾಕಷಾಗ್ನಿ – ಮಾಯೆ

ಎಂಬ ಅರಣ್ಯಕ್ಕೆ ಅಗ್ನಿಯಂತಿರುವವ

ಅಂಜನಧರಾ-ಧರವಾಸ – ಧರಾಧರಪರ್ವತ, ಅಂಜನಾ ಚಲವಾಸ,

ಬಲಭುಜನಾನುಜ– ಬಲನೆಂಬ ದೈತ್ಯನನ್ನು ಸಂಹಾರ ಮಾಡಿದ ಇಂದ್ರನ ತಮ್ಮ ಉಪೇಂದ್ರ

ವೀತಭೂಮುಖ– ಪೃಥ್ವಿಯಾದಿ ಪಂಚಭೂತಗಳ ವಿಕಾರಗಳಿಂದ ರಹಿತನಾದ (ಸಹಿತನಾದ)

ಖೇಟಾಹ – ಖ – ಆಕಾಶ,

ಆಟ – ಚರಿಸುವವರ ದೈತ್ಯರು,

ಹ – ಹನನ ಮಾಡಿದ, ರಾಮಕೃಷ್ಣಾವತಾರ ಗಳ ಸೂಚನೆ.

ಕೋಕನ – ಕಮಲ,

ನಿತ್ಯಂತ – ನಾಶಮಾಡಿದ,

ಅಹಿಮದಾಗ – ಕಾಳಿಂಗದ ಮದಹರಣ ಮಾಡಿದ ಶ್ರೀಕೃಷ್ಣ,

ಧುನಿ – ನದಿ,

ಭವಾಬ್ಧಿಘಟಜಾ – ಘಟಜಾ ಅಗಸ್ತ್ಯಮುನಿ, ಅಗಸ್ತ್ಯನಂತೆ ನನ್ನ ದುರಿತವೆಂಬ ಭವ ಸಮುದ್ರವನ್ನು ಅಪೋಷನಮಾಡು.

## ಪದಸಂಖ್ಯೆ ೧೦ :

ರವಿ – ಚಕ್ರ,

ದರ – ಶಂಖ,

ಅರಿಂದಮ – ವೈರಿಗಳನ್ನು ದಮನಮಾಡಿದವ,

ಅವರಜಾ – ತಮ್ಮ

ಶಕ್ರಾವರಜ – ಉಪೇಂದ್ರ

## ಪದಸಂಖ್ಯೆ ೧೧ :

ವಿಶ್ವಕುಕ್ಷಿ – ಜಗದುದರ, ಮಾ – ಕಾ – ವಿ – ಲಕ್ಷ್ಮಿ – ಬ್ರಹ್ಮ – ಗರುಡ,

ಮರ್ತ್ಯಮೃಗ – ನರಸಿಂಹ,

ಅನಂತ – ಅನ – ವಾಯು, ಅದರಲ್ಲಿ ನೆಲಸಿದ ಕಾರಣ ಕೊಳಲು,

ಗೋತ್ರದ್ವಿಟ್ಸಸಖ – ಗೋತ್ರ – ಪರ್ವತ,

ದ್ವಿಟ್ – ವೈರಿ,

ಇಂದ್ರ + ಜ + ಸಖ – ಶ್ರೀಕೃಷ್ಣ,

ಶೂರಪಾತ್ರ – ಶೂರಸೇನನ ಮೊಮ್ಮಗ, ಶ್ರೀಕೃಷ್ಣ

ತ್ರಯ – ವೇದ,

ಕಳತ್ರ – ಪತಿ

ಫಲಾಭಕ್ಷಕರ

ಕೊಂದು – ತೃಣಾವರ್ತಕ ಹಾಗೂ ಧೇನುಕಾ–

ಸುರನನ್ನು ಕೊಂದು.

ಕಲ್ಜಸ್ರುಕ್ – ವನಮಾಲಾ.

ಭೀರುವೇಷ – ಭಿಲ್ಲರವೇಷ

ಸ್ವಲ್ಪೇತರ – ಬಹಳ.

ಆನಂದಲೇಖ – ಅಲೇಶ – ಬಹಳ.

ಅಪನೋದಿ – ನಾಶ ಮಾಡುವವ.

ವೀತಭೂತ – ಭೂತಸಂಬಂಧ ಜನ್ಯ ಬಹುವಿಧ ಪಾತಕಗಳಿಂದ ದೂರನಾದವನು.

ಕುಭವ – ಕೆಟ್ಟ ಸಂಸಾರ

ಕರಿರಜ – ಅಗಸ್ತ್ಯ

ಕಂಠ – ಕೊಡ.

ವ್ರತಿ – ಕಾತ್ಯಾಯನಿ ಮೊದಲಾದ ವ್ರತಗಳನ್ನು ಮಾಡಿದ ಗೋಪಿಕಾ ಸ್ತ್ರೀಯರು.

ವಿಧು – ಬ್ರಹ್ಮಾಂಶವುಳ್ಳ ಚಂದ್ರನ ಸಹಿತ. ಅತ್ರಿ, ಅನಸೂಯೆ ಯಲ್ಲಿ ಅವತಾರ ಮಾಡಿದ ದತ್ತಾತ್ರಯ.

ದ್ವಿಜಕುಲವರ ತ್ರ್ಯಕ್ಷಾ – ರುದ್ರಾಂಶವುಳ್ಳ ಬ್ರಾಹ್ಮಣ ಕುಲೋತ್ತಮ. ಅಶ್ವತ್ಥಾಮಾ ಚಾರ್ಯ.

ತಾರ್ಕ್ಷ್ಯ – ಗರುಡ. ಪುಂಡರೀಕ, ಲಕ್ಷ್ಮಿ.

ದಂಡಜ ವರದ – ದಂಡಜ. ಸೂರ್ಯವಂಶ. ಸುಗ್ರೀವ.

## ಪದಸಂಖ್ಯೆ ೧೨ :

ನೀಕ – ಸಮೂಹ.

## ಪದಸಂಖ್ಯೆ ೧೩ :

ಮಧುರಾಪತಿಜಿತನೆ–ಮಧುರೆಗೆ ರಾಜನಾದ ಕಂಸನನ್ನು ಗೆದ್ದವನೆ.

ಮಧುಮಾಂ – ನನ್ನ ಬಿಂಬಿಸಿ.

ಋಷಿಪತ್ನಿನಾಶಕ – ರೇಣುಕೆಯನ್ನು ಕೊಂದ ಪರಶುರಾಮ

ಋಷಿಪತ್ನಿಬಾಲಕ – ದೇವಹೂತಿಯ ಮಗ ಕಪಿಲ. ಅದಿತಿ ದೇವಿಯ ಮಗ ವಾಮನ.

ಕವಿಗೇಯ – ಬ್ರಹ್ಮಜಿಜ್ಞಾಸು ಗಳಿಂದ ತಿಳಿಯಲ್ಪಡುವವ.

ಭಾನುರೋಚನಧೀಶ – ಸೂರ್ಯನೇ ಕಣ್ಣಾಗಿಯುಳ್ಳವ (ಸವಿತೃ)ಮಂಡಲ ಮಧ್ಯವರ್ತಿ.

ಭಾನುಪಸುತ ಪೋಷ – ಸೂರ್ಯನನ್ನು ಪಾಲಿಸಿದ

ವಾಯುಪುತ್ರನನ್ನು ಪೋಷಿಸಿದ ಶ್ರೀರಾಮ.

ಭಾನುಪಾಣಿ – ಚಕ್ರಪಾಣಿ,

ಹರಿಶಯನ – ಶೇಷಶಯನ,

ಹರಿ – ಸಿಂಹ,

## ಪದಸಂಖ್ಯೆ ೧೪ :

ತಪನಾಪ್ತಾಕ್ಷ – ತಪನ – ಆಪ್ತ – ಅಕ್ಷ – ಕಮಲಾಕ್ಷ

ಹರಿಜಿತು – ಇಂದ್ರಜಿತು,

ಜರಿಜ – ಜರಾಸಂಧ,

## ಪದಸಂಖ್ಯೆ ೧೫ :

ತೃಣಶಾಯಿ – ಹುಲ್ಲಿನ ಹಾಸಿಗೆ, ಶ್ರೀರಾಮ ವನವಾಸ ಕಾಲದಲ್ಲಿ ಹುಲ್ಲಿನ ಹಾಸಿಗೆಯ ಮೇಲೆ ಮಲಗಿದ್ದ

## ಪದಸಂಖ್ಯೆ ೧೬ :

ಮತ್ತಗಜವೆಂಟು – ಅಷ್ಟಮದಗಳು,

ಆರುಮಂದಿ – ಷಡ್ವೈರಿಗಳು,

ಪರಮಾತ್ಮನೊಂದಿಗೆ ಭಕ್ತನ ಸಲಿಗೆ, ವಿಂಡಬಕ ಹಾಸ್ಯದಿಂದ ತುಂಬಿದ ನಿಂದಾಸ್ತುತಿಗಳು.

## ಪದಸಂಖ್ಯೆ ೧೯ :

ಪಾದಜಲರಸರ ಬದುಕಿಸಿತು – ಶ್ರೀಹರಿಯ ಪಾದದಿಂದ ಹುಟ್ಟಿದ ಗಂಗಾನದಿಯು ಸಗರರಾಜನ ಮಕ್ಕಳನ್ನು ಬದುಕಿಸಿತು.

ನಳಿನಾನುಜ (?) ಪಾದಪೆಸರೆ ಪತಿತನಕಾಯ್ತು – ಪಾದ – ಚಕ್ರ, ಚಕ್ರವು ಪತಿತನಾದ ನಕ್ರನನ್ನು ಕಾಯಿತು.

ಪಾದವ ಮುರಿದು ..... ಐದಿಸಿತು – ನಳ, ಕೂಬರ ಇಬ್ಬರನ್ನು ಉದ್ಧರಿಸಿದ ಕೃಷ್ಣಾವತಾರದ ಕಥೆ

ಮೃತಾತ್ಮಜನ – ಸತ್ತಮಕ್ಕಳ ತಂದುಕೊಟ್ಟ ಸಾಂದೀಪಿಗೆ ಗುರು ದಕ್ಷಿಣೆಗೆ ಕೊಟ್ಟ ಕಥೆ.

## ಪದಸಂಖ್ಯೆ ೨೦ :

ಮಾವನಿಗೆ ಮಾವನಾದಿ – ಮಗಳಾದ ಗಂಗಾದೇವಿಯನ್ನು ಸಮುದ್ರರಾಜನಿಗೆ ಕೊಟ್ಟು ಸಮುದ್ರ ರಾಜನ ಮಗಳಾದ ಲಕ್ಷ್ಮಿಯನ್ನು ನೀ ಮದುವೆಯಾದಿ.

ಪರಿಮಿತಿಯಿಲ್ಲದ ...... ಮಗನ – ಮನ್ಮಥನ ಮೈದುನನು ಗುರುದ್ರೋಹಿ – ಲಕ್ಷ್ಮಿಯೊಡನೆ ಹುಟ್ಟಿದ ಚಂದ್ರ ಗುರುದ್ರೋಹಿ.

ಮೊಮ್ಮಗನು ..... ತಿರುಗುವ – ನಾರದ,

## ಪದಸಂಖ್ಯೆ ೨೧ :

ಜಾಗು – ಆಲಸ್ಯ,

ಮಾನುಷೋತ್ತಮಾದಿ
ಬ್ರಹ್ಮಾಂಡ
ದಿವಿಜರು – ಬ್ರಹ್ಮನಿಂದ ಕೆಳಗೆ ಎಲ್ಲ ಕಕ್ಷಾ ದೇವತೆಗಳು.

## ಪದಸಂಖ್ಯೆ ೨೨ :

ದೋಷನಗ ಕುಲಿಷ – ದೋಷವೆಂಬ ಪರ್ವತ, ವಜ್ರಾಯುಧ.

ಮರೆತಾದರೂ ..... ಪೊರೆವ – ಭಾಗವತದಲ್ಲಿ ಬರುವ ಅಜಮಿಳನ ಕಥೆ. ಅಜಮಿಳನೇ ಮಹಾದುರ್ಗುಣಿಯು, ವ್ಯಭಿಚಾರಿಯೂ ಆದವನು. ಮರಣ ಕಾಲಕ್ಕೆ ನಾರಾಯಣನೆಂಬ ತನ್ನ ಮಗನನ್ನು ಕರೆದ ಮಾತ್ರಕ್ಕೆ ವೈಕುಂಠಕ್ಕೆ ಹೋದನು.

## ಪದಸಂಖ್ಯೆ ೨೪ :

ಪಂಚಯಜ್ಞಗಳು –

೧. ದೇವಪೂಜಾ
೨. ಬ್ರಹ್ಮಯಜ್ಞ
೩. ವೈಶ್ವದೇವ
೪. ಬಲಿಹರಣ
೫. ಅತಿಥಿ ಪೂಜಾ.

## ಪದಸಂಖ್ಯೆ ೨೫ :

ಬಾರ್ಹದ್ರಥ – ಬೃಹದ್ರಥನ ಮಗ, ಜರಾಸಂಧ

ಅಂಜಾಲೆಮಜಾ – ಅಂಜಲು – ಯಮಜ –
ಧರ್ಮರಾಯನು ಅಂಬಲು.

ಬಾಣನ ಬಾಗಿಲು.......... ಬಾಣಾಸುರನ ತೋಳುಗಳನ್ನು ಶ್ರೀಕೃಷ್ಣನು ಛೇದಿಸುವಾಗ ಆತನ ಇಷ್ಟ ದೈವನಾದ ಶಂಕರನು ವಿರೋಧಿಸಲಿಲ್ಲ.

## ಪದಸಂಖ್ಯೆ ೨೭ :

ನಿನಗೆ ನಾ ಪರಕೀಯನಲ್ಲೊ – ಪ್ರಾಣೇಶದಾಸರು ಪಾಂಡುರಾಜನ ಅಂಶವುಳ್ಳವರು ಎಂಬ ನಂಬಿಕೆಗೆ ಈ ಮಾತು ಪೋಷಕವಾಗಿದೆ. ಪಾಂಡು ರಾಜನ ಪತ್ನಿಯಾದ ಕುಂತಿದೇವಿ ಶ್ರೀಕೃಷ್ಣನ ಸೋದರತ್ತೆ.

## ಪದಸಂಖ್ಯೆ ೨೮ :

ಸಂಕರುಷಣ – ವಿಷ್ಣುವಿನ ರೂಪ.
ಅನ್ನಾದ – ಅನ್ನವನ್ನು ಕೊಡುವವನು.

## ಪದಸಂಖ್ಯೆ ೨೯ :

ಮೊಮ್ಮಕ್ಕಳನ್ನು .... ಕೊಲ್ಲಿಸಿದ. ವೇದವ್ಯಾಸದೇವರ ಮೊಮ್ಮಕ್ಕಳಾದ ಕೌರವರನ್ನು ಕೊಲ್ಲಿಸಿದ ಶ್ರೀಕೃಷ್ಣ – ವೇದವ್ಯಾಸರು ಅಭಿನ್ನರು.

"ಮೊಮ್ಮಗನಿಗೆ ತನ್ನ ತಂಗಿಯನು ಕೊಟ್ಟ." – ವೇದವ್ಯಾಸರ ಮೊಮ್ಮಗ ಅರ್ಜುನನಿಗೆ ತನ್ನ ತಂಗಿಯಾದ ಸುಭದ್ರೆಯನ್ನು ಕೊಟ್ಟ.

ಮೊಮ್ಮಗನನಾದಿನಿಯರಲ್ಲಿಮಕ್ಕಳನ್ನು ಪಡೆದ - ವಿಷ್ಣುವಿನ ಮಗಳು ಗಂಗೆ, ಆಕೆಯ ಮಗ ಭೀಷ್ಮ ಆತನ ನಾದಿನಿಯರು, ಅಂಬೆ, ಅಂಬಾಲಿಕೆಯರಲ್ಲಿ ವೇದವ್ಯಾಸರು ಮಕ್ಕಳನ್ನು ಪಡೆದ ಕಥೆ.

'ಮೊಮ್ಮಗನ ವಹಿಸಿ ಪುತ್ರನ್ನ ಅಳಿದ' –ರುದ್ರದೇವರನ್ನು (ಬ್ರಹ್ಮನ ಮಗ) ವಹಿಸಿ ಮಗನಾದ ಮನ್ಮಥ (ಪ್ರದ್ಯುಮ್ನ)ನನ್ನು ಅಳಿದ.

'ಒಬ್ಬ ಮಾವನ..... ಮಾನ ಕಳೆದ' – ೧. ಕಂಸ ವಧೆಯ ಕಥೆ ೨. ಜಾಂಬುವಂತನ ಕೂಡ ಯುದ್ಧ ಮಾಡಿದ, ೩. ಸಮುದ್ರರಾಜನ ಮೇಲೆ (ರಾಮಾವತಾರದಲ್ಲಿ) ೪. ಭೀಷ್ಮಕನ ಮಗ ರುಗ್ಮಿಯ ಮಾನ ಕಳೆದ

ಒಬ್ಬ ಅತ್ತೆಗೆ ತಂದೆಯೆನಿಸಿಕೊಂಡ – ಗಂಗೆಯ ತಂದೆಯಾದ ಗಂಗಾಪತಿ ಸಮುದ್ರರಾಜನ ಮಗಳು ಲಕ್ಷ್ಮಿಯನ್ನು ಮದುವೆಯಾದ ಆದ್ದರಿಂದ ಗಂಗಾದೇವಿ ಅತ್ತೆ ಯಾದಳು, ಮಗಳೂ ಆದಳು. ಭೂದೇವಿಗೆ ಗಂಡನಾದವನು ವಿಷ್ಣು, ಸೀತೆ, ಅಯೋನಿಜೆಯನ್ನು ಮದುವೆಯಾದನು ರಾಮ.

ಸೋದರತ್ತೆಯ ..... – ಸೋದರತ್ತೆಯಾದ ಕುಂತಿದೇವಿಗೆ ವೇದವ್ಯಾಸರು ಮಾವ ಆದರು. ಇನ್ನೊಬ್ಬ ಅತ್ತೆಯಾದ ಗಾಂಧಾರಿಗೆ ಶ್ರಮಪಡಿಸಿದ.

ಒಬ್ಬ ಮಗಳನ್ನು ತನ್ನ ಹಿರಿಯ ಮಗನಿಗೆ ಕೊಟ್ಟ. ಮಗಳಾದ ಸರಸ್ವತಿಯನ್ನು ತನ್ನ ಹಿರಿಯ ಮಗ ಬ್ರಹ್ಮನಿಗೆ ಕೊಟ್ಟ. ಸೀತೆಯನ್ನು (ಭೂದೇವಿಯ ಮಗಳು) ತಾನೇ ಮದುವೆಯಾದ.

"ಒಬ್ಬ ಮಗಳನ್ನು ಒಂದು ರೀತಿಯಲಿ...." ಗಂಗೆಯಲ್ಲಿ ಎಂದರೆ ನೀರಿನಲ್ಲಿ ಹುಟ್ಟಿದ ಮತ್ಸ್ಯ ಮಗಳಿಗೆ ಸಮಾನ, ಮತ್ಸ್ಯಾವತಾರದ ಕಥೆ.

"ಒಬ್ಬ ಮಗಳನ್ನು ಹಲವರಲ್ಲಿರಿಸುವ –" ಬುಧ್ಯಾಭಿಮಾನಿಯಾದ ಭಾರತಿಯನ್ನು ಮುಕ್ತಿಯೋಗ್ಯರಿಗೆ ಅವರವರ ಯೋಗ್ಯತಾನುಸಾರ ಕೊಡುತ್ತಾನೆ. (ಹಲವರಲ್ಲಿರಿಸುವಾ) ಭೀಮಸೇನನು ತನ್ನ ಪತ್ನಿ ದ್ರೌಪದಿಯನ್ನು ಉಳಿದ ನಾಲ್ವರು ಸಹೋದರರಿಗೆ ಹಂಚಿಕೊಟ್ಟ.

## ಪದಸಂಖ್ಯೆ ೩೦ :

ಭೂಧರಧಾಮ – ವೆಂಕಟಾಚಲ ನಿವಾಸ

ಸರ್ವರ + ಅಕ್ಷಿ – ಎಲ್ಲರ ಕಣ್ಣುಗಳಲ್ಲಿರುವವನೆ

ಕಂಧರದೊಳಗಿರುತಿಹ– ಕಂಠದಲ್ಲಿರುವ, ತೈಜಸ

ಖಲು – ಸತ್ಯ,

ದ್ವಿದಲ – ಎರಡು ತಲೆಯುಳ್ಳವನು ಅಗ್ನಿ

ಸದ್ಮ – ಮನೆ,

ಮೂರೊಂದುಹಾನಿ ರಹಿತ – ೧. ಅಪೂರ್ಣತೆ
೨. ಪಾರತಂತ್ರ್ಯ
೩. ಉಪಜೀವ್ಯ

ನಾಲ್ಕು ಲಕ್ಷಣಗಳಿಂದ
ದೂರನು – ಪ್ರಾಣೇಶವಿಠಲನು
೧. ಅಜ್ಞಾನ
೨. ವಿಸ್ಮೃತಿ
೩. ಭ್ರಾಂತಿ
ಸಂಶಯಗಳ
ಹಾನಿಗಳಿಂದ ದೂರ

## ಪದಸಂಖ್ಯೆ ೩೧ :

ಆಧ್ಯಾತ್ಮದಿಂದ ಕೂಡಿದ ಜಟಿಲವಾದ ಪದ

## ಪದಸಂಖ್ಯೆ ೩೨ :

ಅಂಸಗಾ – ಭುಜ
ಮಹಾಣು – ಮಹತ್ ಅಣು.
ತಟಿತ್ – ಮಿಂಚು.

## ಪದಸಂಖ್ಯೆ ೩೩ :

ವಶಮತಿ – ಮಧ್ವಾಚಾರ್ಯ

## ಪದಸಂಖ್ಯೆ ೩೪ :

ಶ್ರೀರಾಮನು ಅಹಿಲ್ಯೋದ್ಧಾರ ಮಾಡಿದ ಕಥೆ.

## ಪದಸಂಖ್ಯೆ ೩೫ :

ಜಲಧಿಸುತನವಾರ– ಸೋಮವಾರ
ನಳಿನಸಖ – ರವಿ.

## ಪದಸಂಖ್ಯೆ ೩೬ :

ಭುಜರು – ಭೋಕ್ತರು.
ಕೃತು ಭುಜರು – ಯಜ್ಞಭೋಕ್ತರಾದ ದೇವತೆಗಳು.
ಸುಭುಜಾಹ್ವಯ – ಸಂಸಾರಭೋಕ್ತಾ
ಹಕ್ಲ – ಅಲ್ಪ.
ಶುಕ್ಲಾಂಗ – ಬಿಳಿಯ ಗಾತ್ರ.
ಶಿತ – ಬಿಳಿ. ಶುಕ್ಲ.
ಪರಿಘ – ಪರಿಘನಾಮಕ ಯೋಗ.
ವಿವಾ – ಹಗಲು
ಗಂಗೆಯ ಗರ್ಭ – ಹಿರಣ್ಯಗರ್ಭ. ಬ್ರಹ್ಮ
ಧಾತಾಬ್ದಿ – ಧಾತುನಾಮ ಸಂವತ್ಸರ
ಧೃತಿ – ಧೃತಿನಾಮಕ ಯೋಗ.
ಮಂದವಾರ – ಶನಿವಾರ.
ಶುಕ್ಲಾದ – ಶುಕ್ಲಯೋಗ.
ಧನುಪತಿಯುಗ – ಕಲಿಯುಗ.
ವೃದ್ಧಿ – ವೃದ್ಧಿನಾಮಕ ಯೋಗ.

## ಪದಸಂಖ್ಯೆ ೩೭ :

ಪ್ರಮೇಯವಲ್ಲ – ಅಪ್ರಮೇಯ. ಪರಮಾತ್ಮ
ಬೆಳ್ಳಿ ಬಂಗಾರವಲ್ಲ – ಬೆಳ್ಳಿ – ಸಾತ್ವಿಕ.
ಬಂಗಾರ – ಕೆಂಪು ರಾಜಸ

# ಕೃಷ್ಣಲೀಲಾ ಪದಗಳು

**ಪದಸಂಖ್ಯೆ ೩೮ :**

ವಿರೋಧಾಭಾಸದಿಂದ ತುಂಬಿದ ಪದ.

**ಪದಸಂಖ್ಯೆ ೩೯ :**

ಇದು ಬಿಂಬೋಪಾಸನೆಯ ವಿಚಾರ

**ಪದಸಂಖ್ಯೆ ೪೦ :**

ಕೇದಿಗೆ ಪಡಿ – ಕೇದಿಗೆ ಪುಟ್ಟಿ

**ಪದಸಂಖ್ಯೆ ೪೪ :**

ಮನದೊಳಡಗಿಹ– ನೀರೊಳಗೆ ಅಡಗಿರುವ ಕೂರ್ಮ

ಅನಾರ್ಯ – ಸಣ್ಣವನು.

ರದ – ಹಲ್ಲು.

**ಪದಸಂಖ್ಯೆ ೪೫ :**

ಮಾಧವ – ವಸಂತ.

ಚಕ್ರ – ಗಡಿಗಿ

ಅಖಂಡಲ – ಇಂದ್ರ ದರ್ಪ ತಗ್ಗಿಸಿದವ, ಗರುಡ.

**ಪದಸಂಖ್ಯೆ ೫೩ :**

ಬಚ್ಚದೆ – ಬೆಚ್ಚದೆ ಅಂಜದೆ.

**ಪದಸಂಖ್ಯೆ ೫೪ :**

ದ್ವಾಂತಕಿರಣ – ಕತ್ತಲೆ, ಕಿರಣ. ಚಂದ್ರ

**ಪದಸಂಖ್ಯೆ ೬೦ :**

ಉದ – ಉದಕ, ನೀರು

**ಪದಸಂಖ್ಯೆ ೬೧ :**

ಗುಪ್ಪು – ಹಾಲು ಮೊಸರಿನ ವಾಸನೆ.

ಚಾಣೂರ ಮುಷ್ಟಿಕರು – ಕಂಸನು ಕೃಷ್ಣನೊಡನೆ ಮಲ್ಲಯುದ್ಧ ಮಾಡಲು ನಿಯಮಿಸಿದ ದೈತ್ಯ ಮಲ್ಲರು.

ಪಾಳತಿಯಿಡು – ಕಾವಲು ಇಡು.

**ಪದಸಂಖ್ಯೆ ೬೪ :**

ಶ್ಯಾಲೆ – ಬಟ್ಟೆ.

**ಪದಸಂಖ್ಯೆ ೬೫ :**

ಶುಕ್ಲಶಿಷ್ಯ – ಅಕ್ರೂರ, ಶುಕ್ರಾಚಾರ್ಯರ ಶಿಷ್ಯ.

**ಪದಸಂಖ್ಯೆ ೬೭ :**

ತ – ಗರುಡ.

ಸ್ಮರ – ಪ್ರದ್ಯುಮ್ನ, ಕಾಮ.

**ಪದಸಂಖ್ಯೆ ೬೮ :**

ಗಂಡೊಲ್ಲದವಳ ಗಂಡೊಲ್ಲದಂತೆ ನಾಣ್ನುಡಿ.

## ಪದಸಂಖ್ಯೆ ೭೦ :

ಶಟವೇರು – ಕುಟಿಲಸ್ತ್ರೀಯರು, ತಮ್ಮ ಇನಿಯನ, ಎಂದರೆ ಶ್ರೀಕೃಷ್ಣನ ಅಗಲುವಿಕೆಯನ್ನು ಸಹಿಸದ ಗೋಪಿಯರ ವಿರಹ ಭಾವ ಇಲ್ಲಿ ದೀರ್ಘಾಕ್ಷರ ಗಳ ಬಳಕೆಯಿಂದ ಸುವ್ಯಕ್ತವಾಗಿದೆ.

## ಪದಸಂಖ್ಯೆ ೭೧ :

ಶುಕಮುನಿ ಪಿತ – ಕೃಷ್ಣದ್ವೈಪಾಯನ, ವ್ಯಾಸ,

ಕುಸುಮ ...... ಬಲುಹಿತನ – ಸೌಗಂಧಿಕಾಪುಷ್ಪವನ್ನು ತಂದ ಭೀಮ ಸೇನನ ತಮ್ಮ ಅರ್ಜುನನಿಗೆ ಸಖನಾದ ಶ್ರೀಕೃಷ್ಣ, ನಗಮುರಿದೆಮಳರ ಶಾಪ ಕಳೆದನು.

## ಪದಸಂಖ್ಯೆ ೭೫ :

ವೇಧ – ಅಜ್ಞೇಯ, ತಿಳಿಯಬೇಕಾದ

ವಾತೇಶ – ವಾಯುವಿನ ಒಡೆಯ, ಶ್ರೀಹರಿ

## ಪದಸಂಖ್ಯೆ ೭೭ :

ಕಂಸನಿಗೂ ಆತನ ಬಂಟರಿಗೂ ನಡೆದ ಸಂವಾದದಲ್ಲಿ ಶ್ರೀಕೃಷ್ಣನ ಪಾರಮ್ಯವನ್ನು ತೋರಿದ ದಾಸರ ರೀತಿ ಸ್ವಾರಸ್ಯಕರವಾಗಿದೆ.

## ಪದಸಂಖ್ಯೆ ೭೮ :

ಕಂಸವಧೆಯನ್ನು ಚಿತ್ರದಂತೆ ವರ್ಣಿಸಿದ ರೀತಿ ಸುಂದರವಾಗಿದೆ.

## ದೇವ – ದೇವತೆಗಳ ಸ್ತುತಿ

## ಪದಸಂಖ್ಯೆ ೭೯ :

## ಶ್ರೀಲಕ್ಷ್ಮೀ ಸ್ತೋತ್ರ :

ವಸುದೀಜೆ – ಭೂದೇವಿಯ ಮಗಳು,

ವೈದೇಹಿ – ವಿದೇಹ ದೇಶದ ಜನಕರಾಜನ ಮಗಳು,

ಬಿಸಜ ಮಂದಿರೆ – ಕಮಲಾಲಯೆ,

ಆಸುರೇತರು – ದೇವತೆಗಳು,

ಅಂಘ್ರಿಪ – ಪಾದದಿಂದ ನೀರು ಕುಡಿಯುವ ವೃಕ್ಷ

ಪದುಮೇಶಗಮನೆ – ಹಂಸಗಮನೆ, ಗಜಗಮನೆ,

ಆರ್ತಿ – ನೋವು, ದುಃಖ,

ಮೃಗರಾಜಮಧ್ಯಳೆ – ಸಿಂಹದಂತೆ ಸೊಂಟವುಳ್ಳವಳೆ,

ಮುಕ್ತಿಭಾಜ – ಮುಕ್ತಿಯೋಗ್ಯ

ಖಚರ – ಆಕಾಶವಲ್ಲಿ ಚಲಿಸುವ,

ಚಟುಲದೇವ – ಅಲುಗಾಡುವ ದೇಹವುಳ್ಳವ, ಶೇಷ

ಖಚರೇಶ – ಪಕ್ಷಿಗಳ ಒಡೆಯ, ಗರುಡ,

ಸ್ಯಂದನ – ರಥ, ವಾಹನ,

ಖಚರಸುವಾಣಿ – ಕೋಕಿಲವಾಣಿ

ಖಚರಾಶ – ಗಾಳಿಯನ್ನು ಸೇವಿಸುವ, ಸರ್ಪ,

ಖಚರ ಮರ್ದನ – ದೈತ್ಯಸಂಹಾರಕಳೆ,

ಶ್ರೀಹರಿಯ ಎಲ್ಲ ಅಲಂಕಾರವಸ್ತುಗಳೂ ಆಯುಧಗಳೂ ಇವುಗಳು ಆತನ ಪತ್ನಿಯಾದ ಲಕ್ಷ್ಮೀರೂಪಗಳು ಎನಿಸಿಕೊಳ್ಳುತ್ತವೆ. ಶ್ರೀ, ಭೂ, ದುರ್ಗಾ, ಅಂಭ್ರಿಣಿ, ಹ್ರೀ, ಮಹಾಲಕ್ಷ್ಮಿ, ದಕ್ಷಿಣಾ, ಸೀತಾ ಜಯಂತಿ, ಸತ್ಯಭಾಮಾ, ರುಕ್ಮಿಣಿ, ಮೊದಲಾದವು ಲಕ್ಷ್ಮಿದೇವಿಯ ಅವತಾರ ರೂಪಗಳು. ಭಗವಂತನ ಆವೇಶದಿಂದ ಕೂಡಿದ ಲಕ್ಷ್ಮೀದೇವಿಯು ಪ್ರಕೃತಿಯೆನಿಸಿಕೊಂಡು ಸದಾ ಶ್ರೀಹರಿಯ ಅಧೀನದಲ್ಲಿದ್ದಾಳೆ.

ಪ್ರಾಣೇಶದಾಸರು ಮೊದಲನೆಯ ನುಡಿಯಲ್ಲಿ ಲಕ್ಷ್ಮಿಯ ಶ್ರೀ ರೂಪದ ಗುಣ, ರೂಪ ಕಾರ್ಯಗಳನ್ನು ವಿವರಿಸಿದ್ದಾರೆ. ಈ ರೂಪದಲ್ಲಿ ಲಕ್ಷ್ಮಿಯು ಸತ್ವಗುಣಕ್ಕೆ ಅಭಿಮಾನಿಯು.

ಇದರಂತೆ ಎರಡನೆಯ ನುಡಿಯಲ್ಲಿ ಭೂ ರೂಪದ ವರ್ಣನೆ ಇದೆ. ಈ ರೂಪವು ರಜೋಗುಣಕ್ಕೆ ಅಭಿಮಾನಿಯು.

ಮೂರನೆಯ ನುಡಿಯಲ್ಲಿ ದುರ್ಗಾ ರೂಪದ ವಿವರಣೆ ಇದೆ. ಈ ರೂಪದಿಂದ ತಮೋಗುಣಕ್ಕೆ ಅಭಿಮಾನಿಯಾಗಿದ್ದಾಳೆ.

## ಪದಸಂಖ್ಯೆ ೮೦ :

ಈಕ್ಷಣತ್ರಯ – ಮೂರುಬಗೆಯ ಆಸೆಗಳು, ಹೆಂಡತಿ, ಮಕ್ಕಳು, ಸಿರಿಸಂಪತ್ತು.

ಅರಗಿನಂತೆ ಜನನಿ – ತಾಯಿಯಮನಸ್ಸು ಬಲು ಮೃದು, ಮಕ್ಕಳಿಗಾಗಿ ಅರಗಿನಂತೆ ಕರಗಿ ನೀರಾಗುತ್ತದೆ.

ಮರದಂತೆ ಮಕ್ಕಳು – ಮಕ್ಕಳ ಮನಸ್ಸು ತಾಯಿಯ ಬಗೆಗೆ ಮರದಂತೆ ಕಠಿಣವಾಗಿರುತ್ತದೆ.

ಆರ್ಯರ ನೃತೆ – ಜ್ಞಾನಿಗಳ ಸತ್ಯವಾಣಿ,

ಶಂಖರಹಾರಿ ಮಾತೆ – ಶಂಬರಾಸುರನ ವೈರಿಯಾದ ಮನ್ಮಥಾವತಾರ ಪ್ರದ್ಯುಮ್ನ ತಾಯಿಯಾದ ರುಕ್ಮಿಣಿ.

ಹಾಟಕಾಂಬರಧಾರಿ – ಹೊಂಬಣ್ಣದ ವಸ್ತ್ರಧಾರಿ,

ಮೆಚ್ಚೆ ಪೀತಾಂಬರ – ನೀನು ಶ್ರೀಹರಿಯನ್ನು ಮೆಚ್ಚುವವಳು

## ಪದಸಂಖ್ಯೆ ೮೧ :

ಸಲ್ಲೋಕದಾತೆ – ವೈಕುಂಠಲೋಕ ಪ್ರದಾತೆ.

ಜಾತಮಧ್ಯಾಂತ ರಹಿತಳೆ – ಸೃಷ್ಟಿ, ಸ್ಥಿತಿ, ಲಯರಹಿತಳೆ.

ಪಂಚಭೂತ – ಪೃಥ್ವಿ, ನೀರು, ಅಗ್ನಿ, ವಾಯು, ಆಕಾಶ.

ಪಂಚತನ್ಮಾತ್ರೆಗಳು – ಗಂಧ, ರಸ, ರೂಪ, ಶಬ್ದ, ಸ್ಪರ್ಶ

ಷಡ್ವಿಕಾರ ದೂರೆ – ಕ್ಷುಧೆ, ತೃಷೆ, ಶೋಕ, ಮೋಹ, ಜರೆ, ಮೃತ್ಯುಗಳಿಂದ ದೂರವುಳ್ಳವಳು.

ಸುಷುಪ್ತ – ನಿದ್ರಾಭಿಮಾನಿ ದುರ್ಗಾ.

ಸಿಂದೂರ ಗಮನೆ – ಗಜಗಮನೆ.

ವಾರೆಂದು ಭಯವ – ಇಂದಿನ ವಾರದ ಭಯವ, ಸದ್ಯ ಬಂದ ಭಯವ.

## ಪದಸಂಖ್ಯೆ ೮೨ :

ಪದತೋಯಜ – ಪಾದಕಮಲ.

ಕರ್ದಮ ಜಾಲಯ – ಕರ್ದಮ – ಕೆಸರು. ಕಮಲಾಲಯೆ.

ಇಂಗಡಲ – ಕ್ಷೀರಸಮುದ್ರ.

## ಪದಸಂಖ್ಯೆ ೮೩ :

ಸಿತಾಂಶು – ಚಂದ್ರ, ವಿಗ್ರಹೆ

ಶೋಭನ ವಿಗ್ರಹೆ – ಶುಭಗಾತ್ರ.

ಶ್ರೀಕುಂಭಿಣಿಜೆ – ಶ್ರೀದೇವಿಯಾದ ಭೂಜಾತೆಯೆ. ಸೀತೆಯೆ

ಧಾತವೃಜನಿ – ಪಾಪರಹಿತ.

ಧರಿ ಪೋತನ – ವಟು ಪರಮಾತ್ಮನ, ವಾಮನನ.

## ಪದಸಂಖ್ಯೆ ೮೪ ಅ :

ಸುಮನಸರ ಪತಿ – ದೇವೇಂದ್ರ.

ಧಮ್ಮನ – ದೊಡ್ಡ ಇದೊಂದು ಉಗಾಭೋಗ. ನಿಂದಾಪರ ಸ್ತುತಿಯಾದ ಈ ಹಾಡು ರಸವತ್ತಾಗಿದೆ.

## ಪದಸಂಖ್ಯೆ ೮೪ ಬ :

ನೀಲಘನ – ಕಪ್ಪು ಮೋಡ.

ವ್ರಜ – ಗೋಕುಲ.

ಅಂತಕಜ – ಯಮನಲ್ಲಿ ಅವತರಿಸಿದ ನರನಾರಾಯಣ ನೆಂಬ ಭಗವಂತನ ರೂಪ.

## ಪದಸಂಖ್ಯೆ ೮೫ :

ಪಾನೀಯಧಿ – ಜಲಧಿ, ಸಮುದ್ರ,

ವೃತ್ತಿ – ಉದ್ಯೋಗ

ಕ್ಷೇತ್ರ – ಭೂಮಿ,

ಅರ್ಥಿ – ಸುಖ, ಪ್ರೀತಿ,

ಶಿಶುಹಿಂಸಕಾ – ಮತ್ಸ್ಯಾವತಾರ, ಮೀನುಗಳು ತಮ್ಮ ಮರಿಗಳನ್ನು ತಾವೇ ತಿನ್ನುತ್ತವೆ.

ಅತಿ ಕಠಿಣ – ಕೂರ್ಮ

ಹಸನ್ಮುಖನಲ್ಲ – ವರಾಹ, ನರಸಿಂಹ,

ಅರ್ಭಕ – ವಾಮನ,

ಹೆಂಗಸರಳಿದ – ರಾಮ, ಪರಶುರಾಮರು, ಕ್ರಮವಾಗಿ ತಾಟಕಿ ಹಾಗೂ ತಾಯಿಯನ್ನು ಅಳಿದರು,

ಪುಕ್ಕ – ಕೃಷ್ಣಾವತಾರ,

ಕಲಹಗಂಟ – ಕಲ್ಕೀ ಅವತಾರ ಹೀನಸಳುಬ್ಜಷ್ಟ

ಫಲಮೆದ್ದ....... ರಾಮಾಯಣದಲ್ಲಿ ಬರುವ ಶಬರಿಯ ಕಥ :

ಬಡಬ್ರಾಹ್ಮಣೋದ್ದರೆ ಮಾನವೇ ಇಲ್ಲ ನಗುತಿದ್ದ.

ಹಿಂದೆ ಗಂಗಾತೀರದಲ್ಲಿ ಋಷಿಗಳೆಲ್ಲಾ ಸೇರಿ ಸತ್ರಯಾಗ ಮಾಡುತ್ತಿದ್ದರು. ಯಜ್ಞದಲ್ಲಿ ಹವಿಭಾಗವನ್ನು ಸ್ವೀಕರಿಸಲು ತ್ರಿಮೂರ್ತಿಗಳಲ್ಲಿ ಉತ್ತಮರಾರು ಎಂಬುದನ್ನು ತಿಳಿದುಕೊಂಡು ಬರಲು ಭೃಗು ಮಹರ್ಷಿಗಳನ್ನು ಕಳುಹಿಸಿದರು. ಭೃಗುಮುನಿಯು ಬ್ರಹ್ಮಲೋಕಕ್ಕೆ ಹೋದಾಗ ಬ್ರಹ್ಮನು ವೇದಾಧ್ಯಯನ ಮಾಡುತ್ತ ಕುಳಿತು ಋಷಿಗಳನ್ನು ಅಲಕ್ಷಿಸಿದ್ದರಿಂದ, ಅವನಿಗೆ ಲೋಕದಲ್ಲಿ ಪೂಜೆಯಾಗದಿರಲಿ ಎಂದು ಶಪಿಸಿದರು. ಕೈಲಾಸದಲ್ಲಿ ಶಿವ ಪಾರ್ವತಿಯರು ಪ್ರಣಯಾಲಿಂಗನ ದಲ್ಲಿರುವುದನ್ನು ಕಂಡು ನಿನಗೆ ಕೇವಲ ಲಿಂಗಪೂಜೆಯಾಗಲಿ ಎಂದು ಶಾಪ ಕೊಟ್ಟರು. ವೈಕುಂಠದಲ್ಲಿಯೂ ನಾರಾಯಣನು ಲಕ್ಷ್ಮೀ ಸಮೇತನಾಗಿರುವುದನ್ನು ನೋಡಿ ಆತನ ಎದೆಗೆ ತಮ್ಮ ಕಾಲಿನಿಂದ ಒದೆದರು. ಭಕ್ತನ ಈ ಕೋಪವನ್ನು ಕಂಡು ಭಕ್ತವತ್ಸಲನಾದ ಶ್ರೀಹರಿ ಮುಗುಳುನಕ್ಕು ಋಷಿಗಳಿಗೆ ಯೋಗ್ಯವಾದ ಉಪಚಾರವನ್ನು ಮಾಡಿದನು.

## ಪದಸಂಖ್ಯೆ ೮೭ :

ತರಣಿಕುಲಜಾತ – ಸೂರ್ಯವಂಶದಲ್ಲಿ ಅವತರಿಸಿದ ಶ್ರೀರಾಮ.

ಮಗಧ – ಜರಾಸಂಧ,

ದಂತಿಪುರದರಸು – ಹಸ್ತಿನಾವತಿಯ ಅರಸು.

ಅಂತರಾತ್ಮಜ – ಯಮದೇವರ ಮಗ, ಧರ್ಮರಾಯ.

ಸೂತ್ರ – ವೇದಶಾಸ್ತ್ರಗಳ ಸಂಕ್ಷೇಪರೂಪ

ಸುಯೋಗಿ – ಒಳ್ಳೆಯ ಗತಿಯನ್ನು ಕೊಡಲು ಯೋಗ್ಯನಾದವನು.

ಯತಿ – ಅಮೃತ ಯೋಗವನ್ನು ಕಲ್ಪಿಸಿಕೊಡುವವ, ವಾಯು.

ಸಂಜೆಚರರು – ನಿಶಾಚರರು.

ಕಂತುಪಿತ – ಕಾಮಪಿತ, ವಿಷ್ಣು.

ಮತಿ – ಭೇದ ಜ್ಞಾನ.

ಅನ್ಯವಿಷಯ – ಪರಮಾತ್ಮನ ಹೊರತು ಬೇರೆ ಜ್ಞಾನ.

ವಿಶೇಷ :– ವಾಯುದೇವರು ಜೀವಕೋಟಿಯಲ್ಲೆಲ್ಲಾ ಇರುವವರು. ಇವರು ಶ್ರೀಹರಿಯ ಸಾಕ್ಷಾತ್ ಪ್ರತಿಬಿಂಬರು. ಶ್ರೀಹರಿಯ ಪ್ರಾಣದಿಂದ ಸೃಷ್ಟಿಯಾದ ಇವರು ಎಲ್ಲರಿಗಿಂತ ಜೇಷ್ಠರೂ, ಶ್ರೇಷ್ಠರೂ ಆಗಿದ್ದಾರೆ. ಇವರಿಗೆ 'ಮುಖ್ಯಪ್ರಾಣ' 'ಜೀವೋತ್ತಮ' ಎಂದೂ ಕರೆಯಲಾಗುತ್ತದೆ. ಇವರ ಶರೀರವು ಇವರ ಪೂರ್ಣ ಅಧೀನದಲ್ಲಿದ್ದು ಇವರ ಇಚ್ಛೆಗೆ ಅನುಕೂಲವಾಗಿರುತ್ತದೆ.

ವಾಯುದೇವರು, ಬ್ರಹ್ಮದೇವರಿಗಿಂತ ಸ್ವಲ್ಪ ಕಡಿಮೆ ಎನಿಸುತ್ತಾರೆ. ಇವರು ಒಬ್ಬ ಋಜುಗಳು ಋಜು ಎಂದರೆ ಪ್ರಾಮಾಣಿಕವಾದ ಸರಳಸ್ವಭಾವದ ಶುದ್ಧಜ್ಞಾನವುಳ್ಳವರು.

ವಾಯುದೇವರು ಪರಮಾತ್ಮನ ಸೇವಾರ್ಥವಾಗಿ ಹನುಮ, ಭೀಮ, ಮಧ್ವ ಎಂಬ ಮೂರು ಮುಖ್ಯವಾದ ಅವತಾರಗಳನ್ನು ಮಾಡಿದ್ದಾರೆ.

ಹನುಮದವತಾರದ ವಿವರವಾದ ವಿಷಯವನ್ನು ರಾಮಾಯಣದಲ್ಲಿಯೂ, ಭೀಮಾವತಾರದ ಕಾರ್ಯವನ್ನು ಮಹಾಭಾರತದಲ್ಲಿಯೂ ಹಾಗೂ ಮಧ್ವಾವತಾರದ ಸಂಪೂರ್ಣಚಿತ್ರವನ್ನೂ ನಾರಾಯಣ, – ಪಂಡಿತಾಚಾರ್ಯರಿಂದ ರಚಿತವಾದ ಸುಮಧ್ವ ವಿಜಯ ಎಂಬ ಗ್ರಂಥದಲ್ಲಿಯೂ ಕಾಣಬಹುದು.

ವಾಯುದೇವರ ಸ್ತೋತ್ರ ಮಾಡುವಾಗ ಈ ಮೂರೂ ಅವತಾರಗಳನ್ನು ನೆನೆಯುವುದು ಮಾಧ್ವರ ಶುದ್ಧ ಸಂಪ್ರದಾಯವಾಗಿದೆ.

"ಯತಿಯ ರೂಪ ಇಳೆಯೊಳಾಗಿ...... ಭಾರತೀಶನೆ"

ಜೀವನೆ ಪರಬ್ರಹ್ಮ, ಜಗತ್ತು ಮಿಥ್ಯೆ ಇತ್ಯಾದಿಯಾಗಿ ಕುಮತಗಳು ಸಾರಿದಾಗ ದೇವತೆಗಳೆಲ್ಲರೂ ಸಜ್ಜನರನ್ನೂ ಅನುಗ್ರಹಿಸಬೇಕೆಂದು ಶ್ರೀಹರಿಯಲ್ಲಿ ಮೊರೆಯಿಟ್ಟರು. ಆಗ ಭಗವಂತನು ವಾಯುದೇವರಿಗೆ ಈ ಭರತಭೂಮಿಯ ಪರಿಶುದ್ಧವಾದ ಪ್ರದೇಶದಲ್ಲಿ ಅವತರಿಸಿ ವೇದಶಾಸ್ತ್ರ ಪುರಾಣ, ಇತಿಹಾಸಗಳ ಪ್ರಮಾಣದಿಂದ ಸಚ್ಛಾತ್ರವನ್ನು ರಚಿಸಿ ಲೋಕವನ್ನು ಉದ್ಧರಿಸಬೇಕೆಂದು ಆಜ್ಞೆಯಿತ್ತನು. ಅದರಂತೆ ವಾಯುದೇವರು ಈ ಕಲಿಯುಗದಲ್ಲಿ ವಾಸುದೇವ ಎಂಬ ಹೆಸರಿನಿಂದ ಇಂದಿನ ಉಡುಪಿಯ ಹತ್ತಿರ ಪಾಜಕ ಕ್ಷೇತ್ರದಲ್ಲಿ 'ನಡುಮನೆ ಎಂಬ ಬ್ರಾಹ್ಮಣರ ಮನೆಯಲ್ಲಿ ಹುಟ್ಟಿದರು.

ಎಳೆ ವಯಸ್ಸಿನಲ್ಲಿಯೇ ಸಂನ್ಯಾಸವನ್ನು ಸ್ವೀಕರಿಸಿ ಶ್ರೀಮಧ್ವಾಚಾರ್ಯರೆಂದು ಹೆಸರು ಪಡೆದರು. ಸಕಲಶೃತಿಸ್ಮೃತಿಗಳ ಪ್ರಮಾಣಿತ ವಾದ 'ದ್ವೈತ ಶಾಸ್ತ್ರ' 'ತತ್ವವಾದ' ಎಂಬ ಸಿದ್ಧಾಂತವನ್ನು ಸ್ಥಾಪಿಸಿದರು.

## ಪದಸಂಖ್ಯೆ ೮೯ :

ಗಂಧವಹ – ಗಂಧಹೊರುವವ, ವಾಯು.

ವಾತ – ವಾಯು,

ಘನವಾಹಸುತ – ಮೇಘವನ್ನು ವಾಹನವನ್ನಾಗಿ ಮಾಡಿಕೊಂಡ ಇಂದ್ರನ ಮಗ ವಾಲಿ.

ಪ್ರಭಂಜನ – ತುಂಡು ಮಾಡುವವ, ವಾಯು, ಗಾಳಿ.

ಆಬ್ಜಾಪ್ತಸುತ – ಸೂರ್ಯನ ಮಗ ಸುಗ್ರೀವ.

ಆದಿತ್ಯರು – ಅದಿತಿದೇವಿಯ ಮಕ್ಕಳು, ದೇವತೆಗಳು

ಶಮ – ಶಾಂತಿ, ಇಂದ್ರಿಯ ನಿಗ್ರಹ

ದಮ – ಮನೋನಿಗ್ರಹ

## ಪದಸಂಖ್ಯೆ ೯೦ :

ನಾಭಿನಂದನ – ನಾಭಿರಾಜನಲ್ಲಿ ಅವತರಿಸಿದ, ವಿಷ್ಣು,

ಭಾನುಸಂದನ – ಸೂರ್ಯನ ಮಗ, ಸುಗ್ರೀವ,

ಅರೊಂದು ಸುರವಾದ್ಯ – ಅಷ್ಟ ದಿಕ್ಪಾಲಕರಲ್ಲಿ ವಾಯುವನ್ನುಳಿದು ಏಳು ಜನ ದಿಕ್ಪಾಲಕರಿಂದ ವಂದ್ಯ

## ಪದಸಂಖ್ಯೆ ೯೧ :

ಪಾಕಶಾಶನಿ – ಅರ್ಜುನ,

ಯಮರ(ಳ) – ಅವಳಿಮಕ್ಕಳು, ನಕುಲಸಹದೇವರು.

ಜನನಿ – ಕುಂತಿದೇವಿ,

ಅಂಬಿಕೆಯ ಮಗ – ಧೃತರಾಷ್ಟ್ರ,

ವಜ್ರಪ್ರಸ್ಥ – ಇಂದ್ರಪ್ರಸ್ಥ,

ವಸ – ವಸನ, ವಸ್ತ್ರ,

ಪತ್ಕರಿಸಿದೆ – ತಿರುಗಾಡಿದೆ.

ಮಹೀಜಸುತನಾನಿ – ಭೂದೇವಿಯ ಮಗನು ನರಕಾಸುರ, ಇವನ ಸುತ ಭಗದತ್ತ, ಈತನ ಆನೆ, ಸುಪ್ರತೀಕ.

ಸಮರ ಭೀಮ – ಯುದ್ಧ ಭಯಂಕರ,

ಕಂಜಪರ – ಮಹರುದ್ರದೇವ

ಎಂಟು ಒಂದು ನೂರು – ೯೦೦,

ಜಂತುರಾಶಿ – ಜೀವರಾಶಿ.

ಜಂಗಮ – ಚಲಿಸುವ.

"ತಾಸಿಗೆಂಟು ಒಂದುನೂರು ....... ಪೂರ್ತಿಸುವವನಿರಲು,"

ಮುಖ್ಯಪ್ರಾಣದೇವರು ಒಂದು ತಾಸಿಗೆ ಒಂಬೈನೂರು ಶ್ವಾಸೋಚ್ಛ್ವಾಸಗಳನ್ನು ಚೇತನರಾಶಿಯೊಳಗೆ ಜೀವಿಗಳಾಗಿರುವ ಎಂಬತ್ತು ನಾಲ್ಕು ಲಕ್ಷ ಯೋನಿಗಳ ಎಲ್ಲ ಪ್ರಾಣಿಗಳಲ್ಲಿ ಜಾಗ್ರತ, ಸ್ವಪ್ನ, ಸುಷುಪ್ತಿಗಳಲ್ಲಿ ಆಯಾಸವಿಲ್ಲದೆ ಮಾಡುತ್ತಾ ರಕ್ಷಿಸುತ್ತಾರೆ. ಇದಕ್ಕೆ 'ಹಂಸ ಮಂತ್ರ' ಎಂದು ಹೆಸರು. ಇವು ಒಂದು ದಿನಕ್ಕೆ ೨೧,೬೦೦ ಜಪಗಳಾಗುತ್ತವೆ.

"ಪರಿಹರಿಸುತಲಗ್ನಿ ಭಯವ..... ಕುವರನಿರಲು ಭೀಮಸೇನನು"

ಇಲ್ಲಿ ಮಹಾಭಾರತದಲ್ಲಿ ಬರುವ, ಅರಗಿನ ಮನೆಯನ್ನು ಸುಟ್ಟು ತನ್ನ ತಾಯಿ ಹಾಗೂ ಅಣ್ಣತಮ್ಮಂದಿರನ್ನೂ ರಕ್ಷಿಸಿ, ಹಿಡಿಂಬೆಯನ್ನು ಮದುವೆಯಾದ ಕಥಾಭಾಗ ಬರುತ್ತದೆ.

## ಪದಸಂಖ್ಯೆ ೯೩ :

ದಶಕ – ಹತ್ತು ತಲೆಯುಳ್ಳವನು, ರಾವಣ.

## ಪದಸಂಖ್ಯೆ ೯೪ :

ದ್ವಾಪರ – ದುರ್ಯೋಧನ.

ತಾಲು – ಗಲ್ಲ, ಕಪೋಲ.

ಜಾನು – ಮೊಳಕಾಲು.

ಜಂಘೆ – ಮೊಣಕಾಲಿನ, ಕೆಳಗಿನ ಭಾಗ.

ಗ್ರೀವ – ಕಂಠ.

ಹ್ರಸ್ವ – ಚಿಕ್ಕ.

ರದ – ಹಲ್ಲು.

ತ್ವಕು – ಚರ್ಮ.

ಕಕ್ಷಿ – ಕಂಕುಳ.

ಕುಕ್ಷಿ – ಉದರ.

ವಕ್ಷ – ಎದೆ.

ಸ್ಕಂಧ – ಹಗಲು

ನಿರಕ್ಷಘ್ನ – ಪಾಲಕ.

ಕರನಖ – ಕೈಯುಗುರು.

ಅಣುಜಿಹ್ವೆ – ಕಿರುನಾಲಗೆ.

## ಪದಸಂಖ್ಯೆ ೯೫ :

**ಲಕ್ಷಣಗಳ ವಿವರ ಇಂತಿದೆ.**

ತಾಲು, ಜಾನುಗಳು, ಸ್ಥನತುದಿ, ನಾಸಿಕ, ಚಕ್ಷು – ಐದು (ದೀರ್ಘ)

ಜಂಘೆ, ಗ್ರೀವ, ಅಲಿಂಗ, ಪೃಷ್ಠ – ನಾಲ್ಕು (ಹ್ರಸ್ವ)

ಕೇಶ, ರದ, ತ್ವಕು, ಬೆರಳು, ನಖ – ಐದು (ಸೂಕ್ಷ್ಮ)

ಕಕ್ಷ, ಕುಕ್ಷಿ, ವಕ್ಷ, ಕರ್ಣ, ನಖ, ಸ್ಕಂಧ – ಆರು (ಉನ್ನತ)

ಅಕ್ಷಿ, ಚರಣ, ಕರ, ನಖ, ಅಧರ, ಜಿಹ್ವೆ, ಅಣುಜಿಹ್ವೆ – ಏಳು (ರಕ್ತವರ್ಣ)

ಸತ್ವ, ನಾಭಿ, ಸ್ವರ – ಮೂರು (ಗಂಭೀರ)

ಉತ್ತಮ ಲಲಾಟ, ಉರ – ಎರಡು (ವಿಸ್ತಾರ)

ರೋಚಕ – ಪ್ರಕಾಶಿಸುವ

ಖೇಚರ – ಆಕಾಶಗಾಮಿ,

ಚಾಮೀಕರ – ಚಿನ್ನ

## ಪದಸಂಖ್ಯೆ ೯೭ :

ಇಂದ್ರಸೇನನಾಥ – ಭಾರತಿ ಪತಿ,

ಅಸುರಗ – ವೇದವ್ಯಾಸರು,

ಅಸು – ಜೀವ

ರ – ರಕ್ಷಣೆ

ಗ – ಸ್ಥಿತಿ,

ಜರಿಜ – ಜರಿಯೆಂಬ ರಾಕ್ಷಸಿಯ ಮಗ, ಜರಾಸಂಧ,

ಕಪಿವರ – ಸುಗ್ರೀವ,

ಮೇಷಾಂಡ – ಇಂದ್ರ,

"ತರಣಿ ಬಿಂಬಕೆ ಜಿಗೆದೆ ......."

ವಿವರ : ತಾಯಿಯಾದ ಅಂಜನಾ ದೇವಿಯು ಮಗು ಹನುಮಂತನನ್ನು ಮಲಗಿಸಿ ಹಣ್ಣು ಹಂಪಲುಗಳನ್ನು ತರಲು ಹೋಗುತ್ತಾಳೆ. ಹಸಿವೆಯಿಂದ ಅಳುತ್ತಿದ್ದ ಮಗು ಅದೇ ಉದಿಸುತ್ತಿರುವ ಸೂರ್ಯ ಬಿಂಬವನ್ನು ನೋಡಿ ಅದೊಂದು ಹಣ್ಣೆಂದು ಭಾವಿಸಿ ಆಕಾಶಕ್ಕೆ ಹಾರಿ ಅದನ್ನು ಕೈಯಿಂದ ಹಿಡಿದು ಬಿಡುತ್ತಾನೆ.

"........ ತಂದೆ ಮಾಧವನ ಉಡುಪಿಲಿ :"

ಒಮ್ಮೆ ಶ್ರೀಮಧ್ವರು ಉಡುಪಿಯ ಸಮೀಪ ಒಡಬಾಂಡ ಎಂಬ ಗ್ರಾಮದ ಬಳಿಯಲ್ಲಿರುವ ಸಮುದ್ರದ ಹತ್ತಿರ ಸ್ನಾನ ಮಾಡಿ ಆಹ್ನಿಕಕ್ಕೆ ಕುಳಿತಿದ್ದರು. ಆಗ ದೂರದಲ್ಲಿ ಒಂದು ಹಡಗು ಬಿರುಗಾಳಿಗೆ ಸಿಕ್ಕು ಮುಳುಗುವಂತಾಗಿದ್ದಾಗ ನಾವಿಕನು ತೀರದಲ್ಲಿ ಕುಳಿತ್ತಿದ್ದ ಶ್ರೀಮಧ್ವರನ್ನು ಕಾಪಾಡಬೇಕೆಂದು ಬೇಡಿಕೊಂಡನು. ಆಗ ಆಚಾರ್ಯರು ತಮ್ಮ ಶಾಟಿಯಿಂದ ಗಾಳಿಯನ್ನು ಬೀಸಿ ಹಡಗು ಸುರಕ್ಷಿತವಾಗಿ ದಡವನ್ನು ಸೇರುವಂತೆ ಮಾಡಿದರು. ಪರಮ ಸಂತುಷ್ಟನಾದ ನಾವಿಕನು ಭಕ್ತಿಯಿಂದ ಕಾಣಿಕೆಯನ್ನು ಅರ್ಪಿಸಲು ಇಚ್ಛಿಸಿದಾಗ ಮಧ್ವರು ನಮಗೆ ಗೋಪಿ ಚಂದನದ ಗಡ್ಡೆಗಳನ್ನು ಮಾತ್ರ ಕೊಟ್ಟರೆ ಸಾಕು ಎಂದು ನುಡಿದರು. ನಾವಿಕನು ಹಾಗೆಯೇ ಮಾಡಿದನು.

ಗೋಪಿಚಂದನದ ಒಂದುಗಡ್ಡೆಯನ್ನು ಒಡೆದಾಗ ಅದರಲ್ಲಿ ಬಲರಾಮನ ಪ್ರತಿಮೆಯನ್ನು ಕಂಡರು. ಅದನ್ನು ಒಡಭಾಂಡದಲ್ಲಿಯೇ ಸ್ಥಾಪಿಸಿದರು. ಅದು ಇಂದಿಗೂ ಒಡಭಾಂಡೇಶ್ವರನೆಂದು ಪ್ರಸಿದ್ಧವಾಗಿದೆ.

ಎರಡನೆಯ ಗಡ್ಡೆಯನ್ನು ಒಡೆದಾಗ ಅದರಲ್ಲಿ ಶಾಲಿಗ್ರಾಮ ಶಿಲಾ ನಿರ್ಮಿತ ವಾದ, ಚೆಲುವಾದ ಕಡಗೋಲು ಹಾಗೂ ನೇಣನ್ನು ಹಿಡಿದ ಬಾಲಕೃಷ್ಣನ ವಿಗ್ರಹವನ್ನು ಕಂಡರು. ಆಚಾರ್ಯರು ಪರಮಭಕ್ತಿ ಯಿಂದ ಅದನ್ನು ತಂದು ಉಡುಪಿಯಲ್ಲಿ ಪ್ರತಿಷ್ಠೆ ಮಾಡಿ ಪೂಜಿಸಿದರು. ಅಂದಿನಿಂದ ಇಂದಿನವರೆಗೆ ಆಚಾರ್ಯ ಮಧ್ವರಿಂದ ಸ್ಥಾಪಿತವಾದ ಮಠಗಳ ಯತಿಗಳೇ ಈ ಶ್ರೀಕೃಷ್ಣನನ್ನು ಪೂಜಿಸುತ್ತ ಬಂದಿದ್ದಾರೆ. ಈ ಮೂಲ ವಿಗ್ರಹವನ್ನು ಬೇರೆ ಯಾರೂ ಮುಟ್ಟುವಂತಿಲ್ಲ.

## ಪದಸಂಖ್ಯೆ ೯೮ :

ಕುಲಜ – ಹಿಮವತ್ಪರ್ವದಲ್ಲಿ ಹುಟ್ಟಿದ, ಮೈನಾಕ ಪರ್ವತ,
ಹರಿಕುಲಜ – ಕಪಿಕುಲದಲ್ಲಿ ಹುಟ್ಟಿದ
ಕಂಜ – ನೀರಿನಲ್ಲಿ, ಸಮುದ್ರದಲ್ಲಿ ಹುಟ್ಟಿದವುಗಳು, ಹೀಗಿವೆ.
ಕಂಜ – ಶಂಖ,
ಕಂಜಧರ – ಪದ್ಮಧರ,
ಪಾದಕಂಜ – ಪಾದಪದ್ಮ,
ಕಂಜವದನ – ಚಂದ್ರಮುಖ, ಸುರಪ, ರವಿ, ಕಂಜ, ಇಂದ್ರ, ಸೂರ್ಯ, ಚಂದ್ರ,
ಕಂಜ ಕೇತನ – ಮೀನಕೇತನ, ಮನ್ಮಥ,
ಕಂಜಪಕ್ಷ – ಅಮೃತ ಕುಡಿದ ದೇವತೆಗಳ ಪಕ್ಷ
ಕಂಜನಾಶನ – ವಿಷನಾಶನ,
ಕಂಜ – ಕಮಲದಲ್ಲಿ ಹುಟ್ಟಿದವ ಬ್ರಹ್ಮ,
ಚರಣ – ಚಕ್ರ,
ಮಧುಪ – ಭೃಂಗ,
ಕಂಜ – ಕಂ ಎಂದರೆ ತಲೆ,
ಜ – ಹುಟ್ಟಿದ, ಕೂದಲು,
ಶಿರೋರುಹ – ಕೂದಲು
ನಭಕಂಜ – ವ್ಯೋಮಕೇಶ, ಮಹಾದೇವ,
ವಿನುತ – ಸ್ತುತಿಸಲ್ಪಡುವ
ವಿಜಿತ – ಜಯಿಸಿದ
ಖಳಸೂದನ – ದೈತ್ಯಮರ್ದನ
ಕಾಲನೇಮಿ + ಹ –ಕಾಲನೇಮಿಯನ್ನು ಕೊಂದವನು, ಕೃಷ್ಣ,
ಕಾಲಜ – ಯಮನಲ್ಲಿ ಹುಟ್ಟಿದವ, ಧರ್ಮರಾಯ,
ಕಾಲಾರಿ – ಯಮನಿಗೆ ವೈರಿಯಾದ ರುದ್ರದೇವರು ರುದ್ರಾವತಾರರಾದ ದುರ್ವಾಸರು,
ಪ್ರಾಣಾಧಿ – ಪ್ರಾಣಕ್ಕೆ ಶ್ರೇಷ್ಠ
ಪೂರ್ಣಾಧಿ –
ಧಿ – ಜ್ಞಾನ – ಸಂಪೂರ್ಣ ಜ್ಞಾನವುಳ್ಳವರು.
ಪ್ರಾಣನಂದನ – ಪ್ರಾಣದೇವರ ಮಗ ರುದ್ರದೇವರು (ರುದ್ರದೇವರ ಅವತಾರವಾದ ಅಶ್ವತ್ಥಾಮ)
ಪಾಂಚಾಲಸುತಾ – ದ್ರೌಪದಿ,

ವಿವರಗಳು :– "ಕಾಲು ಪಿಡಿದ ವನ ಶಾಪವ ಕಳೆದೆ."

ವನವಾಸದಲ್ಲಿ ಪಾಂಡವರು ದ್ವೈತವನದಲ್ಲಿ ವಾಸಮಾಡಿದಾಗ ಪರ್ವತ ಪ್ರದೇಶದಲ್ಲಿ ಸುತ್ತಾಡುತ್ತಿದ್ದ ಭೀಮಸೇನನನ್ನು ಒಂದು ಅಜಗರವು ಬಂಧಿಸಿಬಿಡುತ್ತದೆ. ನೀನಾರೆಂದು ಭೀಮಸೇನನು ಕೇಳಿದಾಗ ಆ ಮಹಾ ಸರ್ಪವು ತಾನು

ನಹುಷನೆಂದೂ, ತನ್ನ ಇಂದ್ರ ಪದವಿಯಿಂದಾಗಿ ಬಹು ಗರ್ವಿಷ್ಟನಾಗಿ ಕಾಮ ಅಹಂಕಾರಾದಿ ಗಳಿಂದ ತುಂಬಿಕೊಂಡಿದ್ದ ನೆಂದೂ, ಮುನಿಗಳು ತನ್ನ ಪಲ್ಲಕ್ಕಿಯನ್ನು ಹೊರುತ್ತಿದ್ದರೆಂದೂ ಹೇಳುತ್ತಾನೆ. ಹೀಗೆಯೇ ಒಮ್ಮೆ ಅಹಂಕಾರದಿಂದ ಅಗಸ್ತ್ಯ ಮಹರ್ಷಿಗಳನ್ನು ಒದೆವಾಗ ತನಗೆ ಆ ರೂಪಬಂದಿತೆಂದು ಹೇಳಿ, ತಾನು ಕೇಳಿದ ಪ್ರಶ್ನೆಗಳನ್ನು ಉತ್ತರಿಸಬಲ್ಲವನು ಧರ್ಮರಾಯನು ಮಾತ್ರ ಎಂದು ಹೇಳಿತು. ತಮ್ಮಂದಿರನ್ನು ಹುಡುಕುತ್ತ ಬಂದ ಧರ್ಮರಾಯನು ಅದು ಕೇಳಿದ ಎಲ್ಲ ಪ್ರಶ್ನೆಗಳನ್ನು ಉತ್ತರಿಸಿ, ಆ ಅಜಗರನನ್ನೂ ಅದು ಬಂಧಿಸಿದ್ದ ಭೀಮಸೇನನನ್ನು ಬಿಡುಗಡೆ ಮಾಡಿದನು.

"ಪ್ರಾಣಾಪಾನ ವ್ಯಾನೋದಾನ ಸಮಾನ....."

ಇವು ಪ್ರಾಣನಲ್ಲಿರುವ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ರೂಪಗಳು.

## ಪದಸಂಖ್ಯೆ ೯೯ :

ಮಾರಕವನ ಜಿತ – ಜಿತೇಂದ್ರಿಯ

ವಾರವಾರಕೆ – ಕ್ಷಣಕ್ಷಣಕ್ಕೆ,

ಮೈಗಣ್ಣ – ಇಂದ್ರ,

ಹರಿದಶ್ವ –
ಹರಿತ್ + ಕುದುರೆ ದಿಕ್ಕುಗಳನ್ನೇ ಕುದುರೆಗಳನ್ನಾಗಿ ಮಾಡಿಕೊಂಡವನು, ಸೂರ್ಯ,

ಗತ – ರಹಿತ,

ನಭಿಸ್ಪತ್ – ಆಕಾಶದಲ್ಲಿ ಸಂಚರಿಸುವವ, ವಾಯು,

ಪೂರ್ವಿಕಾ – ಋಜುಗಣಕ್ಕೆ ಪೂರ್ವಕ, ವಾಯುದೇವರು.

ದೇವ ಹಂಸಾಸ್ವ – ಬ್ರಹ್ಮದೇವರು, ದೇವಹಂಸವನ್ನು ವಾಹನ ಮಾಡಿಕೊಂಡವರು.

ನಗಪಾಲ – ಮೈನಾಕ ಪರ್ವತವನ್ನು ರಕ್ಷಿಸಿದವ, ಹನುಮಂತ,

ನಗಸ್ತೋಮಗಳಿಗೆ ಪಗೆಯಾಗಿರ್ಪನ ಮಗನ – ಪರ್ವತಗಳ ಹಗೆಯಾಗಿದ್ದ ಇಂದ್ರನ ಮಗನ, ಅರ್ಜುನನ,

ಇಗಡ ಕುರು – ಕೆಟ್ಟ ಕೌರವ,

"ಮೈಗಣ್ಣ ಪದವಾಳ್ದವಾತ ....."

ಸ್ವಾರೋಚಿಷ ಮನ್ವಂತರದಲ್ಲಿ ಸೂತ್ರನಾಮಕ ವಾಯುದೇವರು ರೋಚನ ಎಂಬ ಹೆಸರಿನಿಂದ ಇಂದ್ರ ಪದವಿಯನ್ನು ಆಳಿದರು. ಎಂಬುದಾಗಿ ಶ್ರೀ ವಿಜಯದಾಸರ ಸುಳಾದಿಯಿಂದ ತಿಳಿದು ಬರುತ್ತದೆ.

"ನಗಸ್ತೋಮಗಳಿಗೆ.... ಮಗನ ಧ್ವಜದಿ ನಿಂದಿ....."

ಹನುಮಂತನು ಅರ್ಜುನನ ಧ್ವಜದಲ್ಲಿ ನಿಂತು ಜಯವನ್ನು ತಂದಿತ್ತ ವಿಷಯ ಇಲ್ಲಿ ಸೂಚಿತವಾಗಿದೆ.

ದ್ರೌಪದಿದೇವಿಯ ಅಪೇಕ್ಷೆಯಂತೆ ಭೀಮಸೇನನು ಸೌಗಂಧಿಕಾ ಪುಷ್ಪವನ್ನು ತರಲು ನಡೆಯುತ್ತಾನೆ. ದಾರಿಯ ಮಧ್ಯ ಅರಣ್ಯದಲ್ಲಿ ರಾಮಧ್ಯಾನದಲ್ಲಿ ನಿರತನಾದ ಹನುಮಂತನ ದರ್ಶನವಾಗುತ್ತದೆ. ಅಡ್ಡವಾಗಿ ಬಿದ್ದ ಅವನ ಬಾಲವನ್ನು ಸರಿಸಲು ಭೀಮನಿಗಾಗುವುದಿಲ್ಲ. ಮುಖ್ಯ ಪ್ರಾಣನ ಈ ಎರಡು ರೂಪಗಳ ನಟನೆ ತುಂಬಾ ಬೋಧಪರವಾಗಿದೆ.

ಭೀಮಸೇನನು ಹನುಮಂತನ ಬಲಕ್ಕೆ ತುಂಬಾ ಮೆಚ್ಚುತ್ತಾನೆ. ಅವನು ಅರ್ಜುನನ ಧ್ವಜಾಗ್ರಕ್ಕೆ ಬಂದು ನೆಲೆಸಲು ಕೇಳಿಕೊಳ್ಳುತ್ತಾನೆ. ಅದಕ್ಕೆ ಹನುಮಂತನು ಒಪ್ಪಿಗೆಯನ್ನಿತ್ತು, ಅರ್ಜುನನ ಧ್ವಜಾಗ್ರದಲ್ಲಿ ಬಂದು ನಿಲ್ಲುತ್ತಾನೆ. ಎಂಬುದಾಗಿ ಭಾರತ ವನಪರ್ವದಲ್ಲಿ ಈ ಕಥಾ ಸಂದರ್ಭವು ವಿಸ್ತಾರವಾಗಿ ವರ್ಣಿತವಾಗಿದೆ.

"ಕರುಜರೆದೆ..... ಮೃಗ ಧ್ವನಿ ಮಾಡಿದ......"

ಕಡು ಪಾಪಿಯೂ ದೃಢ ವೈರಿಯೂ ಆದ ದುಶ್ಯಾಸನನನ್ನು ಭೀಮಸೇನನು ಮಧ್ಯ ರಣರಂಗದಲ್ಲಿ ಜುಟ್ಟು ಹಿಡಿದೆಳೆತಂದು ಎಲ್ಲರೂ ನೋಡುತ್ತಿದ್ದಂತೆ, ಆ ನೀಚನನ್ನು ತನ್ನ ತೊಡೆಯ ಮೇಲೆ ಅಡ್ಡ ಕೆಡಹಿ ಕೊಂಡು ಭೂಮ್ಯಾಕಾಶಗಳು ಗಡ ಗಡನೆ ನಡಗುವಂತೆ ಸಿಂಹಗರ್ಜನೆಯನ್ನು ಮಾಡುತ್ತ ವೀರನರಸಿಂಹನ ಲೀಲೆಯನ್ನು ತೋರಿದನು. ಎಂದು ಭಾರತದಲ್ಲಿ ವಿವರವಾಗಿ ವರ್ಣಿತವಾದ ದುಶ್ಯಾಸನನ ವಧೆಯ ಸಂದರ್ಭವನ್ನೇ ದಾಸರಾಯರು ಇಲ್ಲಿ ಹೇಳುತ್ತಾರೆ.

"ಅನಘ ಪೊರೆವುದು ಕರವ ಮುಗಿವೆ ಚರಣಕೆ"

ದೋಷ ದೂರನಾದ ಮುಖ್ಯ ಪ್ರಾಣನೆ ನಿನ್ನ ಚರಣಗಳಿಗೆ ನಮಿಸುತ್ತೇನೆ. ನನ್ನನ್ನು ಸದಾ ರಕ್ಷಿಸು ಎಂದು ಪ್ರಾರ್ಥಿಸುವದಾಗಿ ದಾಸರಾಯರು ಹೇಳಿದ್ದಾರೆ.

ಪೊರೆವುದು ಹೇಗೆ ? ಎಂಬ ಅಂತರಂಗದಿ ಬಯಕೆಯನ್ನು ಶ್ರೀ ಶಾಮ ಸುಂದರದಾಸರು ಈ ರೀತಿ ತೋರಿದ್ದಾರೆ :-

ಇಂದ್ರಿಯ ಜಯಕೊಟ್ಟು, ಮಾನಸಿಕ ಅಹಂ ಮಮತೆಯನ್ನು ಬಿಡಿಸಿ, ಬುದ್ಧಿಯಲ್ಲಿ ನೆಲೆಗೊಂಡ ವಿಪರೀತ ಮತಿ ಕಳೆದು ಪೊರೆವುದು.

## ಪದಸಂಖ್ಯೆ ೧೦೦ :

ಭೂಧವನಜದಿ – ವರಾಹದೇವರಲ್ಲಿ ಹುಟ್ಟಿದ ತುಂಗಾನದಿ.

ಶೈಲಸುತ – ಮೈನಾಕ

ತಾವರೆಯಸಖ – ಸೂರ್ಯ.

ತತ್ಸುತ – ಸುಗ್ರೀವ.

ಭೂವಿಭುದ ಸುತ– ಬ್ರಾಹ್ಮಣನ ಮಗ. (ಏಕಚಕ್ರಪುರದಲ್ಲಿ ಪಾಂಡವರು ಇಳಿದ ಮನೆಯ

ಬ್ರಾಹ್ಮಣನ ಮಗ)

## ಪದಸಂಖ್ಯೆ ೧೦೧ :

ಮಾಜಿಸು – ನಾಶಮಾಡು,
ಆಯುಜಾತ – ವಾಯುವಿನ ಮಗ,
ಬಿಡೌಜ – ಸಂಪತ್ತು, ಇದನ್ನು ಬಿಡಲಾಗದವನು ಬಿಡೌಜ, ಇಂದ್ರ,
ತ್ರಿದಶಸಪ್ತಗ್ರಂಥ – ಮೂವತ್ತೇಳು ಗ್ರಂಥಗಳು

## ಪದಸಂಖ್ಯೆ ೧೦೨ :

ದಿವಿಷತ್ಪೂಜಿತ – ದೇವತೆಗಳಿಂದ ಪೂಜಿತ

ಸರ್ವೋದ್ರಿಕ್ತ – ಸರ್ವರನ್ನೂ ಪ್ರೇರಿಸುವವ

ಅನಂತಜ – ಆಕಾಶದಲ್ಲಿ ಹುಟ್ಟಿದ ವಾಯು,

ಭುಕ್ತಿ ಮುಕ್ತಿದ – ಇಹ ಪರಸೌಖ್ಯ ಕೊಡುವವನು,

ದಿತಿಜಾಹಿ – ದೈತ್ಯರು ಎನ್ನುವ ಸರ್ಪ,

ದ್ವಿಜಪಾಜ – ಪಕ್ಷಿರಾಜ ಗರುಡ,

ಘಾಗಜ – ಕೊಡದಿಂದ ಹುಟ್ಟಿದ ಅಗಸ್ತ್ಯ,

ಪುರರಿಪು – ರುದ್ರದೇವರು,

ಪಿತ – ವಾಯುದೇವರು,

ಪಯೋಧರ – ನೀರನ್ನು ಧರಿಸಿದ ಮೋಡ, ಅಮೃತ ಧರಿಸಿದ ಚಂದ್ರ,

ಮಾತರ – ಸೂರ್ಯ,

ಜ – ಸುಗ್ರೀವ,

ಉಪೇಕ್ಷ ನೀಲೇಶ ತ ಮಾಡದೆ – ನೀನು ಸ್ವಲ್ಪ ವಾದರೂ ಉದಾಸೀನ ಮಾಡದೆ. ತ (?)

ತಾರಕ್ಷ – ಗರುಡ

ಮಧುಸಖ – ವಸಂತನ ಸಖ, ಕಾಮ,

ಮಧುಸಖಪಾಲ – ಬಲರಾಮ,

ಅನುಜ – ಕೃಷ್ಣ, ಮಧು ಎಂದರೆ ವಾಯುದೇವರು

ಕರದಂಡ – ದಂಡಕಾಷ್ಟವನ್ನು ಹಿಡಿದ ಶ್ರೀಮಧ್ವಾಚಾರ್ಯರು

ವಿದುರಾಗ್ರಜ ನಂದನ – ಪಾಂಡುರಾಜನ ಮಗ, ಭೀಮಸೇನ,

ಸಂಸಾರಾರಣ್ಯ ಸುಧನಂಜಯ – ಸಂಸಾರವೆಂಬ ಅರಣ್ಯವನ್ನು ದಹಿಸಲಿಕ್ಕೆ

ಉತ್ಕೃಷ್ಟವಾದ
ಅಗ್ನಿ ಸದೃಶ್ಯರು.

## ಪದಸಂಖ್ಯೆ ೧೦೩ :

ಕೃಷ್ಣೇಶ – ಕೃಷ್ಣೆಯ ಪತಿ, ದ್ರೌಪದಿಯ ಪತಿ, ಭೀಮಸೇನ,
ಶತಾನಂದ – ಬ್ರಹ್ಮದೇವರು, ವಾಯು,
ವೈಶ್ವಾನರ – ಅಗ್ನಿ,
ಯಾತುಧಾನರು – ದೈತ್ಯರು,
ಸುಷೇಣಾದಿ ಸೂದನ – ಸುಷೇಣನೇ ಮೊದಲಾದ ದೈತ್ಯರ ವಿನಾಶಕ,

## ಪದಸಂಖ್ಯೆ ೧೦೪ :

ಗಿರಿಸುತ ನೀ ಗತಿಯೆನಲಾಗ..... ಜಲಧಿಯೊಳಿಟ್ಟು

ಹಿಂದೆ ಪರ್ವತಗಳಿಗೆಲ್ಲಾ ರೆಕ್ಕೆ ಗಳಿದ್ದು ಅವು ಹಾರಾಡುತ್ತಲಿದ್ದವು. ಋಷಿ ಮುನಿಗಳೆಲ್ಲಾ ಮೊರೆಯಿಟ್ಟಾಗ ದೇವೇಂದ್ರನು ತನ್ನ ವಜ್ರಾಯುಧ ದಿಂದ ಅವುಗಳ ರೆಕ್ಕೆಗಳನ್ನು ಕತ್ತರಿಸ ಹತ್ತಿದ. ಆಗ ಹಿಮವತ್ಪರ್ವತದ ಮಗ ಮೈನಾಕನು ವಾಯುವನ್ನು ಮೊರೆಯಿಟ್ಟಾಗ, ವಾಯುದೇವರು ಅದನ್ನು ಸಮುದ್ರದಲ್ಲಿ ಅಡಗಿಸಿಟ್ಟು ರಕ್ಷಿಸಿದರು.

## ಪದಸಂಖ್ಯೆ ೧೦೫ :

ತುಳುವರಲ್ಲಿ – ತುಳು ಬ್ರಾಹ್ಮಣರಲ್ಲಿ

"ಪೊಕ್ಕು ರಣಕೆ ಹೆಜ್ಜೆಯಾ ..... ನೀಚನೆಂದೆನೇ :"

ನೀಚಾಗ್ರಣಿಯಾದ ದುರ್ಯೋಧನನು ದ್ರೌಪದೀದೇವಿಯನ್ನು ನಡು ಸಭೆಗೆಳೆಸಿ ನಗೆಯಾಡುತ್ತ, 'ನನ್ನ ರಾಣಿಯಾಗಿ ನನ್ನ ತೊಡೆಯ ಮೇಲೆ ಕೂಡು ಬಾ' ಎಂದು ತೊಡೆ ಚಪ್ಪರಿಸಿಕೊಂಡು ಹೇಳಿದನು. ಆಗ ದ್ರೌಪದೀ ದೇವಿಯು 'ಎಲೈ ಅಧಮಾ : ನಿನ್ನ ತೊಡೆಯ ಮೇಲೆ ಕೂಡತಕ್ಕವಳು ನಾನಲ್ಲ, ನನ್ನ ಪತಿಯಾದ ಭೀಮಸೇನ ದೇವರ ಗದೆಯು : ಅದನ್ನು ತಾಳಿಕೋ' ಎಂದು ಪ್ರತಿಜ್ಞಾಪೂರ್ವಕ ವಾಗಿ ನುಡಿದಳು.

ಮುಂದೆ ಕೌರವ ಪಾಂಡವರ ಯುದ್ಧ ಪ್ರಾರಂಭವಾಯ್ತು, ಕೌರವರ ಬಲವೆಲ್ಲ ನಾಶವಾಯಿತು. ದುರ್ಯೋಧನನೊಬ್ಬ ಉಳಿದು ಕೊಂಡಿದ್ದನು. ತನ್ನ ಸೈನ್ಯವನ್ನೆಲ್ಲ ಪುನಃ ಬದುಕಿಸಬೇಕೆಂದು ಬಯಸಿದ ದುರ್ಯೋಧನನು ನೀರಿನ ಮಡುವಿನಲ್ಲಿ ಮುಳುಗಿ ಜಲಸ್ತಂಭವೆಂಬ ಮಂತ್ರವನ್ನು ಜಪಿಸುತ್ತಲಿದ್ದನು. ಭೀಮಸೇನನು ಅವನನ್ನು ಹೊರಗೆ ಬರುವಂತೆ ಮಾಡಿದನು. ಇಬ್ಬರಿಗೂ ಭಯಂಕರ ಯುದ್ಧವಾಯಿತು. ಕೊನೆಗೆ ಭೀಮಸೇನನು ತನ್ನ ಗದೆಯಿಂದ ದುರ್ಯೋಧನನ ತೊಡೆಯನ್ನು ಮುರಿದು ಕಾಲಿಲೊದ್ದು ಬಗೆದನು. ದುಷ್ಟನಿಗ್ರಹ ಅವತಾರ ಕಾರ್ಯದ ಉದ್ದೇಶದಲ್ಲೊಂದು ಎಂಬ ಮಾತು ಸೂಚಿತವಾಗಿದೆ.

'ಬಹಳ ಗುಗ್ಗರಿ ಮೆಲಿದ ಭೂತ ಮಗುವು ಎಂದೆನೇ'

ಶ್ರೀಸುಮಧ್ವ ವಿಜಯದ ಎರಡ ನೆಯ ಸರ್ಗವು ೩೫ನೆಯ ಶ್ಲೋಕ ದಿಂದ ೪೨ ರ ವರೆಗೆ ವರ್ಣಿಸುವ ವಿಷಯ ಇಲ್ಲಿ ಸೂಚಿತವಾಗಿದೆ.

ಒಂದು ದಿನ ವಾಸುದೇವನ (ಶ್ರೀಮಧ್ವರ) ತಾಯಿಯು ಮಗು ವಾದ ಅವನಿಗೆ ಮೊಲೆಯುಣಿಸಿದಳು. ಅವಳಿಗೆ ಕೆಲಸಕ್ಕಾಗಿ ಹೊರಗೆ ಹೋಗ ಬೇಕಾಯಿತು. ಆಗ ಅವಳು ತನ್ನ ಹಿರಿಯ ಮಗಳ ಬಳಿಯಲ್ಲಿ ಮಗು ವಾಸುದೇವನನ್ನು ಮಲಗಿಸಿ, ನೀನು ಮಗುವನ್ನು ಆಡಿಸುತ್ತಿರು. ನಾನೀಗಲೇ ಬರುತ್ತೇನೆ ಎಂದು ಹೇಳಿ ಹೊರಟು ಹೋದಳು.

ತಾಯಿ ಹೋದ ಕೂಡಲೇ ಮಗು ವಾಸುದೇವನ ರೋದನ ಪ್ರಾರಂಭ ವಾಯಿತು. ಅವರಕ್ಕ ಎಷ್ಟು ರೀತಿ ಸಮಾಧಾನ ಮಾಡಿದರೂ ಅದು ಸುಮ್ಮನಾಗಲಿಲ್ಲ. ಪಾಪ ಆ ಚಿಕ್ಕ ಬಾಲಿಕೆಗೆ ಏನೂ ತೋಚದಂತಾ ಯಿತು. ಆಗವಳು ಕುಚ್ಚಿದ ಹುರಳಿ ಯನ್ನು ತಿನ್ನಿಸಿದಳು. ಮಗು ಬಹು ಸಂತೋಷದಿಂದ ಬೆಂದ ಹುರುಳಿ ಯನ್ನು ತಿಂದು ಆನಂದಗೊಂಡಿತು. ಸ್ವಲ್ಪ ಸಮಯದ ಅನಂತರ ತಿರುಗಿ ಬಂದ ತಾಯಿಯು ನಡೆದ ಸಮಾ ಚಾರವನ್ನು ಕೇಳಿ ತುಂಬಾ ಗಾಬರಿ ಗೊಂಡಳು. ತಂದೆ ಧನ್ವಂತರೀ ಮಂತ್ರ ವನ್ನು ಜಪಿಸಿದನು. ಉಳಿದವರು ಎಷ್ಟೋ ಬಗೆ ಬೇಡಿಕೊಂಡರು. ಮಗು ವಾಸುದೇವನು ಮುಗುಳು ನಗೆ ನಗುತ್ತ ಆಟವಾಡುತ್ತಿದ್ದ. ಇವನ ನಗೆ, ಆಟದ ಬಗೆ ವಿಶಿಷ್ಟವಾಗಿತ್ತು.

ಇಲ್ಲಿ ದಾಸರಾಯರಾಡಿದ ನುಡಿ ಗಮನಾರ್ಹವಾಗಿದೆ. 'ನಾನು ನಿನಗೆ ಬಹಳ ಗುಗ್ಗರಿ ಮೆಲಿದ ಭೂತಮಗು ಅಂದನೆ ದೆವ್ವದಂತಹ ಮಗು ಎಂದೆನೇ, ಅಲ್ಲ ನಿನಗೆ ಅಭೂತ ಮಗುವೆಂದೆ, ಅಷ್ಟೇ ಎಂದು ಪ್ರಾರ್ಥಿ ಸುವ ವಿಧಾನವನ್ನು ಸೂಚಿಸಿದ್ದಾರೆ.

## ಪದಸಂಖ್ಯೆ ೧೦೬ :

| | | |
|---|---|---|
| ನೀಲಲೋಹಿತ | – | ರುದ್ರದೇವರು, |
| ಚಾಪಭಂಜನ ಶ್ರೀಪತಿ | – | ಧನುಸ್ಸನ್ನು ಮುರಿದ ಶ್ರೀರಾಮಚಂದ್ರ |
| ಅಪಜ | – | ಕಮಲ |
| ಪರಂಜಳ | – | ಸ್ವಚ್ಛ, ನಿಸ್ಸಂಶಯ, |

ವಿವರ : 'ಕ್ಷಿತಿಪರರನ್ನು ಬಿಡಿಸಿದ್ಯೆ'

ಮಹಾಭಾರತ ಕಥೆಯಲ್ಲಿ ರಾಜ ಸೂಯಯಾಗ ಕಾಲದಲ್ಲಿ ದಿಗ್ವಿಜಯಕ್ಕೆ ಹೊರಟ ಭೀಮಸೇನನಿಗೂ ಜರಾಸಂಧನಿಗೂ ಯುದ್ಧ ನಡೆಯುತ್ತದೆ. ಜರಾಸಂಧನಿಗೆ ಬ್ರಹ್ಮ ರುದ್ರರ ವರಗಳ ಬಲವಿತ್ತು. ಅರಸರನ್ನು ತನ್ನ ಕಾರಾಗ್ರಹ ದಲ್ಲಿಟ್ಟು ತುಂಬಾ ಗೋಳಾಡಿಸುತ್ತಿದ್ದನು.

ಇಬ್ಬರಿಗೂ ೧೪ ದಿನ ಹಗಲು ರಾತ್ರಿ ಯುದ್ಧ ನಡೆಯುತ್ತದೆ. ಭೀಮಸೇನನು ಜರಾಸಂಧನ ದೇಹವನ್ನು ಸೀಳಿ ಎಸೆದಂತೆಲ್ಲಾ ಅದು ಮತ್ತೆ ಒಂದು ಕೂಡಿ ಕೊಳ್ಳುತ್ತಿತ್ತು. ಕೊನೆಯ ದಿನ ಶ್ರೀಕೃಷ್ಣನ ಸೂಚನೆಯಂತೆ ದೇಹದ ಎರಡೂ

ತುಂಡು ಗಳನ್ನು ತಿರುವುಮುರುವಾಗಿ ಎಸೆದಾಗ ಅವು ಕೂಡಿಕೊಳ್ಳಲಿಲ್ಲ. ಹೀಗೆ ಅವನ ವಧೆಯಾಯಿತು. ಅನಂತರ ಭೀಮಸೇನನು ಕಾರಾಗ್ರಹದಲ್ಲಿದ್ದ ಅರಸರನ್ನೆಲ್ಲಾ ಬಿಡುಗಡೆ ಮಾಡಿದನು.

## ಪದಸಂಖ್ಯೆ ೧೦೭ :

ವಾರಿಜಾಸನ ಪದವಿ– ಬ್ರಹ್ಮ ಪದವಿ

ಅಗಾರ – ಮನೆ

ಮುಳ್ಳು ಮರದಡಿ– ಬೋರೇಗಿಡ

ಮೀನಾಂಕರಿ – ಮೀನಾಂಕ
– ಕಾಮ, ಅರಿ, ರುದ್ರದೇವರು,

ಶಾಮಲಾ ಪತಿದಿಕ್ಕು – ದಕ್ಷಿಣ ದಿಕ್ಕು, ಯಮನ ದಿಕ್ಕು,

ಅವಧ್ಯ – ಕೊಲ್ಲುವುದು ಅಸಾಧ್ಯವಾದ,

## ಪದಸಂಖ್ಯೆ ೧೦೯ :

ವಾಸುದೇವನ
ಮೊಮ್ಮಗ – ವಾಸುದೇವನ ಮಗ ವಾಯು, ವಾಯುವಿನ ಮಗ ಹನುಂತ,

ಋಷಿಗಳಂದದಿ – ಋಷಿಗಳಂತೆ ಅನ್ನನೀರು ತೊರೆದು

ವಿವರ : 'ಗಮ್ಮನೆ ಹಾರಿ ... ಪುರಪ್ರವೇಶ ಮಾಡಿದ.'

ಹನುಮಂತನು ಲಂಕೆಗೆ ಹೋಗುವಾಗ ಸಮುದ್ರಲಂಘನ ಮಾಡುತ್ತಾನೆ. ದಾರಿಯಲ್ಲಿ ಕಡಲಡಿಯಿಂದ ಬರುತ್ತಿರುವ ಭಯಂಕರ ಆಕಾರದ ರಾಕ್ಷಸಿಯೊಬ್ಬಳನ್ನು ನೋಡುತ್ತಾನೆ. ಆಕೆಯು ಹನುಮಂತನ ಸತ್ವಪರೀಕ್ಷೆಗಾಗಿ ದೇವತೆಗಳಿಂದ ಕಳುಹಿಸಲ್ಪಟ್ಟ 'ಸುರಸಿ' ಎಂಬ ಪನ್ನಗಮಾತೆಯಾಗಿರುತ್ತಾಳೆ. ಆತನನ್ನು ತನ್ನ ಆಹಾರವಾಗಿ ತಿನ್ನಬಯಸುತ್ತಾಳೆ. ಹನುಮಂತನು ಆಕೆಯ ಬಾಯಿಗಿಂತ ದೊಡ್ಡವನಾಗಿ ನಿಲ್ಲುತ್ತಾನೆ. ಆಕೆಯ ಬಾಯಿಯೂ ದೊಡ್ಡದಾಗುತ್ತ ೧೦೦ ಯೋಜನವಾಗುತ್ತದೆ. ಆಗ ಹನುಮಂತನು ಒಮ್ಮೆಲೆ ಅಂಗುಷ್ಟದಷ್ಟು ಕುಗ್ಗಿಸಿ ಅವಳ ಬಾಯಿಯೊಳಕ್ಕೆ ಹೋಗಿ ಹೊರಗೆ ಬಂದು ಬಿಡುತ್ತಾನೆ. ಅವನ ಸಾಹಸಕ್ಕೆ ಮೆಚ್ಚಿ ಶುಭ ಕೋರಿ ಬಿಟ್ಟುಬಿಡುತ್ತಾಳೆ.

ಮುಂದೆ ಸಿಂಹಿಕೆ ಎಂಬ ಮತ್ತೊಬ್ಬ ರಾಕ್ಷಸಿ ಆತನಿಗೆ ಪ್ರಯಾಣಕ್ಕೆ ಅಡ್ಡ ಬರುತ್ತಾಳೆ. ಆಕೆಯನ್ನು ಹನುಮಂತನು ಸುರಸಿಯನ್ನು ಸೋಲಿಸಿದಂತೆಯೇ ಸೋಲಿಸಿ ಕೊಂದು ಹಾಕಿ ಮುಂದೆ ಲಂಕೆಯ ಕಡೆಗೆ ಹಾರಿಬಿಡುತ್ತಾನೆ.

ಲಂಕಾಪಟ್ಟಣದ ಹೊರಗೆ ಕಾವಲಿದ್ದ ಲಂಕಿಣಿಯನ್ನು ಪರಾಜಯಗೊಳಿಸಿ, ಕೋಟೆಯನ್ನು ಹಾರಿ ಪುರಪ್ರವೇಶವನ್ನು ಮಾಡುತ್ತಾನೆ.

"..... ಮೂಜಗ ಪೂಜಿತನ ಮಡದಿಯಾಕೃತಿಯನು"

ರಾವಣನಿಂದ ಅಪಹರಿಸಲ್ಪಟ್ಟ ಸೀತೆ

ನಿಜವಾದ ಸೀತೆಯಲ್ಲ. ವೇದವತಿಯೆಂಬ ಸ್ವಾಹಾದೇವಿಯ ಸಖಿಯೆಂದೂ ಈಕೆಯೇ ಸೀತಾದೇವಿಯ ಆಕಾರವನ್ನು ತಾಳಿರುತ್ತಾಳೆಂದು ಪುರಾಣಗಳಿಂದ ತಿಳಿದುಬರುತ್ತದೆ.

## ಪದಸಂಖ್ಯೆ ೧೧೦ :

ಪರಿಜಿತ – ಇಂದ್ರಜಿತು, ರಾವಣನ ಮಗ

ಥರವು ಸಿಗುವುದು– ಸಿಗುವುದು ಯೋಗ್ಯ,

ಕರವ ಮರೆದ – ತನ್ನ ಶಕ್ತಿ ತೋರಿಸುವುದನ್ನು ಬಿಟ್ಟನು.

## ಪದಸಂಖ್ಯೆ ೧೧೨ :

ಇಬ್ಬರು ಸ್ವರ್ಣನಾಮಕರು – ಹಿರಣ್ಯಾಕ್ಷ. ಹಿರಣ್ಯಕಶಿಪು

ನಗಜಾಧಿಪತಿ – ಪಾರ್ವತಿ ಪತಿ, ರುದ್ರದೇವರು,

ಪುಚ್ಛ – ಬಾಲ

ನಾಣ್ಣುಡಿಗಳು :

೧. ಬೆಂಕಿವನದೊಳಿಟ್ಟ ತೆರದಂತೆ

೨. ತೈಲವಿಲ್ಲದ ದೀಪದ ಬೆಳಕು ನಿಜವಲ್ಲ.

## ಪದಸಂಖ್ಯೆ ೧೧೪ :

ಕಾನಾ – ಕಿವಿ,

ಕಲ್ಲೂತ – ಕೂಗುತ

## ಪದಸಂಖ್ಯೆ ೧೧೫ :

ಬ್ರಹ್ಮದೇವರು ಪರಮಾತ್ಮನ ನಾಭಿಯಿಂದ ಜನಿಸಿದರು. ಇವರ ಋಜುಪುಂಗವರು. ಇವರ ಶರೀರವು ಮಹತ್ ತತ್ವದಿಂದ ಕೂಡಿದುದು. ಇವರು ವಾಯುದೇವರಿಗಿಂತ ಅಧಿಕರು. ಪಾದೋದಕದಿ ಬಿದ್ದು ಎದ್ದವನೆ – ಕೌರವನು ವಿಷಪಾನ ಮಾಡಿಸಿ ಮಡುವಿನೊಳಗೆ ಹಾಕಿದ ಕಥೆ.

ಗೋಪಾರಿನಗಕುಲಿಶ – ಕೃಷ್ಣನ ದ್ವೇಷಿಗಳೆಂಬ ಪರ್ವತಕ್ಕೆ ವಜ್ರಾಯುಧ ದಂತೆ ಇದ್ದವನೆ.

ದ್ವಿಜಮುರಾರಿ ಮುಖ ವಿನುತ – ಗರುಡ ರುದ್ರರೆ ಮೊದಲಾದವರಿಂದ ಸ್ತುತಿಸಿಕೊಳ್ಳುವ,

ಆಯುರಾಯಜ – ವಾಯುಸುತ,

ಅಯೋನಿಜೆ – ದ್ರೌಪದಿ

## ಪದಸಂಖ್ಯೆ ೧೧೬ :

ಈ ಕೋಲುಪದದಲ್ಲಿ ಪ್ರಾಣೇಶದಾಸರು ಒಂಬತ್ತನೆಯ ಕಕ್ಷದಿಂದ (೩೨ನೆಯ) ಮೂವತ್ತೆರಡನೆಯ ಕಕ್ಷದವರೆಗಿನ ದೇವತೆಗಳನ್ನು ಸ್ತೋತ್ರಮಾಡಿದ್ದಾರೆ.

ಧಾತಪಾತಕೆ – ಪಾಪಗಳನ್ನು ತೊಳೆಯುವವಳು.

ಕುಹು – ಅಮಾವಾಸ್ಯೆ

ವ್ಯಾಸ – ವ್ಯಾಸ ಸಮುದ್ರ,

"ಗೌವತಮನಘ ಪರಿಹಾರ ಮಾಡಿದ ಗೋದಾ....."

ಗೋದ – ಗೋವಿಗೆ ಪ್ರಾಣವನ್ನು ಕೊಟ್ಟಿರುವ

ವಾರಿ – ನೀರು,

ಒಮ್ಮೆ ಬರಗಾಲ ಬಿದ್ದಾಗ ಋಷಿಗಳೆಲ್ಲರೂ ಗೌತಮರ ಆಶಯದಲ್ಲಿ ಬಹುಕಾಲ ತಂಗಿದರು. ಮಳೆ–ಬೆಳೆ ಬಂದ ನಂತರವೂ ಗೌತಮರು ಅವರನ್ನು ಬಿಡಲಿಲ್ಲ. ಗಣಪತಿಯ ಯುಕ್ತಿಯಿಂದ ಗೌತಮರ ಮೇಲೆ ಬಡಕಲಾಗಿದ್ದ ಆಕಳನ್ನು ಕೊಂದ ಆರೋಪ ಬಂದಿತು. ಗೌತಮರ ದಿವ್ಯದೃಷ್ಟಿಯಿಂದ ಅದು ಬ್ರಾಹ್ಮಣರ ಕೆಲಸವೇ ಎಂದು ತಿಳಿದಾಗ ಈಶ್ವರನನ್ನು ಕುರಿತು ತಪಸ್ಸು ಮಾಡಿ ಗಂಗೆಯಿಂದ ಪಾಪವನ್ನು ಪರಿಹರಿಸಿ ಕೊಂಡರು.

ಯಾವುದೇ ಹೊಗಿನ ನದಿ, ಬಾವಿ, ಸಮುದ್ರದ ನೀರಿನಲ್ಲಿ ಭಗವದ್ರೂಪಗಳಿರುತ್ತವೆ. ಇವೇ ಶ್ರೀಹರಿಯು ದೇಹದಲ್ಲಿರುವ ನಾಡಿಗಳು ಎಂದೆನಿಸಿಕೊಳ್ಳುತ್ತವೆ. ಮಾನವ ದೇಹದಲ್ಲಿಯೂ ಇವರ ಎಪ್ಪತ್ತೆರಡು ಸಾವಿರ (೭೨,೦೦೦) ನಾಡಿಗಳೂ ಹೊರಗಿನ ನದೀ ನೀರಿನ ದ್ಯೋತಕಗಳಾಗಿರುತ್ತವೆ ಎಂದು ಪುರಂದರದಾಸ, ವಿಜಯದಾಸ, ಜಗನ್ನಾಥದಾಸಾದಿಗಳು ಹೇಳಿದ್ದಾರೆ.

ವಾಮನನ ವಾಮಪಾದದ ಅಂಗುಷ್ಟವು ಬ್ರಹ್ಮಾಂಡಬರ್ಪರಕ್ಕೆ ತಗಲಿದಾಗ ಅದು ಒಡೆದು ಅಲ್ಲಿಂದ ಬಂದ ನೀರು ಗಂಗಾನದಿ ಎನಿಸಿಕೊಂಡಿತು. ಬ್ರಹ್ಮದೇವರು ಆ ನೀರಿನಿಂದ ವಿಷ್ಣುವಿನ ಪಾದವನ್ನು ತೊಳೆದರು. ಆದ್ದರಿಂದ ಅದು ವಿಷ್ಣುಪದಿ ಸ್ವರ್ನದಿ ಎನಿಸಿಕೊಂಡಿತು.

ಸಗರ ಚಕ್ರವರ್ತಿಯ ಯಜ್ಞದ ಕುದುರೆ ಕಪಿಲ ಋಷಿಗಳ ಆಶ್ರಮದ ಹತ್ತಿರ ಮೇಯುತ್ತಿದ್ದುದನ್ನು ನೋಡಿ ಆತನ ಮಕ್ಕಳು ಋಷಿಗಳನ್ನು ಹೊಡೆಯಲು ಹೋದಾಗ ಅವರ ಕೋಪಾಗ್ನಿ ಆ ಸಗರನ ಮಕ್ಕಳನ್ನೆಲ್ಲಾ ಸುಟ್ಟು ಭಸ್ಮ ಮಾಡಿತು. ಮುಂದೆ ಸಗರನ ಮರಿಮೊಮ್ಮಗನಾದ ಭಗೀರಥನು ಬಹು ತಪಸ್ಸನ್ನು ಮಾಡಿ, ಮಹಾಪ್ರಯತ್ನದಿಂದ ಆಕಾಶಗಂಗೆಯನ್ನು ಭೂಮಿಗೆ ಬರಮಾಡಿಕೊಂಡು ಪಾತಾಳದಲ್ಲಿದ್ದ ಸಗರಕುಮಾರರನ್ನು ಬದುಕಿಸಿದ. ಅಂದಿನಿಂದ ಗಂಗಾನದಿಗೆ ಭಾಗೀರಥಿಯೆಂದು ಹೆಸರಾಯಿತು.

"ತವಕದಿಂದಲ್ಲಿ..... ಸ್ತುತಿಸೋರೆ ಸುರರೆಲ್ಲ."

ಹಾಗೆ ಬರಮಾಡಿಕೊಂಡ ದೇವಗಂಗೆಯು ಶಿವನ ಜಟೆಯಿಂದ ಹಾಯ್ದು ತ್ರಿಪದಿಗಳಲ್ಲಿ ಹರಿಯಿತು. ಮುಂದೆ ಭೂಲೋಕದಲ್ಲಿ ಜಹ್ನು ಋಕ್ಷೆಯ (ಋಷಿಯ) ಆಶ್ರಮದಲ್ಲಿಳಿದು ಅದನ್ನು ಕೊಚ್ಚಿಕೊಂಡು ಹೋಗ ತೊಡಗಿದಾಗ ಜಹ್ನುವು ಅದನ್ನು ಅಪೋಷನ ಮಾಡಿ ಬಿಟ್ಟನು. ಮತ್ತೆ ಭಗೀರಥನ ಪ್ರಾರ್ಥನೆಯಿಂದಾಗಿ ತನ್ನ ಬಲಗಿವಿಯಿಂದ ಆ ನದಿಯನ್ನು ಭೂಮಿಯ ಮೇಲೆ ಹರಿಯಬಿಟ್ಟನು. ಆದುದರಿಂದ ಮುಂದೆ ಗಂಗೆಗೆ ಜಾಹ್ನವಿ ಎಂದು ಹೆಸರಾಯಿತು.

"ವಸುಗಳ ಮಾತು ಲಾಲಿಸಿ .... ನಿಜರೂಪವೈದಿದೆ"

ಕುರುವಂಶದ ಶಂತನು ಗಂಗೆಯನ್ನು ಮದುವೆಯಾದ, ಆಕೆಯ ಕರಾರಿನಂತೆ ಮೊದಲು ಹುಟ್ಟಿದ ಏಳು ಮಕ್ಕಳನ್ನು ಗಂಗೆಗೆ ಹಾಕಿ ಎಂಟನೆಯದನ್ನು ಹಾಕಲು ಹೋದಾಗ ರಾಜನು ತಡೆದನು. ಆಗ ಗಂಗೆಯು ಅವರೆಲ್ಲ ಶಾಪಗ್ರಸ್ಥರಾದ ಅಷ್ಟ ವಸು ಗಳೆಂದೂ, ಎಂಟನೆಯ ಮಗುವೇ ದೊಡ್ಡವನಾಗಿ ನಿಮ್ಮ ಹತ್ತಿರ ಬರುತ್ತಾನೆ ಎಂದು ಹೇಳಿ ಅದೃಶ್ಯಳಾದಳು. ಮುಂದೆ ರಾಜನು ಅವನಿಗೆ ದೇವವ್ರತನೆಂದು ನಾಮಕರಣ ಮಾಡಿ, ಅವನಿಗೆ ದೊಡ್ಡ ದೊಡ್ಡ ಋಷಿ ಮುನಿಗಳಿಂದ ಸಕಲ ವೇದ ಶಾಸ್ತ್ರಗಳನ್ನು ಕಲಿಸಿ ಮಹಾಜ್ಞಾನಿಯನ್ನಾಗಿ ಮಾಡಿದನು. ಅವನೇ ಅನಂತರ ತಂದೆಯ ಮದುವೆಯ ಬಯಕೆಯನ್ನು ಪೂರ್ತಿಮಾಡಲು ಆಜನ್ಮಬ್ರಹ್ಮಚಾರಿ ಯಾಗಿ ಉಳಿದು ಭೀಷ್ಮಾಚಾರ್ಯನೆಂದು ಪ್ರಸಿದ್ಧನಾದನು.

## ಪದಸಂಖ್ಯೆ ೧೧೮ :

## ಸರಸ್ವತಿದೇವಿ ಸ್ತುತಿ :

ಸುರಧರಿಜೆ – ಕಲ್ಪವೃಕ್ಷದಂತಿ ರುವವಳೆ

ಬಟ್ಟೆ – ದಾರಿ

ಪವಿ – ವಜ್ರ,

ಮಧುಜಿತೆ – ಮಧುವೆಂಬ ದೈತ್ಯನನ್ನು ಗೆದ್ದ ಶ್ರೀಹರಿ.

ಪ್ರಿಯನ – ಬ್ರಹ್ಮನ

ಲೇಲೇತರ – ಬಹಳ,

ಗರುಡ ಪುರಾಣದಂತೆ ಸರಸ್ವತೀದೇವಿಯ ಕೃತಿ ಪ್ರದ್ಯುಮ್ನರ ಕುವರಿಯು. ವಿಷ್ಣು ರಹಸ್ಯದ ಹೇಳಿಕೆಯಂತೆ ಈಕೆ ಬ್ರಹ್ಮಪತ್ನಿಯು. ಬಹು ಸತ್ವರಜಗುಣದಿಂದ ವಿಕಾರವುಳ್ಳ ಮಹಾತತ್ತ್ವವೇ ಶರೀರವಾಗಿ ವುಳ್ಳವಳು. ಶ್ರೀಹರಿಯ ಪ್ರಸಾದದಿಂದ ರಮಾದೇವಿಯ ತರುವಾಯ ಈಕೆ ವೇದಗಳಿಗಭಿಮಾನಿಯಾಗಿದ್ದಾಳೆ. ಅಲ್ಲದೇ ಬುದ್ಧ್ಯಾಭಿಮಾನಿಯೂ ಅಹುದು.

## ಪದಸಂಖ್ಯೆ ೧೧೯ :

ವೇದಾತ್ಮಿಕಾ – ಗಾಯತ್ರೀ ರೂಪದಿಂದ ಸಕಲವೇದಗಳಿಗೆ ಅಭಿಮಾನಿಯಾಗಿ ರುವುದರಿಂದ ವೇದಾತ್ಮಿಕಾ ಎಂದು ಈಕೆಯ ಹೆಸರು. ಅಲ್ಲದೆ, ಸರಸ್ವತಿಗೆ, ಗಾಯತ್ರಿ, ಬುದ್ಧಿ, ವಿದ್ಯಾ, ಪ್ರೀತಿ, ಗುರುಭಕ್ತಿ, ಭುಜಿ, ಅನುಭೂತಿ, ಸಾವಿತ್ರಿ ಮೊದಲಾದ ನಾಮಗಳೂ ಇವೆ.

## ಪದಸಂಖ್ಯೆ ೧೨೦ :

## ಭಾರತೀದೇವಿ ಸ್ತುತಿ :

ಶ್ರೋಣಿ – ನಿತಂಬಿ,
ಧಾತಜಾತಳು – ಬ್ರಹ್ಮಪುತ್ರಿ
ದ್ರಹಿಣವಿದ್ಯೆ – ಬ್ರಹ್ಮವಿದ್ಯೆ,
ಅನಘ – ದೋಷ ರಹಿತ
ನಿಕೇತನ – ಮನೆಯಲ್ಲಿ • ವಾಸಿಸುವವಳೆ.

ಗರುಡ ಪುರಾಣದ ವಚನದಂತೆ ಶ್ರೀಭಾರತೀದೇವಿಯು ಕೃತಿಪತಿಪ್ರದ್ಯುಮ್ನನ ಮಗಳು. ಪ್ರದ್ಯುಮ್ನನು ಈಕೆಯನ್ನು ವಾಯುದೇವರಿಗೆ ಕೊಟ್ಟು ಮದುವೆ ಮಾಡಿದನು. ಇವಳು ಬಹು ಸತ್ವರಜೋಗುಣವಿಕಾರವಾದ ಮಹತ್ತತ್ವ ಶರೀರವುಳ್ಳವಳು. ಪತಿಯಿಂದ ಉಪದೇಶ ಪಡೆದ ಈಕೆ ಪರಮಾತ್ಮನಲ್ಲಿ ಅತಿಶಯ ಭಕ್ತಿವುಳ್ಳವಳು.

ದ್ವಾಪರಯುಗದಲ್ಲಿ ವಾಯುದೇವನು ಭೀಮಸೇನದೇವರ ಅವತಾರವನ್ನು ತಾಳಿದಾಗ ಭಾರತೀದೇವಿಯು ಬ್ರಹ್ಮನಿಂದ ಶಾಪಗ್ರಸ್ಥ ರಾದ ಪಾರ್ವತಿ, ಶಚಿ, ಶಾಮಲಾ ಹಾಗೂ ಉಷಾ ಈ ನಾಲ್ವರಿಂದ ಕೂಡಿ ದ್ರೌಪದಿ ಎಂಬ ಹೆಸರಿನಿಂದ ಪಂಚ ಪಾಂಡವರ ಪತ್ನಿಯಾದಳು.

ವೇದಾತ್ಮಿಕಾ, ಬುದ್ಧಿ, ಅನುಭೂತಿ, ಶ್ರದ್ಧಾ ಮುಂತಾದವು ಈಕೆಯ ಇತರ ರೂಪ ಹಾಗೂ ನಾಮಗಳು.

## ಪದಸಂಖ್ಯೆ ೧೨೧ :

ಸುರ ನದಿಯ ಭಗಿನಿ – ಗಂಗಾನದಿಯ ಸಹೋದರಿ ಭಾರತೀದೇವಿ

ಭದ್ರವಿಗ್ರಹೆ – ಮಂಗಳ ಮೂರ್ತಿಯೆ

ಕುನಗೆ ಜಾರಿಸು – ಕೆಟ್ಟ ನಗೆ ಬಿಡಿಸು,

ವಾಮನನ ವಾಮಪಾದದ ಅಂಗುಷ್ಠದ ಉಗುರು ಬ್ರಹ್ಮಾಂಡ ಖರ್ಪರಕ್ಕೆ ತಗಲಲು ಅದು ಒಡೆಯ ಗಂಗೆಯು ಉದ್ಭವಿಸಿದಳು. ಆದ್ದರಿಂದ ವಿಷ್ಣುವಿನ ಮಗಳಾದಳು. ಭಾರತೀ ದೇವಿಯು ಪ್ರದ್ಯುಮ್ನನ ಮಗಳು. ಆದ್ದರಿಂದ ಇವರಿಬ್ಬರೂ ಸಹೋದರಿ ಯರು.

## ಪದಸಂಖ್ಯೆ ೧೨೨ :

ಗೋಪತಿ ಧ್ವಜ – ಶಿವ

ಅಚ್ಛಿನ್ನ – ಅಖಂಡ,

### ಪದಸಂಖ್ಯೆ ೧೨೩ :

ಭವಾಟವಿಗೆ – ಸಂಸಾರವೆಂಬ ಅಡವಿಗೆ

ವೀತಿಹೋತ್ರ – ಅಗ್ನಿ,

ಬಾಣವರದ – ರುದ್ರದೇವರು, ಬಾಣಾಸುರನಿಗೆ ವರವನ್ನು ಕೊಟ್ಟವನು

## ಪದಸಂಖ್ಯೆ ೧೨೪ :

ಕೀಲಾಲಜ – ಕಮಲ

ಸ್ವಯಂಭುಜೆ – ಬ್ರಹ್ಮಪುತ್ರಿ,

ಭಾರತೀದೇವಿ,

ಭಯವಾರ – ಭಯರಹಿತ

ಅಮಂದ ಕರುಣಿ– ಬಹಳ ಕರುಣಿ

ಅಷ್ಟಾವದ ಸುಕಾಂತೆ–ಸ್ವರ್ಣಕಾಂತೆ

## ಪದಸಂಖ್ಯೆ ೧೨೫ :

ಮಾಯಾಮಂದಿರನವರ ಕಿಂಕರನು – ಮಾಯಾವತಿ ವಾಸುದೇವನನ್ನು ಉಪಾಸನೆ ಮಾಡತಕ್ಕ ಹರಿಭಕ್ತರ ಸೇವಕನೆನಿಸೆ,

ವ್ಯೋಮಜ ರಮಣಿ – ಆಕಾಶದಿಂದ ಹುಟ್ಟಿದವನಾದ ವಾಯುವಿನ ಹೆಂಡತಿ,

## ಪದಸಂಖ್ಯೆ ೧೨೬ :

ಹುಟ್ಟು ಬಡವವ– ಬಲ್ಲವ, ಅಡುಗೆ ಮಾಡುವವ, ಬಾಣಸಿಗ, ಭೀಮ,

ತುರ್ಯಾಶ್ರಮ – ಯತ್ಯಾಶ್ರಮ

ಇದೊಂದು ನಿಂದಾಸ್ತುತಿರೂಪದ ಪದ.

## ಪದಸಂಖ್ಯೆ ೧೨೭ :

## ರುದ್ರದೇವರ ಸ್ತೋತ್ರ :

ಕಂತುಪಿತ – ಪ್ರದ್ಯುಮ್ನ

ಮಾಣು – ನಿವಾರಿಸು,

ಭಾರತಿ ವಾಯುದೇವರಿಂದ ಹುಟ್ಟಿದ ರುದ್ರದೇವರು ಅಹಂಕಾರ ತತ್ವದಿಂದ ಹುಟ್ಟಿದವರು. ಇವರು ಮನೋಭಿಮಾನಿ ದೇವತೆ.

'ದಂತಿಚರ್ಮ ಹೊದ್ದ' – ಮಹಿಷಾಸುರನ ಮಗನಾದ ಗಜಾಸುರನನ್ನು ಕೊಂದು ಆತನ ಇಚ್ಛೆ ಯಂತೆ ಅವನ ಚರ್ಮವನ್ನು ಹೊದ್ದು ಗಜಚರ್ಮಾಂಬರ ಎನಿಸಿದನು.

## ಪದಸಂಖ್ಯೆ ೧೨೮ :

ಬಾಣಾ – ಐದು, ವದನ, ಪಂಚಮುಖ ಶಿವ,

ಕುಧ್ರೇಡ್ಜ – ಕುಧ್ರೇಟ್ – ಪರ್ವತರಾಜ

ಜೆ – ಪಾರ್ವತಿ,

ಋಷೀಜ – ವಜ್ರಾಯುಧ, ದಧೀಚಿಯ ಅಸ್ತಿಯಿಂದ ಆದದ್ದು,

ಕುಜ – ಮಂಗಳ,

ಗಜ – ಅಷ್ಟಗಜ, ೮

ಋಷಿ – ಸಪ್ತರ್ಷಿಗಳು, ೭ – ೧೫,

ಅಂಬಿಕ – ಹದಿನೈದು ಕಣ್ಣುಗಳುಳ್ಳ ರುದ್ರದೇವರು,

ಅಜಿನಾಂಬರ – ಗಜಚರ್ಮಾಂಬರ ಶಿವ,

ಕಾಮಾರಿಮುಖ – ಷಣ್ಮುಖ,

ಜನಕ – ಶಿವ,

ವಿಜಯೇಕ್ಷಣ – ವಿಜಯ ದೃಷ್ಟಿವುಳ್ಳವ,

ಭೂಮಿಜವೈರಿಸಖ – ನರಕಾಸುರನ ವೈರಿಯಾದ ಶ್ರೀಕೃಷ್ಣನ ಸಖ.
ಸಾಮಜ ರಿಪು – ಗಜಾಸುರನ ವೈರಿ.
ಧನಿಕ ಮಿತ್ರ – ಕುಬೇರನ ಸಖ, ಶಿವ
ಸರೋಜಧ್ವಜ – ಮೀನವೇ ಧ್ವಜವಾಗಿ ಉಳ್ಳವ, ಕಾಮ, ಮನ್ಮಥ
ವಿರಾಮ – ನಾಶಮಾಡಿದವ,
ಘನನಿಭ – ಮೋಡದಂತೆ ಪ್ರಕಾಶಿಸುವ
ಅನುಗ – ಅನುಸರಿಸಿ ತಿರುಗುವವ,
ಅನಿಶ – ಯಾವಾಗಲೂ,
ಕುಧರ ಸದನ – ಪರ್ವತವನ್ನು ಮನೆ ಮಾಡಿ ಕೊಂಡಿರುವವ ರಜತಾದ್ರಿ ನಿಲಯ,
ನಾಕಪೋಷಾ – ದೇವತೆಗಳನ್ನು ಪೋಷಿಸುವವ,
ಬಾಣವದನ – ಪಂಚಮುಖ

ರುದ್ರದೇವರು ಐದು ಸಲ ದಿಕ್ಕೆಟ್ಟು ರೋದಿಸಿದುದರಿಂದ ಐದುಮುಖಗಳುಳ್ಳವನೆಂದು ಬ್ರಹ್ಮದೇವರು ನುಡಿದರು. ಆದ್ದರಿಂದ ರುದ್ರದೇವರಿಗೆ ಐದು ಮುಖಗಳೂ ಹತ್ತುಬಾಹುಗಳೂ ಉಂಟಾದವು.

ಬಾಣವರದ : ಬಲಿಚಕ್ರವರ್ತಿಯ ಮಗ ಬಾಣ. ಇವನೊಬ್ಬ ಅಸುರ. ಮಹಾ ಶಿವಭಕ್ತ. ಒಮ್ಮೆ ಷಣ್ಮುಖನನ್ನು ನೋಡಿ ತಾನೂ ಅವನಂತೆ ಶ್ರೇಷ್ಠನಾಗಬಯಸಿ ರುದ್ರದೇವರನ್ನು ಕುರಿತು ತಪವನ್ನಾಚರಿಸಿದಾಗ ರುದ್ರ ದೇವರು ಸಂತುಷ್ಟರಾಗಿ ಆತನ ಇಚ್ಛೆಯನ್ನು ಪೂರೈಸಿದರು.

ಋಷಿಜಾ – ತ್ವಷ್ಟನ ಯಜ್ಞದಿಂದ ವೃತ್ರಾಸುರನು ಹುಟ್ಟಿ ಬಂದು ದೇವತೆಗಳನ್ನು ಬಹಳ ಪೀಡಿಸತೊಡಗಿದನು. ದೇವತೆಗಳು ಶ್ರೀಹರಿಯನ್ನು ಪ್ರಾರ್ಥಿಸಿ, ಆತನಿಂದ ಬಿಡುಗಡೆಯನ್ನು ಬಯಸಿದರು.

ಶ್ರೀಹರಿಯ ಆಜ್ಞೆಯಂತೆ ದೇವೇಂದ್ರನು ದಧೀಚಿ ಮುನಿಗಳನ್ನು ಮೆಚ್ಚಿಸಿ ಅವರ ಬೆನ್ನೆಲುಬಿನಿಂದ ವಿಶ್ವಕರ್ಮನಿಗೆ ಹೇಳಿ ಒಂದು ಆಯುಧವನ್ನು ಮಾಡಿಸಿದನು. ಅದೇ ವಜ್ರಾಯುಧ. ಅದರಿಂದಲೇ ವೃತ್ರಾಸುರನ ವಧೆಯಾಯಿತು.

## ಪದಸಂಖ್ಯೆ ೧೨೯ :

ವಾಸವ – ದೇವೇಂದ್ರ
ಪದ್ಮಜಸುತ – ಬ್ರಹ್ಮನ ಮಗ, ರುದ್ರದೇವರು.
ದಿಜ್ಞಾಸನ – ದಿಗಂಬರ,
ವಿಯತ – ಆಕಾಶ,
ಪತಿ – ಗಣಪತಿ,
ಶ್ರೀಕಂಠ – ವಿಷಕಂಠ,
ಶ್ರೀ – ವಿಷ, ಶಿವ,
ತ್ರಿಯಂಬಕ – ಮೂರು ಕಣ್ಣುಳ್ಳವ, ದ್ರೋಣನ ಮಗ ಅಶ್ವತ್ಥಾಮ, ಈತನು ರುದ್ರಾಂಶನು

'ನೀ ಪೇಳಿದನ್ಯ ಶಾಸ್ತ್ರಕೆ'

ಹರಿ ಸರ್ವೋತ್ತಮನಲ್ಲವೆಂಬಶಾಸ್ತ್ರದತ್ತ ಮನಸ್ಸನ್ನು ಹರಿಯಗೊಡಬೇಡ ಎಂದರ್ಥ.

## ಪದಸಂಖ್ಯೆ ೧೩೦ :

ವಿಜಯ – ಅರ್ಜುನ,
ಜಾತವೇದಸ – ಅಗ್ನಿ,
ಕ್ಷಿತಿಧರಶರ – ಮೇರುಪರ್ವತವೇ ಧನುಸ್ಸಾಗಿಯುಳ್ಳವ,
ಕಪರ್ದಿ – ಜಟಾಜೂಟಧಾರಿ ಶಿವ,
ವಾರಿದ – ಮಳೆಯನ್ನು ಕೊಡುವವ, ಮೇಘ,
ಕುಶಂದನ – ಭೂಮಿ ರಥವಾಗಿದ್ದವ,
ಖಟವ – ಮಂಚ,
ಖಟವ ಪಾಣಿ – ಎಲುವಿನ ಗದಾಧರ,

ಮಹಾಭಾರತದಲ್ಲಿ ಕರ್ಣನ ಸಂಹಾರಕ್ಕಾಗಿ ಅರ್ಜುನನು ಪಾಶುಪತಾಸ್ತ್ರವನ್ನು ಪಡೆಯಲು ಇಂದ್ರಕೀಲ ಪರ್ವತದಲ್ಲಿ ರುದ್ರದೇವರನ್ನು ಕುರಿತು ಘನಘೋರವಾದ ತಪಸ್ಸನ್ನು ಮಾಡುತ್ತಾನೆ. ಆತನನ್ನು ಪರೀಕ್ಷಿಸಲು ಹರನು ಕಿರಾತ ವೇಷಧಾರಿಯಾಗಿ ಅದೇ ಕಾಡಿಗೆ ಬಂದು ಒಂದು ಹಂದಿಯ ಕಾರಣಕ್ಕಾಗಿ ಅರ್ಜುನನೊಡನೆ ಯುದ್ಧಕ್ಕೆ ನಿಲ್ಲುತ್ತಾನೆ. ಅರ್ಜುನನಿಗೆ ಸೋಲುಂಟಾಗುವಂತಾದಾಗ ಎದುರಾಳಿಯು ಶಿವನೇ ಎಂಬುದು ಗೋಚರವಾಗಿ ಅನನ್ಯ ಭಕ್ತಿಯಿಂದ ಆತನನ್ನು ಸ್ತುತಿಸಿ, ಆತನಿಂದ ಪಾಶುಪತಾಸ್ತ್ರ ಹಾಗೂ ಇತರ ಅಸ್ತ್ರಗಳನ್ನು ಪಡೆಯುತ್ತಾನೆ.

## ಪದಸಂಖ್ಯೆ ೧೩೧ :

ಜಯಗೀಷವ್ಯ – ರುದ್ರದೇವರ ಅವತಾರ,
ವಿಶ್ವೋಜನಕ – ಷಣ್ಮುಖನ ತಂದೆ
ಪಿನಾಕಿ – ಪಿನಾಕವೆಂಬ ಧನುವನ್ನು ಧರಿಸಿದವನು, ಶಿವ,
ಕ್ಷೋಣಿಸಂಧೃತ – ಪರ್ವತ
ಧ್ವನಿ – ಧನಸ್ಸು ಮಾಡಿ ಕೊಂಡವ,
ರೌಪ್ಯಪರ್ವತ – ಬೆಳ್ಳಿಬೆಟ್ಟ, ಕೈಲಾಸ,

ರುದ್ರದೇವರು ಅಹಂಕಾರ ತತ್ತ್ವಾಭಿಮಾನಿಗಳು. ಈ ಅಹಂಕಾರದಲ್ಲಿ ವೈಕಾರಿಕ, ತೈಜಸ, ತಾಮಸ ಎಂದು ಮೂರು ಪ್ರಕಾರಗಳಿವೆ.

ಅಹಂಕಾರ ತತ್ತ್ವವು ಕ್ರಿಯಾ ಪ್ರಧಾನವಾದುದು. ಇದರ ಸ್ವರೂಪವು ಭಾಗವತದಲ್ಲಿ ಬರುತ್ತದೆ.

## ಪದಸಂಖ್ಯೆ ೧೩೨ :

ಮಹಿಧರಪ ಜಾ – ಪರ್ವತರಾಜನ ಕುಮಾರಿ, ಪಾರ್ವತಿ,
ಕಕ್ಷ – ಅಡವಿ,
ದಕ್ಷ ಸಿದ್ಧ ಇಳಿರಥ – ಭೂಮಿಯನ್ನು

ರಥವನ್ನು ಮಾಡಿಕೊಂಡವ

ನಳನಂದಿನಿ ಪ – ನಳನಂದಿನಿ ಯಾದ ಭಾರತೀ ದೇವಿಯ ಪತಿ,

ಏಕ ಪಂಚಾಸ್ಯಜನಕ – ಒಂದು + ಐದು ಮುಖವುಳ್ಳ ಷಣ್ಮುಖನ ತಂದೆ, ಶಿವ,

ಅತ್ರಿಜ – ಅತ್ರಿಮುನಿಯ ಮಗ ದುರ್ವಾಸ,

ಅಮರಾಸ್ಯ – ದೇವತೆಗಳ ಮುಖ, ಅಗ್ನಿ,

ಅಮರಾಸ್ಯ ಚಂದ್ರ ದಿನ ಪತೇ ಕ್ಷಣನ – ಅಗ್ನಿ ಚಂದ್ರ ಸೂರ್ಯರೇ ನಯನಗಳಾಗಿರುವವನೆ,

ಹ – ಕೊಂದವ,

ಶಕ್ರಾವರಜ – ಇಂದ್ರನ ಹಿಂದೆ ಹುಟ್ಟಿದವ, ಉಪೇಂದ್ರ,

ನಕ್ರಾಹ – ಮೊಸಳೆಯನ್ನು ಕೊಂದ, ಶ್ರೀಹರಿ,

'ಅಂಧಕಾಸುರ ಗುಹ ಹ......'

ಅಂಧಕಾಸುರನೆಂಬ ಬಲಿಷ್ಟನಾದ ಅಸುರನು ಬ್ರಹ್ಮದೇವರಿಂದ ವರ ಪಡೆದು ಮದೋನ್ಮತ್ತನಾಗಿದ್ದನು. ಅವನ ಉಪಟಳ ದಿಂದ ಬೇಸತ್ತ ದೇವತೆಗಳು ಶಿವನ ಮೊರೆಹೊಕ್ಕರು. ಆ ಅಸುರನಿಗೂ ದೇವತೆಗಳಿಗೂ ಯುದ್ಧ ನಡೆದು, ಅಂಧಕಾಸುರನ ಮೈಯ ಹನಿಹನಿ ರಕ್ತದಿಂದಲೂ ಅಸಂಖ್ಯಾತ ಅಂಧಕರೂ ಎದ್ದರು. ಕೋಪೋದ್ರಿಕ್ತನಾದ ರುದ್ರದೇವರ ಬಾಯಿಂದ ಅಗ್ನಿಜ್ವಾಲೆ ಹೊರಟು ಯೋಗೇಶ್ವರಿ ಮುಂತಾದ ಅಷ್ಟ ಮಾತೃಕೆಗಳು ಹುಟ್ಟಿ ನೆಲದ ಮೇಲೆ ಬಿದ್ದ ಅಂಧಕನ ಮೈಯ ರಕ್ತವನ್ನು ಇಂಗಿಸಿದಾಗ ಮಹಾದೇವನಿಂದ ಅಂಧಕನು ಹತನಾದನು.

ಗುಹ ಎಂಬ ರಾಕ್ಷಸನಿದ್ದನು. ಅವನು ಇಂದಿನ ಹರಿಹರ ಪ್ರದೇಶದಲ್ಲಿ ವಾಸ ಮಾಡುತ್ತಿದ್ದನು. ಈತನೂ ತಪಸ್ಸಿನಿಂದ ಬ್ರಹ್ಮದೇವರನ್ನು ಮೆಚ್ಚಿಸಿ ತಾನು ಸಾಯ ದಂತೆ ವರವನ್ನು ಪಡೆದಿದ್ದೂ ದೇವಾನುದೇವತೆಗಳಿಗೆಲ್ಲಾ ಪೀಡೆಕೊಡು ತ್ತಿದ್ದನು. ದೇವತೆಗಳ ಪ್ರಾರ್ಥನೆಯಂತೆ ವಿಷ್ಣುವು ಬಲಭಾಗದಲ್ಲಿ ಶಂಕರನನ್ನಿಟ್ಟು ಕೊಂಡು ಹರಿಹರ ರೂಪದಿಂದ ಗುಹನೊಡನೆ ಯುದ್ಧಮಾಡಿ ಆತನನ್ನು ಕೆಡಹಿದಾಗ, ಅಸುರನು ಅದೇ ರೂಪದಿಂದ ಅಲ್ಲಿ ನಿಲ್ಲುವಂತೆ ಪ್ರಾರ್ಥಿಸಿ ಕೊಂಡನು. ಇದೇ ಹರಿಹರ ಕ್ಷೇತ್ರವಾಯಿತು.

## ಪದಸಂಖ್ಯೆ ೧೩೩ :

ನಿಂದಿತನ – ಚಂದ್ರನ,

ಉರುಗನಂತೆ – ಶೇಷನಂತೆ,

'ತಲೆತಂದೆ ಕಡಿದುದಕೆ......'

ರುದ್ರದೇವರ ತಂದೆ ಬ್ರಹ್ಮದೇವ. ಒಮ್ಮೆ ಬ್ರಹ್ಮದೇವನು ರುದ್ರದೇವನನ್ನು ಜರಿದನು. ಅದರಿಂದ ಕೋಪಗೊಂಡ ರುದ್ರನು ಬ್ರಹ್ಮನ ಒಂದು ಶಿರವನ್ನು ಕಡಿಯಲು ಅದು ಅವನ ಕೈಗೇ ಅಂಟಿಕೊಂಡಿತು. ಈ ಬ್ರಹ್ಮಹತ್ಯಾ

ದೋಷದಿಂದ ಮುಕ್ತನಾಗಲು ರುದ್ರನು ಭಿಕ್ಷಾಟನೆಯನ್ನು ಮಾಡಬೇಕಾಯಿತು. ಮುಂದೆ ಕಾಶಿಕ್ಷೇತ್ರದಲ್ಲಿ ಸ್ನಾನಮಾಡಿದಾಗ ಆ ಶಿರ ಕಳಚಿತು.

'ನಿಂದಿತನ ಶಿರವ ಮೇಲಿರಿಸಿ.....'

ಹಿಂದೊಮ್ಮೆ ಸುರಗುರುಗಳಾದ ಬ್ರಹ್ಮಸ್ಪತ್ಯಾಚಾರ್ಯರ ಪತ್ನಿಯಾದ ತಾರಾದೇವಿಯ ಸೌಂದರ್ಯಕ್ಕೆ ಮನ ಸೋತು ಚಂದ್ರನು ಆಕೆಯನ್ನು ಕಾಮಿಸಿದನು. ಆ ಪತಿವ್ರತೆಯು ಆತನನ್ನು ಶಪಿಸಿದಳು. ಮುಂದೆ ಶುಕ್ರಾಚಾರ್ಯರನ್ನು ಕಂಡು ತನ್ನ ಅಪರಾಧವನ್ನು ಅರುಹಿದನು. ಶುಕ್ರಾಚಾರ್ಯರು ದೇವತೆಗಳಿಂದ ಚಂದ್ರ ನನ್ನು ರಕ್ಷಿಸಲು ದೈತ್ಯಸೈನ್ಯವನ್ನು ಕರೆದರು. ಯುದ್ಧ ನಡೆಯಿತು. ಶಿವನು ಚಂದ್ರನನ್ನು ತನಗೆ ಒಪ್ಪಿಸಲು ಹೇಳಿದಾಗ ಶುಕ್ರಾಚಾರ್ಯರು ಹಾಗೆಯೇ ಮಾಡಿದರು. ಶಿವನು ಚಂದ್ರನಿಗೆ ಅಭಯವನ್ನಿತ್ತು ಅವನ ದೋಷ ನಿವಾರಣೆಯನ್ನು ಮಾಡಿದನು. ಅನಂತರ ಯೋಗಬಲ ದಿಂದ ಅವನನ್ನು ಎರಡು ಭಾಗಮಾಡಿ ಒಂದನ್ನು ತನ್ನ ಶಿರದಲ್ಲಿ ಧರಿಸಿದನು. ಉಳಿದರ್ಧ ಭಾಗವನ್ನು ಬ್ರಹ್ಮನ ಮುಂದಿಟ್ಟನು.

ಅರಿಧರ – ಚಕ್ರಧರ

## ಪದಸಂಖ್ಯೆ ೧೩೪ :

ಲಿಂಗ ಅಧಾರಣ ಮಾಡಿ – ಲಿಂಗದೇಹ ಧರಿಸಿದಂತೆ ಮಾಡಿ, ಲಿಂಗ ಭಂಗ ಮಾಡಿಕೊಂಡು,

ಜಂಗಮರಧಿಕಾರಸಾರಿ – ಚೇತನರಲ್ಲಿ ಅಧಿಕರಾದ ವೈಷ್ಣವರ ಸಾರಿ,

ರುದ್ರಾಕ್ಷಿಯಂಗಳ ಅರ್ಚಿಸುತ – ರುದ್ರನ ಅಕ್ಷಿಗಳು ಮೂರು, ಚಂದ್ರ, ಸೂರ್ಯ, ಅಗ್ನಿ, ಇವುಗಳನ್ನು ಅರ್ಚಿಸುತ.

ಸುವಿವೇಕ ಮನಸ್ಸಿಲಿಂದ – ಸಚ್ಛಾಸ್ತ್ರದಲ್ಲಿ ಮನಸಿಟ್ಟ,

'ಶಿವಶಬ್ದವ ಶೋಧಿಸಿ'

ಶಿವ – ಮಂಗಳ

ಕೋವಿದರ ಮುಖದಿಂದ ತಾನು ಅದನ್ನು ಆಲೋಚಿಸಿ ಶಿವಶ್ಚ ನಾರಾಯಣ ಎಂಬ ವಾಕ್ಯದಂತೆ,

'ಕವಿಗಳ.......'

ಕ – ಬ್ರಹ್ಮ,

ವಿ – ವಿಚಾರಪರರು,

'ಭಜಿಸೊ ವಿಭೂತಿಯನ್ನು'

ಭಗವಂತನ ದಶವಿಧ ವಿಭೂತಿ ರೂಪಗಳನ್ನು ಭಜಿಸು. (ನೀತ, ಸಾಧಾರಣ, ವಿಶೇಷ ಮೊದಲಾದ ದಶವಿಧ)

ದ್ವಿಜ – ಬ್ರಹ್ಮನಿಂದ ಎರಡನೆಯ ಬಾರಿ ಹುಟ್ಟಿದವರು, ಬ್ರಹ್ಮವಿದ್ಯೆ ಇಲ್ಲದ ವರು. ಇಂತಹವರಿಗೆ ಎರಗದಿರು.

ಪ್ರಜಗಳಿಗೆ.... ಭಾವ : ಲೋಕದ ಜನರಿಗೆ ನಿನ್ನ ಇಂಗಿತವನ್ನು ತೋರದಿರು.

ಅಜ – ಜನನವಿಲ್ಲದವ,

ಪ್ರಾಣೇಶವಿಠಲ

## ಪದಸಂಖ್ಯೆ ೧೩೭ :

### ಪಾರ್ವತಿದೇವಿಯ ಸ್ತೋತ್ರ :

ಕುಜನಾರಿ – ದುರ್ಜನ ವೈರಿ

ದೂರ್ವಾಸ–
ನರ್ಧಾಂಗಿ – ವಸನದಿಂದ ದೂರವಾದವನ ಪತ್ನಿ

ಅಪವರ್ಗ – ಮುಕ್ತಿ

ಕೈಕೊಂಡ
ಔಷಧ – ರಾಮನಾಮ

ರೂಢೀಶ – ಭೂಮಿ ಪತಿ

'ದಕ್ಷ ಕುಮಾರಿ.... ' – ಬ್ರಹ್ಮದೇವನು ತನ್ನ ಪುತ್ರಿಯಾದ ಗೌರಿಯನ್ನು ದಕ್ಷನಿಗೆ ದತ್ತು ಕೊಟ್ಟನು. ಆದ್ದರಿಂದ ಆಕೆ ದಾಕ್ಷಾಯಣಿಯಾದಳು.

"ಉಂಡು ವಿಷಾವ – ಕೈಕೊಂಡೌಷಧ"

ಸಮುದ್ರಮಥನದ ಕಾಲದಲ್ಲಿ ಹುಟ್ಟಿದ ಕಾಲಕೂಟವಿಷದ ಉಗ್ರತೆಯನ್ನು ವಾಯುದೇವರು ಕಡಿಮೆಮಾಡಿದ ಅನಂತರ ರುದ್ರದೇವರು ಸೇವಿಸಿದರು. ಅನಂತರ ಕಾಮದೇವರ ಜಪದಿಂದ ರುದ್ರದೇವರಿಗೆ ಶಾಂತಿಯುಂಟಾಯಿತು ?

'ಪಾವಕನೊಳು ಪೊಕ್ಕ ಪತಿವ್ರತೆ' – ದಕ್ಷಬ್ರಹ್ಮನು ತಾನು ಮಾಡುತ್ತಿದ್ದ ಯಜ್ಞಕ್ಕೆ ಉಮಾ–ಶಂಕರರನ್ನು ಆಹ್ವಾನಿಸಲಿಲ್ಲ. ಪುತ್ರಿಯಾದ ಉಮೆಗೆ ತಂದೆಯ ಮನೆಗೆ ಹೋಗುವ ಆಸೆ ತಡೆಹಿಡಿಯಲಾಗದೆ. ಶಂಕರನ ಮಾತನ್ನು ಮೀರಿ ಯಜ್ಞಕ್ಕಾಗಿ ಹೋದಳು. ಅಲ್ಲಿ ಆಕೆಯನ್ನು ತಂದೆ ಸ್ವಾಗತಿಸಲಿಲ್ಲ. ರುದ್ರನಿಗೆ ಆಹುತಿಯನ್ನು ಕೊಡಲಿಲ್ಲ. ಇದರಿಂದ ಕುಪಿತಳಾದ ದಾಕ್ಷಾಯಿಣಿಯು ಯಜ್ಞಕುಂಡದಲ್ಲಿ ಹಾರಿಕೊಂಡಳು.

## ಪದಸಂಖ್ಯೆ ೧೪೦ :

ಧಾತಜ – ನಾರದ,

ತಾತ – ತಂದೆ,

ಶೌರಿ – ಕೃಷ್ಣ

ಬಾ – ಬಾಣಾಸುರ,

## ಪದಸಂಖ್ಯೆ ೧೪೧ :

ಸೌಪರಣೀ, ವಾರುಣೀ ಪಾರ್ವತೀ ದೇವಿಯರ ಸ್ತೋತ್ರ ಸೌಪರಣಿ – ಗರುಡನ ಪತ್ನಿ : ವಾರುಣಿ – ಶೇಷನ ಪತ್ನಿ ಈ ಮೂವರೂ ಏಳನೆಯ ಕಕ್ಷೆಯಲ್ಲಿ ಬರುವ ದೇವತೆಗಳು ಹಾಗೂ ಬುದ್ಧಿಯ ಅಭಿಮಾನಿಗಳು.

## ಪದಸಂಖ್ಯೆ ೧೪೨ :

### ಶ್ರೀತುಲಸೀದೇವಿಯ ಸ್ತೋತ್ರ :

'ಧನುವಂತರಿ.........' – ಕ್ಷೀರಸಾಗರ ಮಥನದ ಸಮಯದಲ್ಲಿ ಪರಮಾತ್ಮನು ಕೈಯಲ್ಲಿ ಅಮೃತ ಕಲಶವನ್ನು ಹಿಡಿದು ಧನ್ವಂತರಿಯ ರೂಪದಿಂದ ಪ್ರಕಟವಾದನು. ಅನಂತರ ಆವಿರ್ಭೂತಳಾದ ಮಹಾಲಕ್ಷ್ಮಿಯು ಪರಮಾತ್ಮನ ಕೊರಳಲ್ಲಿ ಪದ್ಮಮಾಲಿಕೆಯನ್ನು ಹಾಕಿ ವಿವಾಹವಾದಾಗ ಪರಮಾತ್ಮನ ಕಣ್ಣಿನಿಂದ

ಆನಂದಬಾಷ್ಪಗಳು ಸುರಿದವು. ಅವು ಮೊದಲು ಆತನ ಕೈಯಲ್ಲಿಯ ಕಲಶದಲ್ಲಿ ಬಿದ್ದು ಭೂಮಿಗೆ ಉದುರಿಸಲು ಅವುಗಳಿಂದ ತುಲಸೀದೇವಿ ಹುಟ್ಟಿದಳು.

ತುಲಸೀದೇವಿಯ ಅವತಾರಕ್ಕೆ ಸಂಬಂಧಪಟ್ಟ ಇನ್ನೊಂದು ಕಥೆ ಹೀಗಿದೆ. ಜಲಂಧರನೆಂಬ ಅಸುರನು ತನಗೆ ಮರಣವೇ ಬರಬಾರದೆಂದು ಬ್ರಹ್ಮದೇವರನ್ನು ಕೇಳಿಕೊಂಡಾಗ ಆತ ನಿನ್ನ ಹೆಂಡತಿಯ ಪಾತಿವ್ರತ್ಯ ಕೆಟ್ಟ ಹೊರತು ನಿನಗೆ ಮರಣವಿಲ್ಲವೆಂದು ನುಡಿದನು.

ಆದರೆ ಈ ವರದಿಂದ ಮತ್ತನಾದ ಅಸುರನು ದೇವತೆಗಳಿಗೆ ಬಹಳ ಉಪಟಳ ಕೊಡ ಹತ್ತಿದನು. ಅವನ ಶಾಸ್ತಿಗಾಗಿ ಪರಮಾತ್ಮನು ಜಲಂಧರನ ರೂಪದಿಂದ ಅವನ ಪತ್ನಿ ವೃಂದಾ ದೇವಿಯನ್ನು ಕೂಡಿ ಆಕೆಯ ಪಾತಿವ್ರತ್ಯವನ್ನು ಹಾಳು ಮಾಡಿದನು. ಅದರಿಂದ ನೊಂದ ವೃಂದಾ ದೇವಿಯು ಪರಮಾತ್ಮನನ್ನು ಕಲ್ಲಾಗುವಂತೆ ಶಪಿಸಿದಳು.

ಪರಮಾತ್ಮನು ಆಕೆಯನ್ನು ತುಳಸಿಯಲ್ಲಿ ಸನ್ನಿಹಿತಳಾಗುವಂತೆ ವರವನ್ನು ನೀಡಿ ಅನಂತರ ಜಲಂಧರನನ್ನು ಸಂಹರಿಸಿದನು. ಆಕೆಯ ಶಾಪವನ್ನು ಸಾರ್ಥಕಮಾಡಲು ತಾನು ಗಂಡಕೀ ನದಿಯಲ್ಲಿ ಶಾಲಿಗ್ರಾಮ ರೂಪದಿಂದ ಪ್ರಕಟವಾದನು.

## ಪದಸಂಖ್ಯೆ ೧೪೩ :

## ಷಣ್ಮಹಿಷಿಯರ ಸ್ತೋತ್ರ :

ಜಾಂಬವತಿ, ನೀಲ, ಭದ್ರಾ, ಮಿತ್ರವೃಂದಾ, ಕಾಳಿಂದಿ ಲಕ್ಷಣಾ ಇವರು ಶ್ರೀಕೃಷ್ಣನ ಆರು ಜನ ಮಹಿಷಿಯರು.

**ಜಾಂಬವತಿ** : ಮೊದಲು ಸೋಮಪುತ್ರಿಯಾಗಿ ಅವತರಿಸಿ, ಜಿತೇಂದ್ರಿಯಳಾಗಿ, ಶ್ರೀಹರಿಯನ್ನು ಕುರಿತು ತಪಸ್ಸು ಮಾಡಿ ದೇಹತ್ಯಾಗ ಮಾಡಿದಳು. ಅನಂತರ ಜಾಂಬುವಾನನ ಮನೆಯಲ್ಲಿ ಜಾಂಬುವತಿಯಾಗಿ ಹುಟ್ಟಿದಳು. ಮುಂದೆ ಶ್ರೀಕೃಷ್ಣನ ಪತ್ನಿಯಾದಳು.

**ನೀಲದೇವಿ** : ಕುಮಾರಿಯಾಗಿರುವಾಗಲೇ ಶ್ರೀಕೃಷ್ಣನನ್ನು ಮದುವೆಯಾಗುವ ಇಚ್ಛೆಯಿಂದ ತಪಸ್ಸನ್ನು ಮಾಡಿದಳು.

ದ್ವಾಪರಯುಗದಲ್ಲಿ ನಂದಗೋಪನ ಮೈದುನನ ಮಗಳಾಗಿ ಹುಟ್ಟಿದಾಗ ಶ್ರೀಕೃಷ್ಣನು ಈಕೆಯನ್ನು ವಿವಾಹ ಮಾಡಿಕೊಂಡನು.

**ಭದ್ರಾ** : ಇವಳು ನಲ ಎಂಬವನ ಪುತ್ರಿಯಾಗಿದ್ದು ವಿಷ್ಣುವನ್ನೇ ಪತಿಯಾಗಿ ಪಡೆಯಬೇಕೆಂದು ಅಸಾಧ್ಯವಾದ ವ್ರತವನ್ನು ಮಾಡಿದಳು. ದ್ವಾಪರದಲ್ಲಿ ವಸುದೇವನ ತಂಗಿಯಲ್ಲಿ ಭದ್ರಾ ಎಂಬ ಹೆಸರಿನಿಂದ ಹುಟ್ಟಿದಳು ? ಶ್ರೀಕೃಷ್ಣನು ಈಕೆಯನ್ನು ಪತ್ನಿಯಾಗಿ ಸ್ವೀಕರಿಸಿದನು.

**ಮಿತ್ರವಿಂದಾ** : ಶ್ರೀಹರಿಯ ಪ್ರಾಪ್ತಿಗಾಗಿ ಸದಾ ಪುರಾಣಶ್ರವಣ ಮಾಡುತ್ತಿದ್ದಳು. ಈಕೆ ಅಗ್ನಿಷ್ವಾತ್ ಎಂಬ ರಾಜನ ಮಗಳು ಮುಂದೆ ಈಕೆಯೂ ವಸುದೇವನ ತಂಗಿಯಲ್ಲಿ ಹುಟ್ಟಿ ಶ್ರೀಕೃಷ್ಣನನ್ನೇ ಪತಿಯಾಗಿ ಹೊಂದಿದಳು.

**ಕಾಳಿಂದಿ** : ವಿವಸ್ವಾನ ಹೆಸರಿನ ಸೂರ್ಯನ ಪುತ್ರಿ, ಯಮುನಾ ದೇವಿಯ ತಂಗಿಯಾಗಿ ಜನಿಸಿದಳು. ಅಲ್ಲಿಗೆ ಬೇಟೆಗೆ ಬಂದ

ಅರ್ಜುನ ಆಕೆಯ ಇಚ್ಛೆಯನ್ನು ತಿಳಿದು, ಶ್ರೀಕೃಷ್ಣನೊಡನೆ ಆಕೆಯನ್ನು ವಿವಾಹ ವಾಗುವಂತೆ ಹೇಳಿದಾಗ, ಕೃಷ್ಣ ಆಕೆಯನ್ನು ಪಡೆದನು.

**ಲಕ್ಷಣ** : ಈಕೆ ಬರ್ಹಿಷ್ಟತು ರಾಜನ ಮಗಳು ? ಲಕ್ಷಣಯುಕ್ತಳಾದ ಈಕೆ ಶ್ರೀಹರಿಯನ್ನು ಮದುವೆಯಾಗಬಯಸಿ ದ್ವಾಪರದಲ್ಲಿ ಮದ್ರರಾಜಪುತ್ರಿಯಾಗಿ ಶ್ರೀಕೃಷ್ಣನನ್ನು ಮದುವೆಯಾದಳು.

## ಪದಸಂಖ್ಯೆ ೧೪೪ :

## ಕಾಮದೇವನ ಸ್ತೋತ್ರ :

ಸುದರುಶನ – ಸುದರ್ಶನ ಚಕ್ರ,

ಭವನಜ – ಅರವಿಂದ

ಉಡುಗಣ – ನಕ್ಷತ್ರ ಸಮೂಹ,

ಕಾಮದೇವನು ಅನಿರುದ್ಧನ ತಂದೆ, ಈತನಿಗೆ ಪ್ರದ್ಯುಮ್ನನೆಂದೂ ಹೆಸರು. ಈತನೇ ಕೃಷ್ಣಕುಮಾರ.

ಶ್ರೀರಾಮನ ತಮ್ಮ ಭರತ, ಸನಕಾದಿಗಳಲ್ಲೊಬ್ಬನಾದ ಸನತ್ಕುಮಾರ, ಸುದರ್ಶನ ಚಕ್ರಾಭಿಮಾನಿ, ಹರಪುತ್ರನಾದ ಷಣ್ಮುಖ, ಶ್ರೀಕೃಷ್ಣನ ಮಗನಾದ ಪ್ರದ್ಯುಮ್ನ – ಇವು ಕಾಮದೇವನ ಐದು ಅವತಾರಗಳು.

'ಮೀನಿನ ಬಸಿಕೊಳು ಪೊಕ್ಕೆ'

ಹಿಂದೆ ರುದ್ರದೇವನ ಕೋಪಾಗ್ನಿಯಿಂದ ಭಸ್ಮನಾದ ಕಾಮದೇವನು ರುಕ್ಮಿಣಿ ದೇವಿಯ ಹೊಟ್ಟೆಯಿಂದ ಮೋಹನಾಕಾರ ನಾಗಿ ಹುಟ್ಟಿ ಬಂದನು. ಇವನೇ ಪ್ರದ್ಯುಮ್ನ. ಶಂಬರಾಸುರನೆಂಬ ದೈತ್ಯನು ಈತನಿಂದಲೇ ತನಗೆ ಮೃತ್ಯುವೆಂದು ತಿಳಿದು ಹುಟ್ಟಿದ ಆರನೆಯ ದಿನವೇ ಮಗುವನ್ನು ಎತ್ತಿ ಲವಣ ಸಮುದ್ರ ಕೆಸೆದನು. ಒಂದು ಮೀನು ಆ ಮಗು ವನ್ನು ನುಂಗಿತ್ತು. ಕೈಗೆ ಸಿಕ್ಕ ಮೀನನ್ನು ಮೀನುಗಾರನು ತನ್ನ ಅರಸನಾದ ಶಂಬರಾಸುರನಿಗೆ ಅರ್ಪಿಸಿದನು.

ಈ ಶಂಬರಾಸುರನ ಹೆಂಡತಿ ಪೂರ್ವಜನ್ಮದಲ್ಲಿ ರತಿಯಾಗಿದ್ದಳು. ಈಗ ಈಕೆಗೆ ಮಾಯವತಿಯೆಂಬ ಹೆಸರು. ಈಕೆ ಕಾಮದೇವನ ಆಗಮನಕ್ಕಾಗಿ ಕಾಯುತ್ತಿದ್ದಳು. ಮೀನಿನ ಬಸುರಿನಲ್ಲಿದ್ದ ಸುಂದರವಾದ ಮಗುವಿನ ಅವತಾರದ ವಿಷಯವನ್ನು ನಾರದರಿಂದ ತಿಳಿದು ಅದಕ್ಕೆ ಸಕಲ ಮಾಯಾವಿದ್ಯೆಗಳನ್ನು ಕಲಿಸಿ ಅದರಲ್ಲಿ ಮೋಹಿತಳಾದಳು. ಪ್ರದ್ಯುಮ್ನನು ಶಂಬರಾಸುರನನ್ನು ಕೊಂದು ಮಾಯಾವತಿಯೊಡನೆ ದ್ವಾರಕೆಗೆ ತೆರಳಿದನು.

'ಭುವನಜ.....' – ಭುವನಜ (ಅರವಿಂದ, ಅಶೋಕ, ಚೂತ, ನವಮಲ್ಲಿಕಾ ನೀಲೋತ್ಪಲ) ಇವು ಕಾಮನ ಪಂಚ ಬಾಣಗಳು.

## ಪದಸಂಖ್ಯೆ ೧೪೫ :

## ಇಂದ್ರದೇವನ ಸ್ತೋತ್ರ :

ಶಚಿ ವಲ್ಲಭ – ಶಚಿಯ ಪತಿ, ಇಂದ್ರ,

ಉತ್ತಮ ಶ್ಲೋಕ – ಪರಮಾತ್ಮ,

ಚಾರು – ಮನೋಹರ.

ಸೂರಿಗಮ್ಯ – ಪಂಡಿತರಿಂದ ಗಮನಿಸತಕ್ಕ.

'ಹತ್ತು ಕಲ್ಪಗಳಲ್ಲಿ.......' – ಹತ್ತು ಮನು ಕಲ್ಪಗಳಲ್ಲಿ ಇಂದ್ರನು ಸುನಂದನೆಂಬ ಹೆಸರಿನಿಂದ ರುದ್ರದೇವರಲ್ಲಿ ಭಗವಂತನ ಗುಣಾತಿಶಯಗಳನ್ನು ಕೇಳಿದನು. ಮುಂದೆ ನಾಲ್ಕು ಕಲ್ಪಗಳಲ್ಲಿ ತಪಸ್ಸು ಮಾಡಿ ನಾರಾಯಣನನ್ನು ಒಲಿಸಿದನು.

'ಪೊಗೆಯನುಂಡು.......' – ದೇವಮಾನ ದಿಂದ ಒಂದು ಕೋಟಿ ವರ್ಷ ಹೊಗೆ ಯಲ್ಲಿ ಕುಳಿತು, ಘನವಾದ ತಪಸ್ಸು ಮಾಡಿ ಮಹಾಲೋಕವನ್ನು ಹೊಂದಿದನು.

## ಪದಸಂಖ್ಯೆ ೧೪೬ :

## ಶೇಷದೇವರ ಸ್ತೋತ್ರ :

ಅಹಂಕಾರತತ್ತ್ವದಲ್ಲಿ ಶೇಷದೇವರು ಜೀವಾಭಿಮಾನಿಗಳಾಗಿದ್ದಾರೆ. ಶೇಷ ದೇವರಿಗೆ ಮೂರು ಅವತಾರಗಳು.

ನರ – ಶ್ಯಾಮಲಾ (ಮೂರ್ತಾದೇವಿ) ದೇವಿಯಲ್ಲಿ ಯಮದೇವರಿಂದ ಹುಟ್ಟಿ ನರ ಎಂದು ಹೆಸರಾದವರು.

ಬಲರಾಮ – ಕೃಷ್ಣನ ಅಣ್ಣ, ರೋಹಿಣಿಯ ಮಗ. ಬಲರಾಮನು ಶೇಷಾವತಾರ.

ಲಕ್ಷ್ಮಣ – ತ್ರೇತಾಯುಗದಲ್ಲಿ ಶ್ರೀರಾಮನ ತಮ್ಮ ನಾಗಿ ಸುಮಿತ್ರೆ ಯಲ್ಲಿ ಜನಿಸಿದ ಶೇಷದೇವ

## ಪದಸಂಖ್ಯೆ ೧೪೭ :

## ಗರುಡದೇವರ ಸ್ತೋತ್ರ :

ಅಹಂಕಾರ ತತ್ತ್ವಾಭಿಮಾನಿಯಾದ ಗರುಡದೇವನು ಭಾರತಿ ಹಾಗೂ ವಾಯುದೇವರಿಂದ ಹುಟ್ಟಿದವನು. ಪರಮಾತ್ಮನನ್ನು ಆರಾಧಿಸಿ ಪ್ರಸಾದ ಪಡೆದನು. ಈತನಿಗೆ ಭೂಮಿಯ ಮೇಲೆ ಅವತಾರವಿಲ್ಲ.

ಗರುಡದೇವನ ಕಥೆ ಈ ರೀತಿಯಾಗಿದೆ.

ಲೋಕದಲ್ಲಿ ಪ್ರಜೋತ್ಪಾದನೆಗಾಗಿ ಕಶ್ಯಪ ಋಷಿಯು ಹದಿಮೂರು ಜನ ದಕ್ಷಪುತ್ರಿ ಯರನ್ನು ಮದುವೆಯಾಗಿದ್ದನು. ಅವರಲ್ಲಿ ಕದ್ರೂದೇವಿಯು ಸಾವಿರಾರು ನಾಗರ ಗಳನ್ನು ಹೆತ್ತಳು. ವಿನತೆ ಮಾತ್ರ ಎರಡು ಮೊಟ್ಟೆಗಳನ್ನಿಟ್ಟಳು. ಸವತಿ ಮಾತ್ಸರ್ಯ ದಿಂದ ತನಗೆ ಮಕ್ಕಳಾಗಲಿಲ್ಲವೆಂದು ಒಂದು ಮೊಟ್ಟೆಯನ್ನು ಒಡೆದಾಗ ಕಾಲು ಗಳಿಲ್ಲದ ಮಗ ಹುಟ್ಟಿದ. ಆ ಬಾಲಕ ತನ್ನ ತಾಯಿಗೆ ಐದು ವರ್ಷಗಳ ಕಾಲ ಸವತಿಯ ದಾಸಿಯಾಗಿರುವಂತೆ ಶಾಪಕೊಟ್ಟ.

ಕೆಲಕಾಲ ಕಳೆದನಂತರ ವಿನತೆಯ ಎರಡನೆಯ ಮೊಟ್ಟೆಯು ಒಡೆದು ಗರುಡನು ಹುಟ್ಟಿದ. ತನ್ನ ತಾಯಿಯ ದಾಸ್ಯವನ್ನು ಕಂಡ ಅವನು ಕದ್ರು ಹೇಳಿದಂತೆ ಆಕೆಯ ಮಕ್ಕಳಿಗೆ ಅಮೃತ ವನ್ನು ತಂದು ಕೊಡಲು ಒಪ್ಪಿದ.

ಒಮ್ಮೆ ಬಹಳ ಹಸಿದ ಈತ ತಂದೆ ಕಶ್ಯಪರ ಹೇಳಿಕೆಯಂತೆ ಹತ್ತಿರದಲ್ಲಿದ್ದ ಕೊಳದಲ್ಲಿಯ ಆಮೆ ಹಾಗೂ ನೀರು ಕುಡಿಯಲು ಬರುತ್ತಿದ್ದ ಆನೆಯನ್ನು ತಿನ್ನಬೇಕೆಂದು ಅವೆರಡನ್ನು ತನ್ನ ಕಾಲುಗಳಿಂದ ಹಿಡಿದುಕೊಂಡು ಹಾರುತ್ತ ಹೋಗಿ ಬಂದು ಆಲದ ಮರದ ಮೇಲೆ ಕುಳಿತಿದ್ದನು. ತಕ್ಷಣ ಆ ಮರ ಸದ್ದು ಮಾಡುತ್ತ ಮುರಿದು ಬಿದ್ದಿತು. ಅದೇ ರೆಂಬೆ ತಲೆಗಾಗಿ ತಪಸ್ಸು ಮಾಡುತ್ತಿದ್ದ ವಾಲಖಿಲ್ಯರೆಂಬ ಅರವತ್ತು ಸಾವಿರ ತಪೋಧನರನ್ನು ಕಂಡು ಕರುಣೆಯಿಂದ ಆ ರೆಂಬೆಯನ್ನು ತೆಗೆದುಕೊಂಡು ತಂದೆಯ ಆಶ್ರಮಕ್ಕೆ ಹೋದಾಗ ಕಶ್ಯಪರು ವಾಲಖಿಲ್ಯರನ್ನು ಪೂಜಿಸಿ ಹಿಮ ಪರ್ವತಕ್ಕೆ ಕಳುಹಿಸಿದರು.

ಗರುಡನು ಆ ಆಮೆಗಳನ್ನು ತಿಂದು ಅಮೃತಕಲಶವನ್ನು ತರಲು ದೇವಲೋಕಕ್ಕೆ ಹಾರಿದ. ಅವನ ಸಾಹಸಕ್ಕೆ ಮೆಚ್ಚಿ ಮಹಾವಿಷ್ಣುವು ಆತನು ತನ್ನ ರಥದ ಮೇಲಿನ ಧ್ವಜದಲ್ಲಿ ಲಾಂಛನವಾಗಿಯೂ, ತನ್ನ ವಾಹನವಾಗಿಯೂ ಇರುವಂತೆ ಅನುಗ್ರಹಿಸಿದನು.

## ಪದಸಂಖ್ಯೆ ೧೪೪ :

## ಮಧ್ವರಾಯರ ಸ್ತುತಿ :

ನಿರ್ಜರರು – ದೇವತೆಗಳು (ಮುಪ್ಪಿಲ್ಲದವರು)

ವಾರಿಜಾಸನ – ಕಮಲಾಸನ, ಬ್ರಹ್ಮ

ಈರೇಳು – ಹದಿನಾಲ್ಕು

ದ್ವಿಸಪ್ತ – ಹದಿನಾಲ್ಕು

ಶೃತಸೋಮ – ದ್ರೌಪದಿಯಲ್ಲಿ ಭೀಮಸೇನನಿಂದ ಜನಿಸಿದ ಮಗ.

ನಾರನಾಗ – ಮುಕ್ತನಾಗ,

ಪ್ರಾಣಿ – ಮುಖ್ಯ ಪ್ರಾಣ ದೇವರು.

'ನೂರಾತ್ತೊಂಬತ್ತೆಂಟು.... ವಾರಿಜಾಸನನಾದಿ.'

ಕಕ್ಷಾತಾರತಮ್ಯದ ಪ್ರಕಾರ ಮೂರನೆಯ ಕಕ್ಷೆಯಲ್ಲಿ ಬರುವ ಋಜುಗಣಸ್ತರು ಒಂದು ಕಲ್ಪದಲ್ಲಿ ೨೦೦ ಜನರಿರುತ್ತಾರೆ.

ವಾಯು ನೂರು ಬ್ರಹ್ಮಕಲ್ಪಗಳ ಕಾಲ ಸಾಧನ ಮಾಡಿದ ನಂತರ ಕಲ್ಕಿ ಎಂಬ ಋಜುವೆನಿಸುತ್ತಾರೆ. ನೂರನೆಯ ಬ್ರಹ್ಮಕಲ್ಪದಲ್ಲಿ 'ಕಲ್ಕಿ ಪದಯೋಗ್ಯ ಋಜು' ಎಂದು ಕರೆಸಿಕೊಳ್ಳುತ್ತಾರೆ. ಅಂದರೆ ಸಾಮಾನ್ಯ ಋಜುವಾಗಿದ್ದಾಗಿನಿಂದ ವಾಯು ಪದಕ್ಕೆ ಬರುವವರೆಗೆ ಇವರ ಸಾಧನದ ಅವಧಿ ೧೯೮ ಬ್ರಹ್ಮಕಲ್ಪ ಎಂಬುದು ದಾಸರ ಅಭಿಪ್ರಾಯ. ೧೯೯ ನೆಯ ಬ್ರಹ್ಮಕಲ್ಪದಲ್ಲಿ ಇವರು ವಾಯುಪದವಿಯಲ್ಲಿರುತ್ತಾರೆ. ಆಗ ಹನುಮ, ಭೀಮ, ಮಧ್ವ ಮೂರು ಮುಖ್ಯ ಅವತಾರಗಳನ್ನು ಮಾಡುತ್ತಾರೆ. (ಶ್ರೀ. ಹರಿಕಥಾಮೃತಸಾರ ೨೩ನೆಯ ಸಂಧಿ ೧೯ ನೆಯ ಪದ್ಯ)

ಒಂದು ಬ್ರಹ್ಮಕಲ್ಪ ವಾಯುಪದದಲ್ಲಿದ್ದು ಸಾಧನ ಮಾಡಿ ಮುಂದೆ ೨೦೦ ನೆಯ

ಬ್ರಹ್ಮಕಲ್ಪದಲ್ಲಿ ಬ್ರಹ್ಮಪದಕ್ಕೆ ಬರುತ್ತಾರೆ :- ಶ್ರೀ ಹರಿಕಥಾಮೃತ ಸಾರ ೨೩ನೆಯ ಸಂಧಿ ೧೭ನೆಯ ಪದ್ಯ.

ಬ್ರಹ್ಮದೇವರ ಒಂದು ದಿನಕ್ಕೆ ನಾಲ್ಕು ಅಬ್ಜ ಮೂವತ್ತೆರಡು ಕೋಟಿ ಮನುಷ್ಯ ಮಾನ ವರ್ಷಗಳು. ಈ ಅವಧಿಯಲ್ಲಿ ೧೪ ಮನುಗಳ ಅವತಾರವೆಂದು ವಿಜಯ ದಾಸರು ಕಲ್ಯಾಣ ಸುಳಾದಿಯಲ್ಲಿ ಹೇಳಿದ್ದಾರೆ.

'ಎಲ್ಲ ದೇವರು – ಉಪದೇಶ ಕೊಂಡಾರೆ'

ವಾಯುವು ಸರ್ವಜೀವರ ಅಭಿಮಾನಿಯೂ ನಿಯಾಮಕನೂ ಆಗಿರುತ್ತಾನೆ. ಬಲ, ಬುದ್ಧಿ, ಧೈರ್ಯ, ಸ್ಥೈರ್ಯ, ವೈರಾಗ್ಯ, ಜ್ಞಾನ, ಆನಂದ, ಭಕ್ತಿ, ಸ್ವಾಭಾವಿಕ ಗುಣ, ಮುಕ್ತಿ, ಆನಂದಾನುಭವ ಇವುಗಳಿಗೆ ಅಭಿಮಾನಿಯಾಗಿರುತ್ತಾನೆ.

ಮೇಲಿನ ಪದ್ಯದಲ್ಲಿ ವಾಯುದೇವರು ಜಗದ್ಗುರುಗಳು ಎಂಬುದು ಪ್ರಾಣೇಶದಾಸರ ಅಭಿಮತವಾಗಿದೆ.

ವಾಯುದೇವರ ಅವತಾರವಾದ ಮಧ್ವಾಚಾರ್ಯರು ಬ್ರಹ್ಮಸೂತ್ರಗಳಿಗೆ ಶುದ್ಧವಾದ ಭಾಷ್ಯವನ್ನು ಬರೆದಿದ್ದಾರೆ. ಇಂದಿಗೂ ಬೋರೆ ಗಿಡಗಳಿಂದ ಕೂಡಿದ ಹಿಮಾಲಯಪರ್ವತದ ಮೇಲಿರುವ ದೊಡ್ಡ ಬದರಿಯಲ್ಲಿ ಮುನಿಗಳ ಮಧ್ಯದಲ್ಲಿ ಪರಮ ಪಂಡಿತರಾದ ಶ್ರೀಮಧ್ವಾಚಾರ್ಯರು ವ್ಯಾಸರ ಸನ್ನಿಧಾನದಲ್ಲಿದ್ದಾರೆಂದು ಹೇಳಲಾಗುತ್ತದೆ.

'ಪಾನೀಯ ಜಜಾಂಡದೊಳು.... ಚೇತನೀತನಿಂದಲೇ'

ಶರೀರ ವ್ಯಾಪಾರವು ಕೇವಲ ಇಂದ್ರಿಯಾಭಿಮಾನಿಗಳಿಂದಲ್ಲ ಮುಖ್ಯ ಪ್ರಾಣನಿಂದಲೇ.

## ಪದಸಂಖ್ಯೆ ೧೪೯ :

## ಪದ್ಮನಾಭತೀರ್ಥರ ಸ್ತೋತ್ರ :

ಶರಣ್ಯ – ಶರಣು ಹೊಂದಲು ಯೋಗ್ಯ.

## ಪದಸಂಖ್ಯೆ ೧೫೦ :

## ಮಾಧವತೀರ್ಥರ ಸ್ತೋತ್ರ :

ಧರಾಧರಜ – ಧರಾ = ವಹಾಪ

ಜ – ತುಂಗಾನದಿ

## ಪದಸಂಖ್ಯೆ ೧೫೧ :

## ಅಕ್ಷೋಭ್ಯತೀರ್ಥರ ಸ್ತೋತ್ರ :

ಪೋಣಿಸು – ಹೊಂದಿಸು

ಕುಲಿಶ – ವಜ್ರಾಯುಧ

ಮಾರಮಣ – ಲಕ್ಷ್ಮೀಪತಿ ಅಕ್ಷೋಭ್ಯತೀರ್ಥರ ಮಠದ ಯತಿಗಳ ಹೆಸರುಗಳು ಈ ಪದದಲ್ಲಿವೆ.

## ಪದಸಂಖ್ಯೆ ೧೫೨ :

## ಜಯರಾಯರ ಸ್ತೋತ್ರ :

ಶತಕ್ರತು – ದೇವೇಂದ್ರ,

ತುರಗಾಸ್ಯ – ಹಯಗ್ರೀವ ನಾಮಕ ಪರಮಾತ್ಮ,
ಅಜ – ಬ್ರಹ್ಮ
ಸ್ಥಾಣು – ರುದ್ರ

## ಪದಸಂಖ್ಯೆ ೧೫೩ :

## ವ್ಯಾಸರಾಯರ ಸ್ತೋತ್ರ :

ನೀಕರಿಸು – ಅಲ್ಲಗಳೆ,
ಬೇಷಭಾಸ – ಚಂದ್ರನಂತೆ ಕಾಂತಿಯುಳ್ಳವ
ವೀಶವಾಹನ – ಗರುಡವಾಹನ,
ಕ್ಲೇಶಹ – ಕ್ಲೇಶವನ್ನು ದೂರ ಮಾಡುವ.

## ಪದಸಂಖ್ಯೆ ೧೫೪ :

## ರಾಘವೇಂದ್ರತೀರ್ಥರ ಸ್ತೋತ್ರ

ತುಂಗಾ – ಮಹಾ,
ಅಂಗಜಕರ – ಕಾಮಬಾಣ.
ಕರಿರ – ಕುಂಭ, ಕೊಡ,
ಸಂಭವ – ಹುಟ್ಟಿದ, ಅಗಸ್ತ್ಯ
ವಟುವಪು – ಸಣ್ಣ ಶರೀರ, ವಾಮನ

## ಪದಸಂಖ್ಯೆ ೧೫೭ :

ಅಖಂಡಲ – ಇಂದ್ರ,
ಕುಂಬಿಣಿ – ಭೂಲೋಕ,
ದೇಶಿಕಕುಲ – ಯತಿಕುಲ
ಹರಿ – ಸಿಂಹ,
ಕುಜವಾಸರ – ಮಂಗಳವಾರ
ಶರಭಂಗ – ರಾಮ ಭಕ್ತನಾದ ಒಬ್ಬ ಋಷಿ. ವಿಶ್ವಾವಸು ಸಂವತ್ಸರದ ಆಷಾಢ ಶುದ್ಧ ಷಷ್ಠಿ ಮಂಗಳ ವಾರ ವರದೇಂದ್ರ ತೀರ್ಥರು ಪರಂ ಧಾಮವನ್ನು ಹೊಂದಿದರು. (ಕ್ರಿ. ಶ. ೧೭೮೫),
ವರಪುಣ್ಯಕ್ಷೇತ್ರ – ಈಗ ಮಹಾರಾಷ್ಟ್ರ ದಲ್ಲಿರುವ ನಗರ, ಪುಣೆ. ಅಲ್ಲಿಯೇ ಅವರ ವೃಂದಾ ವನವಿದೆ.
ಉತ್ತಂಸ – ಶಿರೋಭೂಷಣ

## ಪದಸಂಖ್ಯೆ ೧೫೮ :

ದುರ್ಮತ ಭುಜಗ– ದುರ್ಮತವೆಂಬ ಸರ್ಪ,
ಕುಘರ್ಮ – ಕೆಟ್ಟ ವಿಷಜ್ವಾಲೆ,
ವಿನಾಯಕ – ಗರುಡ, ವಿಘ್ನ,
ತ್ರಿಧರರು – ಜ್ಞಾನ ಭಕ್ತಿ ವೈರಾಗ್ಯ ಮೂರನ್ನೂ ಧಾರಣ ಮಾಡಿದವರು.
ಕರಿಚರ್ಮಾಂಬರ– ರುದ್ರದೇವರು,
ಕಿರ್ಮೀರಾರಿ – ಕೀರ್ಮೀರನೆಂಬ ದೈತ್ಯಸಂಹಾರಕ ರಾದ ವಾಯು ದೇವರು, ಭೀಮಸೇನ.

ತ್ರಿಧಾಮ – ಶ್ವೇತ ದ್ವೀಪ, ಅನಂತಾಸನ, ವೈಕುಂಠ,

ಧರಾಮರ – ಭೂಸುರ, ಬ್ರಾಹ್ಮಣ,

ಆಮಯ – ರೋಗ, ಪಾಪ,

ಅಪದಾನ್ಯ – ದಾನಿಗಳಲ್ಲಿ

## ಪದಸಂಖ್ಯೆ ೧೫೯ :

ಎರಪು – ಹಾನಿ, ಕಡ, ಸಾಲ,

ಧರಿತ್ರಿಸುತಿ – ಸೀತಾದೇವಿ,

## ಪದಸಂಖ್ಯೆ ೧೬೦ :

ಸುರದ್ರುಮ – ಕಲ್ಪವೃಕ್ಷ,

ತ್ರುಟಿ – ಅರೆಕ್ಷಣ, ಲವ,

## ಪದಸಂಖ್ಯೆ ೧೬೧ :

ಕ್ಷಿತಿಸುರ – ಬ್ರಾಹ್ಮಣ,

ವೈಷಿಕ – ವಿಷಯ ಸಂಬಂಧ,

ಬೃಹತ್ಸುತಟನೀ – ಬೃಹತ್ – ದೊಡ್ಡ (ಮೋತಾ) ಮತ್ತು ಮೂಳಾ ನದಿಗಳ ಸಂಗಮ.

ತಟನೀ – ನದಿ

ತರಣೀ – ಸೂರ್ಯ,

ಮಂದ – ದುಃಖ,

ಹೀನಮತಾಟವಿ – ಹೀನಮತವೆಂಬ ಅಡವಿ,

ಕೃಶಾನು – ಅಗ್ನಿ

## ಪದಸಂಖ್ಯೆ ೧೬೩ :

## ಭುವನೇಂದ್ರತೀರ್ಥರ ಸ್ತುತಿ :

ಅಘೋರಗ – ಪಾಪವೆಂಬ ಉರಗ

ವೀಂದ್ರ – ಗರುಡ ದುಷ್ಟ ಮತೇಂಧನ

ದಾವಾ – ದುಷ್ಟಮತಿಯೆಂಬ ಕಟ್ಟಿಗೆಗೆ ಬೆಂಕಿ

ಮುನಿ – ಅಗಸ್ತ್ಯ,

ಹತ್ತೆ – ಹತ್ತಿರ,

ಕುವಲಯ – ಭೂಮಂಡಲ

ಅವನೀಶ – ಭುವನೇಂದ್ರ

ಆಹ್ವಯ – ಹೆಸರು.

## ಪದಸಂಖ್ಯೆ ೧೬೪ :

ಕುಂಡಲಿ – ಸರ್ಪ(ಶೇಷ)

ದ್ವಿಜಷಂಡ – ಬ್ರಹ್ಮಸಮೂಹ

ರುಂಡಮಾಲಿ – ರುದ್ರದೇವ,

ಧಾತ – ಬ್ರಹ್ಮ ಅನೇಕಾಕ್ಷ ಶಿವ ಇಂದ್ರ,

ಅಂಡಜ – ಪಕ್ಷಿ,

ಅಮರರಾಕಳು – ಕಾಮಧೇನು.

## ಪದಸಂಖ್ಯೆ ೧೬೫ :

## ಸುಭೋದೇಂದ್ರತೀರ್ಥ ಸ್ತುತಿ :

ಅಮರ ಮಹಿ – ಕಲ್ಪವೃಕ್ಷ,

ಶರ್ಮಸಶರ್ಮದ – ಬ್ರಹ್ಮಜ್ಞಾನವನ್ನು ಕೊಡುವವ

ಭರ್ಮಾಂಗ – ಬಂಗಾರದಂತಹ ಕಾಂತಿಯುಳ್ಳ ಅಂಗ,

ಅರ್ಕ – ಸೂರ್ಯ,
ಅಕರ್ಮಹಿಮಾ – ಅನಂತಮಹಿಮಾ,
ಧ್ವಾಂತ – ಕತ್ತಲೆ ಕೃತರ್ಕ
ಸಂಪರ್ಕಾಹ – ಮಿಥ್ಯಾವಾದದ ಸಂಪರ್ಕವನ್ನು ಹಾಳುಮಾಡ ತಕ್ಕವರು.
ತೀರ್ಥಪಾಲ – ಸಚ್ಛಾತ್ರ ಧರ್ಮ ಗಳನ್ನು ಪಾಲಿಸು ವವ.
ತೀರ್ಥಾಂಘ್ರಿ – ಪಾದದಿಂದ ಗಂಗೆ ಯನ್ನು ಪಡೆದ ವನು. ವಾಮನ.
ತೀರ್ಥದೂತ – ಧರ್ಮದೂತ,
ತೀರ್ಥವು – ಪುಣ್ಯಕ್ಷೇತ್ರ,
ತೀರ್ಥಪ – ಶಾಸ್ತ್ರಪಾಲನ
ತೀರ್ಥಪ – ಯತಿಶ್ರೇಷ್ಠ
ತೀರ್ಥಮಾಂ – ನನ್ನನ್ನು ಪುನೀತನನ್ನಾಗಿ ಮಾಡುವದು.

## ಪದಸಂಖ್ಯೆ ೧೬೬ :

ದ್ವಿಜನಾಥ – ನಕ್ಷತ್ರನಾಥ. ಚಂದ್ರ,
ಪಾದಪ – ವೃಕ್ಷ,

## ಪದಸಂಖ್ಯೆ ೧೬೭ :

## ಶ್ರೀಧರತೀರ್ಥ ಸ್ತುತಿ :

ವೀತ – ಬಿಟ್ಟ
ಮೃದ – ಮೃತ್ತಿಕೆ, ಮಣ್ಣು
ಪತಗಾಭಿ – ಪತಂಗ, ಸೂರ್ಯನಂತೆ,
ವಿತರಣ – ದಾನ
ರವಿಜ – ಕರ್ಣ,
ಪತಗ – ಹಕ್ಕಿಗರುಡ
ಅಭಿ – ಸಮಾನ
ಪೃಶದಶ್ವ – ವಾಯು,
ಫಣಿ – ಸರ್ಪ, ದುಃಖವೆಂಬ ವಾಯುವಿಗೆ ಸರ್ಪದಂತೆ,

## ಪದಸಂಖ್ಯೆ ೧೬೮ :

## ಯತಿಗಳ ಪರಂಪರಾ ಸ್ತೋತ್ರಗಳು :

ಬ್ರಹ್ಮದೇವರಿಂದ ಶ್ರೀಮಧ್ವಾಚಾರ್ಯರ ವರೆಗೆ ಪರಂಪರಾ ಸ್ತೋತ್ರ.

ಎರಡಿಲ್ಲ – ಜೀವೇಶ್ವರ ಬೇಧವಿಲ್ಲ.
ಪೋರಾ – ಬಾಲ, ಅಜ್ಞಾನಿ.
ಮೂರುದೇವರು – ಬ್ರಹ್ಮ, ವಿಷ್ಣು, ರುದ್ರ
ನಯದಿಂದ – ನ್ಯಾಯದಿಂದ,
ಜಾಣೀಕೆ – ಜಾಣ್ಮೆ,
ಬಿಣಗು – ಹೀನ,
ಕಡೆಗಂಡು – ಹೀನ, ಕನಿಷ್ಟ,
ನಿರಯ – ನರಕ,

ವಿವರಗಳು :– ಹಂಸನಾಮಕ ಪರಮಾತ್ಮನಿಂದ ಶ್ರೀಮಧ್ವಾನಂದ ತೀರ್ಥ ಭಗವತ್ಪಾದರ ವರೆಗೆ ಪರಂಪರಾ ಪೀಳಿಗೆ,

ಹಂಸನಾಮಕ ಪರಮಾತ್ಮ



ಚತುರ್ಮುಖಬ್ರಹ್ಮ




'ಕ್ಷಿತಿಯೊಳಗೆ ದುರ್ಮತಾವತಿಶಯವಾದ ವೆಂದು' (ನುಡಿ ೩)

ಕಲಿಯುಗದಲ್ಲಿ ಪರಮಾತ್ಮನ ವಿಶೇಷ ಜ್ಞಾನವೆನ್ನುವುದು ಮರೆಯಾಗಿ ಜನರು ದುರ್ಮಾರ್ಗವನ್ನು ಹಿಡಿದಾಗ ಅವರ ಮೇಲಿನ ಕರುಣೆಯಿಂದ ಬ್ರಹ್ಮ ಮೊದಲಾದ ದೇವತೆಗಳು ಶ್ರೀಮನ್ನಾರಾಯಣನನ್ನು ಜನರನ್ನು ರಕ್ಷಿಸಬೇಕೆಂದು ಮೊರೆಯಿಟ್ಟರು.

ಪೂರ್ಣಪ್ರಜ್ಞನೆಂಬ ಪರಿಪೂರ್ಣ ಸುಜ್ಞಾನ ಸಮುದ್ರಮಧ್ವಮುನಿರಾಯ ಎಂಬ ಸ್ತೋತ್ರ ಪದದ ಆರನೆಯ ನುಡಿಯಲ್ಲಿ ಜಯ ತನಯನ ಕರೆದು ದಯದಿಂದ ಪೇಳಲು ಮಧ್ವಮುನಿರಾಯ (ವೇಗ) ಪ್ರಿಯದಲ್ಲಿ ಒಂದು ಮಧ್ಯಗೇಹನು ಅವತರಿಸಿದ.... ಎಂದು ವಿಜಯದಾಸರು ನಿರೂಪಿಸಿದ್ದಾರೆ.

'ಹರಿಯ ಸರ್ವೋತ್ತಮನಲ್ಲಿ ..... ಬರಿದೆ ವಿಶ್ವಾವೆಲ್ಲ ......' (ನುಡಿ ೪)

'ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ' ಎಂಬ ಮಾಯವಾದವನ್ನು ಮಧ್ವರಾಯರು ಖಂಡಿಸಿದರು.

೫ನೆಯ ನುಡಿಯಿಂದ ೯ನೆಯ ನುಡಿಗಳಲ್ಲಿ ದಾಸರು ಮಧ್ವಾಚಾರ್ಯರು ನಿರಾಕರಿಸಿದ ಮಾತುಗಳನ್ನು ಉಲ್ಲೇಖಿಸಿ ದ್ದಾರೆ. ಇದರ ವಿಶೇಷ ವಿವರಣೆಯನ್ನು ಶ್ರೀ ಸುಮಧ್ವ ವಿಜಯ ೧೫ನೆಯ ಸರ್ಗದಲ್ಲಿ ಹಾಗೂ ಬ್ರಹ್ಮಸೂತ್ರಭಾಷ್ಯ ೨ನೆಯ ಅಧ್ಯಾಯ, ೨ನೆಯ ಪಾದಗಳಲ್ಲಿ ಕಾಣಬಹುದು.

೧. ಭಾರತೀವಿಜಯ ೨. ಸಚ್ಚಿದಾನಂದ, ೩. ಬ್ರಹ್ಮಘೋಶ ೪. ಶತಾನಂದ ೫. ಉದ್ವರ್ತ ೬. ವಿಜಯ ೭. ರುದ್ರಭಟ್ಟ ೮. ವಾಮನಿ ೯. ಯಾದವಪ್ರಕಾಶ ೧೦. ರಾಮಾನುಜ ೧೧. ಭರ್ತೃಪ್ರಪಂಚ ೧೨. ದ್ರಾವಿಡ ೧೩. ಬ್ರಹ್ಮದತ್ತಿ ೧೪. ಭಾಸ್ಕರ ೧೫. ಪಿಶಾಚ ೧೬. ವೃತ್ತಿಕಾರ ೧೭. ವಿಜಯಭಟ್ಟ ೧೮. ವಿಷ್ಣುಕ್ರಾಂತ ೧೯. ವಾದಿಂದ್ರ, ೨೦. ಮಾಧವದಾಸ

೨೧. ಶಂಕರ

ಆಸ್ತಿಕ ಮತಗಳಲ್ಲಿ ೧. ನ್ಯಾಯ ೨. ವೈಶೇಷಿಕ ೩. ಸಾಂಖ್ಯ ೪. ಯೋಗ ೫. ಪೂರ್ವಮೀಮಾಂಸಾ ೬. ಉತ್ತರ ಮೀಮಾಂಸಾ ಎಂದು ಆರು ಬಗೆ. ಶ್ರೀವ್ಯಾಸಮಹರ್ಷಿಗಳು ಉತ್ತರ ಮೀಮಾಂಸಾಪ್ರವರ್ತಕರು. ಇವರಿಂದ ರಚಿತವಾದ ಬ್ರಹ್ಮಸೂತ್ರಗಳಿಗೆ ಮೇಲೆ ಹೇಳಿದಂತೆ ೨೧ ಜನ ಭಾಷ್ಯಕಾರರು. ಇವರನ್ನೆಲ್ಲ ಖಂಡಿಸಿ ಮಧ್ವಾಚಾರ್ಯರು ೨೨ ನೆಯ ಭಾಷ್ಯವನ್ನು ಬರೆದರು.

## ಪದಸಂಖ್ಯೆ ೧೬೯ :

## ರಾಯರ ಮಠದ ಯತಿಗಳ ಸ್ತೋತ್ರ

ದಟ್ಟುಳಿ – ಸಮೂಹ,
ಮಾಪತಿ – ಲಕ್ಷ್ಮೀಪತಿ ನಾರಾಯಣ
ಧರಿಜೆ – ಸೀತಾದೇವಿ,
ಘೋರಿಪ – ಭಯಂಕರ.
ಹೇಮವರಣಾಂಗ – ಬಂಗಾರದಂತೆ ದೇಹವುಳ್ಳ,
ಇಗಡ – ಕೆಟ್ಟ,
ಮಾಗಧರಿಪು – ಪರಮಾತ್ಮ
ಮಾರಾರಿ – ಶಿವ, ರುದ್ರ
ಕಿಸಲಯ – ನವಪಲ್ಲವ
ವೀಪ – ಗರುಡ,
ಈಡಿತ – ಹೊಗಳಲ್ಪಟ್ಟ
ಅಳಿ – ತುಂಬಿ

## ಪದಸಂಖ್ಯೆ ೧೭೦ :

## ವ್ಯಾಸರಾಯ ಉತ್ತರಾದಿಮಠದ ಯತಿಗಳ ಸ್ತೋತ್ರ :

ದರಿತೌಘ – ಪಾಪರಾಶಿ.
ರಾಜಿತ – ಶೋಭಿಸುವ

## ಪದಸಂಖ್ಯೆ ೧೭೧ :

## ಆಚಾರ್ಯರು ಯತಿಗಳಿಗೆ ಮೂರ್ತಿಗಳನ್ನಿತ್ತ ವಿವರ :

ಯದುವರ – ಶ್ರೀಕೃಷ್ಣಾ,
ಭೂಪತಿ – ವರಾಹ,
ಕೌಪ್ಯಪೀಠಪುರ – ಉಡುಪಿ.

ಒಂಬತ್ತು ಯತಿಗಳನ್ನು ಮಾಡಿ.... ಮೂರ್ತಿಗಳ ಕೊಟ್ಟ ವಿವರ ಇಂತಿದೆ.

ಶ್ರೀ ಪದ್ಮನಾಭತೀರ್ಥರಿಗೆ........ ಶ್ರೀಸೀತಾ ರಾಮವಿಗ್ರಹ

### ಉಡುಪಿಯ ಅಷ್ಟಮಠಗಳಿಗೆ

೧. ಫಲಿಮಾರು ಮಠ – ಶ್ರೀ ಹೃಷಿಕೇಶ ತೀರ್ಥರಿಗೆ ಶ್ರೀರಾಮಮೂರ್ತಿ.

೨. ಅದಮಾರು ಮಠ – ಶ್ರೀನರಸಿಂಹತೀರ್ಥರಿಗೆ ಕಾಲಿಯಾ

೩. ಕೃಷ್ಣಾಪುರ ಮಠ – ಶ್ರೀ ಜನಾರ್ದನ ತೀರ್ಥರಿಗೆ ಕಾಲಿಯಾಮರ್ದನಕೃಷ್ಣ

೪. ಪುತ್ತಿಗೆ ಮಠ – ಉಪೇಂದ್ರತೀರ್ಥರಿಗೆ ಶ್ರೀವಿಠ್ಠಲಮೂರ್ತಿ

೫. ಶಿರೂರು ಮಠ – ಶ್ರೀ ವಾಮನತೀರ್ಥರಿಗೆ ಶ್ರೀವಿಠ್ಠಲಮೂರ್ತಿ

೬. ಸೋದಾಮಠ – ಶ್ರೀ ವಿಷ್ಣುತೀರ್ಥರಿಗೆ ಶ್ರೀಭೂವರಾಹಮೂರ್ತಿ

೭. ಕಾಣಿಯೂರು ಮಠ – ಶ್ರೀರಾಮತೀರ್ಥರಿಗೆ ಶ್ರೀನರಸಿಂಹಮೂರ್ತಿ

೮. ಪೇಜಾವರ ಮಠ –ಶ್ರೀಅದೋಕ್ಷಜ ತೀರ್ಥರಿಗೆ ಶ್ರೀ ಅಜ ವಿಠ್ಠಲಮೂರ್ತಿ

'ಕಲ್ಕಿ' ಋಜುವೆನಿಸುತ್ತಾರೆ. ನೂರನೆಯ ಬ್ರಹ್ಮಕಲ್ಪದಲ್ಲಿ ಕಲ್ಕಿ ಪದ ಯೋಗ್ಯ ಋಜು ಎಂದು ಕರೆಸಿಕೊಳ್ಳುತ್ತಾರೆ. ಅಂದರೆ ಸಾಮಾನ್ಯ ಋಜುವಾಗಿದ್ದಾಗಿನಿಂದ ವಾಯು ಪದಕ್ಕೆ ಬರುವವರೆಗೆ ಇವರ ಸಾಧನದ ಅವಧಿ ೧೯೮ ಬ್ರಹ್ಮಕಲ್ಪ – ಎಂಬುದು ದಾಸರ ಅಭಿಪ್ರಾಯ. ೧೯೯ನೆಯ ಬ್ರಹ್ಮಕಲ್ಪದಲ್ಲಿ ಇವರು ವಾಯುಪದವಿಯಲ್ಲಿರುತ್ತಾರೆ. ಆಗ ಹನುಮ, ಭೀಮ, ಮಧ್ವ ಮೂರು ಮುಖ್ಯ ಅವತಾರಗಳನ್ನು ಮಾಡುತ್ತಾರೆ. (ಶ್ರೀ. ಹರಿಕಥಾಮೃತಸಾರ ೨೩ನೆಯ ಸಂಧಿ ೧೯ನೆಯ ಪದ್ಯ)

ಒಂದು ಬ್ರಹ್ಮ ಕಲ್ಪ ವಾಯು ಪದದಲ್ಲಿದ್ದು ಸಾಧನ ಮಾಡಿ ಮುಂದೆ ೨೦೦ನೆಯ ಬ್ರಹ್ಮಕಲ್ಪದಲ್ಲಿ ಬ್ರಹ್ಮಪದಕ್ಕೆ ಬರುತ್ತಾರೆ :-

ಶ್ರೀ ಹರಿಕಥಾಮೃತಸಾರ ೨೩ ನೆಯ ಸಂಧಿ ೧೭ನೆಯ ಪದ್ಯ.

ಬ್ರಹ್ಮದೇವರ ಒಂದು ದಿನಕ್ಕೆ ನಾಲ್ಕು ಅಬ್ಜ ಮೂವತ್ತೆರಡು ಕೋಟಿ ಮನುಷ್ಯನ ವರ್ಷಗಳು. ಈ ಅವಧಿಯಲ್ಲಿ ೧೪ ಮನುಗಳ ಅವತಾರವೆಂದು ವಿಜಯದಾಸರು ಕಲ್ಯಾಣ ಸುಳಾದಿಯಲ್ಲಿ ಹೇಳಿದ್ದಾರೆ.

'ಎಲ್ಲ ದೇವರು – ಉಪದೇಶ ಕೊಂಡಾರೆ'

ವಾಯುವು ಸರ್ವಜೀವರ ಅಭಿಮಾನಿಯೂ ನಿಯಾಮಕನೂ ಆಗಿರುತ್ತಾನೆ. ಬಲ, ಬುದ್ಧಿ, ಧೈರ್ಯ, ಸ್ಥೈರ್ಯ, ವೈರಾಗ್ಯ, ಜ್ಞಾನ, ಆನಂದ, ಭಕ್ತಿ ಸ್ವಾಭಾವಿಕ ಗುಣ, ಮುಕ್ತಿ ಆನಂದಾನುಭವ, ಇವುಗಳಿಗೆ ಅಭಿಮಾನಿಯಾಗಿರುತ್ತಾನೆ.

ಮೇಲಿನ ಪದ್ಯದಲ್ಲಿ ವಾಯುದೇವರು ಜಗದ್ಗುರುಗಳು ಎಂಬುದು ಪ್ರಾಣೇಶದಾಸರ ಅಭಿಮತವಾಗಿದೆ.

ವಾಯುದೇವರ ಅವತಾರವಾದ ಮಧ್ವಾಚಾರ್ಯರು ಬ್ರಹ್ಮಸೂತ್ರಗಳಿಗೆ ಶುದ್ಧವಾದ ಭಾಷ್ಯವನ್ನು ಬರೆದಿದ್ದಾರೆ. ಇಂದಿಗೂ ಬೋರೆಗಿಡಗಳಿಂದ ಕೂಡಿದ ಹಿಮಾಲಯ ಪರ್ವತದ ಮೇಲಿರುವ ದೊಡ್ಡ ಬದರಿಯಲ್ಲಿ ಮುನಿಗಳ ಮಧ್ಯದಲ್ಲಿ ಪರಮ ಪಂಡಿತರಾದ ಶ್ರೀಮಧ್ವಾಚಾರ್ಯರು ವ್ಯಾಸರ ಸನ್ನಿಧಾನದಲ್ಲಿದ್ದಾರೆಂದು ಹೇಳಲಾಗುತ್ತದೆ.

ಪಾನೀಯ ಜಜಾಂಡದೊಳು...... ಚೇತನನೀತನಿಂದಲೇ – ಶರೀರವ್ಯಾಪಾರವು ಕೇವಲ ಇಂದ್ರಿಯಾಭಿಮಾನಿಗಳಿಂದಲ್ಲ ಮುಖ್ಯ ಪ್ರಾಣನಿಂದಲೇ.

## ಪದಸಂಖ್ಯೆ ೧೭೩ :

## ಜಗನ್ನಾಥದಾಸರ ಸ್ತೋತ್ರ

ಪ್ರಾಪುತಿ – ಪ್ರಾಪ್ತಿ.

ಶಿಖೆ – ಜುಟ್ಟು,
ಪೀಯೂಷಾ – ಅಮೃತ,
ಅಘ – ಪಾಪ.

## ಪದಸಂಖ್ಯೆ ೧೭೪ :

ಅಲವ – ದೊಡ್ಡ, ಪೂರ್ಣ,
ಮೋದ – ಸಂತೋಷ,
ಆತು – ಸಿದ್ಧನಾಗಿ

ಶ್ರೀ ಜಗನ್ನಾಥದಾಸರು ಒಬ್ಬ ಕರ್ಮಜ ದೇವತೆ, ಮೊದಲಿನ ಜನ್ಮದಲ್ಲಿ ಹಿರಣ್ಯಕಶಿಪುವಿನ ಇನ್ನೊಬ್ಬ ಮಗನಾದ ಸಹ್ಲಾದ, ಎರಡನೆಯ ಜನ್ಮದಲ್ಲಿ ಮದ್ರದೇಶದ ಅರಸ ಶಲ್ಯ, ಮೂರನೆಯ ಜನ್ಮದಲ್ಲಿ ವಾದಿರಾಜ ಯತಿಗಳಲ್ಲಿ ಉಪಕರಣೆ ತೊಳೆಯುತ್ತಿದ್ದ ಕೊಂಡಪ್ಪ ನೆಂಬ ಸೇವಕನಾಗಿ, ನಾಲ್ಕನೆಯ ಜನ್ಮದಲ್ಲಿ ಪುರಂದರದಾಸರ ಮಗನಾಗಿ, ಐದನೆಯ ಜನ್ಮದಲ್ಲಿ ಜಗನ್ನಾಥದಾಸರಾದರು.

## ಪದಸಂಖ್ಯೆ ೧೭೫ :

ಲೇಖಾಂಶ – ದೇವಾಂಶ,

ಶುದ್ಧ ಎರಡು
ಮಾರ್ಗ – ವ್ಯಾಸಸಾಹಿತ್ಯ ದಾಸಸಾಹಿತ್ಯ,

ಬಳಹ – ಅಸುರರನ್ನು ಕೊಂದವನು.

'ಜರಿದಾರು ಮನ್ನಿಪರು..'

ಶ್ರೀ ಜಗನ್ನಾಥದಾಸರು ಹರಿ ಕೀರ್ತನೆ ಮಾಡುವಾಗ ಎದುರಿಗೆ ಕುಳಿತವರನ್ನು ಪ್ರಶ್ನಿಸಿ ಅವರಿಂದ ಉತ್ತರ ಪಡೆದು ಮುಂದುವರಿಯುತ್ತಿದ್ದರು. ಒಮ್ಮೆ ಕೆಲ ಕುಹಕಿಗಳು ದಾಸರನ್ನು ಪರೀಕ್ಷಿಸಲು ಕೆಲ ಮೂಕರನ್ನು ಮುಂದೆ ಕುಳ್ಳಿರಿಸಿದರು. ದಾಸರು ಎಂದಿನಂತೆ ಮುಂದೆ ಕುಳಿತ ವರನ್ನು ಪ್ರಶ್ನಿಸಿದಾಗ ನಿರಾತಂಕವಾಗಿ ಉತ್ತರ ಕೊಟ್ಟರು.

ಹಿಂದೆ ಕುಳಿತ ಕುಹಕಿಗಳು ಮಾತ್ರ ಮೂಕರಾಗಿ, ತಮ್ಮನ್ನು ರಕ್ಷಿಸಬೇಕೆಂದು ದಾಸರನ್ನು ಮೊರೆ ಹೊಕ್ಕರು. ಕರುಣಾಳುಗಳಾದ ದಾಸರು ಅವರನ್ನು ರಕ್ಷಿಸಿದರು.

## ಪದಸಂಖ್ಯೆ ೧೭೬ :

## ಮೋಹನದಾಸರ ಸ್ತೋತ್ರ

ಪಾಹಿ – ರಕ್ಷಿಸು,
ಪದೋಪದಿಗೆ – ಕ್ಷಣಕ್ಷಣಕೆ
ಅವಗಾಹಿ – ಲಕ್ಷಿಸುವ

## ಪದಸಂಖ್ಯೆ ೧೭೭ :

## ಪುರಂದರದಾಸರ ಸ್ತೋತ್ರ

ಪುರಂದರದಾಸರು ನಾರದಾಂಶರೆಂದು ಪ್ರತೀತಿಯಿದೆ. ಭಾಸುರ ಮತ–ಶ್ರೇಷ್ಠ ಮತ, ಮಧ್ವಮತ.

'ದಾಸಜನರ.......ನಿರುತದಲಿ.'

ಪುರಂದರದಾಸರು ಮುಂದೆ ವಿಜಯದಾಸರೇ ಮೊದಲಾದ ಅನೇಕ ಜನ ದಾಸರಿಗೆ ಭಾಗವತ ಹಾಗೂ

ಪ್ರೇರಣೆಯನ್ನು ಕೊಟ್ಟರು ಎಂಬುದು ಐತಿಹಾಸಿಕ ಸತ್ಯವಾಗಿದೆ.

ಬಾಂಜಡೆಯ – ರುದ್ರದೇವರು
ಪೀತಾಂಬರ – ಶ್ರೀಮನ್ನಾರಾಯಣ
ವಿಧಿಜಾತ – ನಾರದ
ಶ್ರೀತರುಣಿ – ಲಕ್ಷ್ಮೀದೇವಿ,
ಪೊಳಲ್ – ಪಟ್ಟಣ.
ವಿಭಾಸೆ – ಕಾಂತಿ, ಪ್ರಕಾಶ.

## ಲೋಕನೀತಿಯ ಹಾಡುಗಳು

## ಪದಸಂಖ್ಯೆ ೧೭೮ :

ಶ್ರೀಭರತಾ – ಲಕ್ಷ್ಮೀಕಾಂತ,

'ಯರಳಿ ಜನ್ಮವಾ ತಾಳಿ ಬಂದನಾ ಭರತ...'

ಭಾಗವತ ಪಂಚಮ ಸ್ಕಂಧದಲ್ಲಿ ಭರತನ ಕಥೆ ;

ಒಮ್ಮೆ ಭರತ ಮಹಾರಾಜನು ಅರ್ಘ್ಯ ಕೊಡಲೆಂದು ನದಿಯ ನೀರನ್ನು ಬೊಗಸೆಯಲ್ಲೆತ್ತಿದಾಗ ನೀರಲ್ಲಾ ರಕ್ತಮಯವಾಗಿರುತ್ತದೆ. ಆಶ್ಚರ್ಯಚಕಿತನಾದ ಅರಸನು ಸುತ್ತಲೂ ನೋಡಿದಾಗ ಒಂದು ಜಿಂಕೆ ಮರಿಹಾಕುತ್ತಿರುತ್ತದೆ. ಮುಂದೆ ತಾಯಿ ಸತ್ತು ಮರಿ ಪರದೇಶಿಯಾಗುತ್ತದೆ. ಮರುಕದಿಂದ ಮಹಾರಾಜನು ಮರಿಯನ್ನು ತಂದು ಬಹು ಮುದ್ದಿ ನಿಂದ ಸಾಕುತ್ತಾನೆ. ಸದಾ ಆತನಿಗೆ ಅದರ ಚಿಂತೆಯೇ. ಕೊನೆಗೆ ಭರತನಿಗೆ ಅವಸಾನ ಕಾಲ ಬಂದಾಗ ಆ ಜಿಂಕೆ ಮರಿಯ ರಕ್ಷಣೆಯ ಬಗೆಗೆ ಚಿಂತೆ ಮಾಡಿ ಪ್ರಾಣ ಬಿಡುತ್ತಾನೆ. ಮುಂದೆ ತಾನೂ ಜಿಂಕೆಯ ಜನ್ಮವನ್ನೇ ಪಡೆಯುತ್ತಾನೆ.

'ಕಡುತ್ಯಾಗಿ ರವಿಜಾನ ನೋಡೋ...'

ಮಹಾಭಾರತದಲ್ಲಿ ಬರುವ ಕರ್ಣನ ದಾನಶೂರತೆಯನ್ನು ತೋರುವ ಒಂದು ಸಂಗತಿಯನ್ನು ಈ ಸಾಲು ಸೂಚಿಸುತ್ತದೆ. ಬಡವನಿಗೆ ಒಮ್ಮೆ ಉರುವಲು ಬೇಕಾಗಿರುತ್ತದೆ. ದುರ್ಯೋಧನ, ಧರ್ಮರಾಯ ಮೊದಲಾದವರೆಲ್ಲಾ ಆತನು ನಂತರ ಬಂದರೆ ಉರುವಲು ಕೊಡಿಸುತ್ತೇವೆ ಎಂದು ಹೇಳುತ್ತಾರೆ. ಆದರೆ ಕರ್ಣ ಮಾತ್ರ ತಾನು ಕ್ಷೌರ ಮಾಡಿಸಿ ಕೊಳ್ಳಲು ನೀರು ಇಟ್ಟ ಚಿನ್ನದ ಬಟ್ಟಲನ್ನೇ ಎಡಗೈಯಿಂದಲೇ ದಾನಮಾಡಿಬಿಡುತ್ತಾನೆ. ಎಡಗೈಯೇಕೆ ಎಂದು ಕೇಳಿದ ಬ್ರಾಹ್ಮಣನಿಗೆ ಬಲಗೈಗೆ ಬಟ್ಟಲು ಬರುವುದರಲ್ಲಿ ಮನಸ್ಸು ಬದಲಾಯಿಸಿದರೆ ಹೇಗೆ ಎಂದು ಮನುಷ್ಯ ಮನಸ್ಸಿನ ಚಂಚಲತೆಯನ್ನು ಎತ್ತಿ ತೋರಿಸುತ್ತಾನೆ.

'ಭೀಮಾನುಡಿದ ಧರ್ಮಜಗಾದಾ ಲೋಚನೆ ಮಾಡೊ..'

ಒಮ್ಮೆ ಧರ್ಮರಾಯನ ಅರಮನೆಗೆ ಮಧ್ಯರಾತ್ರಿಯ ವೇಳೆಯಲ್ಲಿ ಒಬ್ಬ ಬಡ ಬ್ರಾಹ್ಮಣ ಬಂದು ತನ್ನ ಮನೆಯಲ್ಲಿ ನಡೆಯಲಿರುವ ಶುಭಕಾರ್ಯಕ್ಕೆ ದಾನ ಕೇಳಿದ. ಧರ್ಮರಾಯ ಆತನಿಗೆ 'ಬೆಳಗ್ಗೆ ಬಾ' ಎಂದು ಹೇಳಿದ. ಬ್ರಾಹ್ಮಣನು ನಿರಾಶೆಯಿಂದ ಹೊರಟಾಗ ದಾರಿಯಲ್ಲಿ ಕಂಡ ಭೀಮಸೇನನಿಗೆ ಈ ವಿಷಯ ತಿಳಿದು ಆತ ಜೋರಾಗಿ ನಗಾರಿ ಬಾರಿಸಲು ಪ್ರಾರಂಭಿಸಿದ. ಆ ನಗಾರಿಯನ್ನು ಅತೀವ ಸಂತೋಷವಾದಾಗ ಮಾತ್ರ ಬಾರಿಸುವ ಕ್ರಮವಿರುತ್ತದೆ. ಧರ್ಮರಾಜನು ಹೊರಗೆ

ಬಂದು ಭೀಮನ ಆನಂದಕ್ಕೆ ಕಾರಣವನ್ನು ಕೇಳುತ್ತಾನೆ. ಆಗ ಭೀಮಸೇನನು ತಾವು ಬೆಳಗಾಗುವವರೆಗೆ ಬದುಕಿರುತ್ತೀರಿ ಎಂದು ಕೇಳಿ, ನನಗೆ ಅತಿ ಹೆಚ್ಚಿನ ಆನಂದ ವಾಗಿದೆ. ಎಂದಾಗ ಧರ್ಮರಾಯನು ಪೆಚ್ಚಾಗುತ್ತಾನೆ.

ಕಿಟ್ಟ – ಸಗಣಿ,

ತುಕ್ಕುವರಾರು – ಊರೂರು ತಿರುಗುವರು.

ವಾಗಾರ – ಅನ್ನ,

ಖಮ್ಮನ – ಕಮ್ಮನೆಯ,

ಖಮ್ಮಟ – ಮುಗ್ಗುವಾಸನೆ.

ಧರಿಯಲರು – ಆಯುಷ್ಯ.

ಹರಿ – ವಾಯುದೇವರು,

ಹರಿ – ನಾರಾಯಣ,

ಅಸುರಗೊಲಿದಾ – ವಿಭೀಷಣನಿಗೆ ಒಲಿದ,

ಜಗಜೇಷ್ಟರು – ಲೋಕಪ್ರೇರಕರು, ವಿಷ್ಣು, ವಾಯು,

ಈ ಪದದಲ್ಲಿ ಬರುವ ಮಾತುಗಳು ವಾಯುದೇವರು ಹಾಗೂ ಶ್ರೀಹರಿ ಇವರಿಬ್ಬರಿಗೂ ಅನ್ವಯಿಸುತ್ತವೆ. ವಿವರ ಹೀಗಿದೆ.

## ಸಂದರ್ಭ ವಿಶೇಷಾರ್ಥ ಸಂಗ್ರಹ (೧-೨-೩)

| ದೇವರ ಪರವಾಗಿ | ವಾಯುದೇವರ ಪರವಾಗಿ |
|---|---|
| **೧ನೆಯ ನುಡಿ** | |
| **ಹೋಮಾನ್ನದಿಂದುದಿಸಿ...** | |
| ದಶರಥರಾಜನು ಮಾಡಿದ ಪುತ್ರಕಾಮೇಷ್ಠಿ ಯಾಗದಿಂದ ಉದಿಸಿದನು ಶ್ರೀರಾಮ. | ಮಂತ್ರಪೂರಿತವಾದ ಪುಷ್ಪದಿಂದ ಅಂಜನಾದೇವಿಯಲ್ಲಿ ವಾಯುದೇವರು ಜನಿಸಿದರು. |
| **..ವನ ಚರಿಸಿ..** | |
| ಶ್ರೀರಾಮಚಂದ್ರನು ವನವನ ಚರಿಸಿದನು. | ವನಚರರೇ ವಾಯುದೇವರು. |
| **..ಕಪಿ ನೆರಸಿ..** | |
| ಶ್ರೀರಾಮಚಂದ್ರನು ಕಪಿಗಳನ್ನು ಕಪಿನಾಯಕರನ್ನು ನೆರಸಿದನು. | ಹನುಮಂತ ದೇವರು ಸಮೂಹವನ್ನೇ ನೆರಸಿದರು. |
| **..ಕಾಮನಿಯ ಕೊಂದು..** | |
| ಶ್ರೀರಾಮಚಂದ್ರನು ಕಾಮನಿಯಾದ ತಾಟಕಿಯನ್ನು ಕೊಂದು. | ಹನುಮಂತ ದೇವರು ಲಂಕಿಣಿಯನ್ನು ಕೊಂದು. |

..ಶರಧಿಯ ದಾಟಿ..

| | |
|---|---|
| ಶ್ರೀರಾಮಚಂದ್ರನು ಸಮುದ್ರವನ್ನು ದಾಟಿ ಲಂಕೆಯನ್ನು ಸೇರಿದನು. | ಹನುಮಂತದೇವರು ಸಮುದ್ರವನ್ನು ದಾಟಿ ಲಂಕೆಯನ್ನು ಸೇರಿದರು. |

..ತಾಮರಸ ಮುಖಿಯ ಸಂತೋಷ ಪಡಿಸು..

| | |
|---|---|
| ಸೀತಾದೇವಿಯನ್ನು ಲಂಕೆಯಿಂದ ಕರೆತಂದು ಶ್ರೀರಾಮನು ಸಂತೋಷಪಡಿಸಿದನು. | ಸೀತಾಮಾತೆಗೆ ಚೂಡಾರತ್ನವನ್ನಿತ್ತು ಹನುಮಂತದೇವರು ಸಂತೋಷ ಪಡಿಸಿದರು. |

ತಾಮಸರ ಸದೆಬಡೆದು ಅರಸಗೊಲಿದಾ

| | |
|---|---|
| ರಾವಣಾದಿ ದೈತ್ಯರನ್ನು ಕೊಂದು ಶ್ರೀರಾಮನು ವಿಭೀಷಣನಿಗೊಲಿದನು. | ಅಕ್ಷಯ ಕುಮಾರ ದೈತ್ಯರನ್ನು ಸಂಹರಿಸಿ ಹನುಮಂತದೇವರು ವಿಭೀಷಣನಿಗೊಲಿದನು. |

**೨ ನೆಯ ನುಡಿ**

ಬಲಿ ತಿಂದ

| | |
|---|---|
| ದೇವರು ಕೃಷ್ಣಾವತಾರದಲ್ಲಿ ಇಂದ್ರನಿಗೆ ಕೊಡತಕ್ಕ ಬಲಿಯನ್ನು ತಿಂದನು. | ಬಕಾಸುರನಿಗೆ ತಂದ ಬಲಿಯನ್ನು ಭೀಮಸೇನದೇವರು ತಿಂದರು. |

ಪೂ ತಂದ

| | |
|---|---|
| ಶ್ರೀಕೃಷ್ಣನು ಪಾರಿಜಾತ ಪುಷ್ಪವನ್ನು ತಂದನು. | ಭೀಮಸೇನ ದೇವರು ಸೌಗಂಧಿಕಾ ಪುಷ್ಪ ತಂದರು. |

ವಿಷ ಉಂಡ

| | |
|---|---|
| ಶ್ರೀಕೃಷ್ಣಾವತಾರದಲ್ಲಿ ದೇವರು ಪೂತನಿಯ ವಿಷಮೊಲೆಯುಂಡನು. | ಭೀಮಸೇನದೇವರು ದುರ್ಯೋಧನನಿತ್ತ ವಿಷುಂಡರು. |

ಮಡುಬಿದ್ದ

| | |
|---|---|
| ಶ್ರೀಕಷ್ಣನು ಕಾಳಿಂಗ ಮಡುವಿನಲ್ಲಿ ಧುಮುಕಿದನು. | ದುರ್ಯೋಧನನು ವಿಷಉಣಿಸಲು ಭೀಮಸೇನದೇವರು ಯಮುನಾ ನದಿಯಲ್ಲಿ ಧುಮುಕಿದರು. |

ತುಳಿದ ಸರ್ಪನ

| | |
|---|---|
| ಕಾಳಿಂಗ ಸರ್ಪವನ್ನು ಶ್ರೀಕೃಷ್ಣ ತುಳಿದನು. | ಭೀಮಸೇನದೇವರು ಅಜಗರವನ್ನು ತುಳಿದರು. |

ಖಳ ಬಕನ ಕೊಂದ

| | |
|---|---|
| ಶ್ರೀಕೃಷ್ಣನು ಬಕನಾಮಕ ದೈತ್ಯನನ್ನು ಕೊಂದನು. | ಏಕಚಕ್ರಪುರದಲ್ಲಿದ್ದ ಬಕಾಸುರನನ್ನು ಭೀಮಸೇನದೇವರು ಕೊಂದರು. |

ಅರಸನ ಊಳಿಗವಮಾಡಿ..

| | |
|---|---|
| ಶ್ರೀಕೃಷ್ಣನು ಅರಸನಾದ ಉಗ್ರಸೇನನ ಊಳಿಗಮಾಡಿದನು. | ಭೀಮಸೇನದೇವರು ಧರ್ಮರಾಜನ ಊಳಿಗಮಾಡಿದರು. |

ಶಶಿಕುಲದವತರಿಸಿ

| | |
|---|---|
| ಚಂದ್ರಕುಲದಲ್ಲಿ ದೇವರು ಶ್ರೀಕೃಷ್ಣ ನಾಮದಿಂದುದಿಸಿದ. | ವಾಯುದೇವರು ಭೀಮಸೇನ ನಾಮದಿಂದ ಚಂದ್ರಕುಲದಲ್ಲಿ ಅವತರಿಸಿದರು. |

## ೩ನೆಯ ನುಡಿ

ಯತಿಯಾದ

| | |
|---|---|
| ದೇವರು ವೇದವ್ಯಾಸ ರೂಪದ ವಾಯುದೇವರು ಯತಿಯಾದನು. | ವಾಯುದೇವರು ಶ್ರೀಮಧ್ವಾಚಾರ್ಯರಾದರು. |

ದ್ವಿಜರಿಗೆ ಸುರನಾಗಿ

| | |
|---|---|
| ದೇವರು ವೇದವ್ಯಾಸನಾಮದಿಂದ ಪರಾಶರ ಋಷಿಗೆ ಮಗನಾದನು. | ವಾಯುದೇವರು ಮಧ್ಯಗೇಹಭಟ್ಟರಿಗೆ ವಾಸುದೇವನಾಮದಿಂದ ಸುತರಾದರು. |

ಸದ್ಗ್ರಂಥ ವಿರಚಿಸಿದ..

| | |
|---|---|
| ವೇದವ್ಯಾಸದೇವರು ಸದ್ಗ್ರಂಥಗಳನ್ನು ರಚಿಸಿದರು. | ವಾಯುದೇವರು ಮಧ್ವಾವತಾರದಲ್ಲಿ ೩೭ ಗ್ರಂಥಗಳನ್ನು ರಚಿಸಿದರು. |

ಕಾಷಾಯವಸನ ದಂಡ ಕಮಂಡಲಧಾರರಾಗಿ
ಬದರಿಯಲ್ಲಿರುತಿಹರು ..

| | |
|---|---|
| ದೇವರು ವೇದವ್ಯಾಸ ರೂಪದಿಂದ ವೇದವನ್ನು ಬೋಧಿಸುತ್ತಾ ಬದರಿಯಲ್ಲಿ ಇರುವನು. | ವಾಯುದೇವರು ಯತಿರೂಪದಿಂದ ಪಾಠಕೇಳುತ್ತ ಬದರಿಯಲ್ಲಿರುವರು. |

ಜಗಜ್ಜ್ಯೇಷ್ಠರಾದ..

| | |
|---|---|
| ನಾನೇ ಈ ವಿಶ್ವದ ಪ್ರಭುವೂ ಪ್ರಳಯ ಕರ್ತನೂ ಆಗಿದ್ದೇನೆ. | ಆರು ಮೂರೆರಡೊಂದ ಸಾವಿರ : ........................................ ಗುರುಪವಮಾನಸಲಹೆಮ್ಮ : : |

ಶ್ರೀ ಹರಿಕಥಾಮೃತಸಾರ ಸಂ. ೧ ನುಡಿ – ೪

## ಪದಸಂಖ್ಯೆ ೧೮೪ :

ಶ್ರೀಕಾಳಿಕಾಂತ – ಭೀಮಸೇನ

## ಪದಸಂಖ್ಯೆ ೧೮೫ :

'ಧರಿಪತಿ ಕುವರನ್ನ...... ತಣ್ಣೇಯಿ ರಾಯತೆಣ್ಣೆ.'

ಚಂಪಾವತಿನಗರದ ಅರಸನಾದ ಹಂಸಧ್ವಜನು ಯುಧಿಷ್ಠಿರನ ಅಶ್ವಮೇಧದ ಕುದುರೆಯನ್ನು ಕಟ್ಟಿದ. ಹಂಸಧ್ವಜ ತನ್ನ ಮಗ ಸುಧನ್ವನನ್ನು ಯುದ್ಧಕ್ಕೆ ಹೊರಡಲು ಹೇಳಿ ತಾನೂ ಅರ್ಜುನನೊಂದಿಗೆ ಯುದ್ಧಮಾಡಲು ಹೊರಟ. ಸುಧನ್ವನು ಹೆಂಡತಿಯನ್ನು ಕಾಣಲೆಂದುಹೋದವನು ಅಂತಃಪುರದಲ್ಲಿಯೇ ಕೆಲಕಾಲ ಉಳಿದು ಕೊಂಡ. ಕುಪಿತನಾದ ಹಂಸಧ್ವಜನು ಮಗನನ್ನು ಕಾದ ಎಣ್ಣೆಯ ಕೊಪ್ಪರಿಗೆ ಯಲ್ಲಿ ತಳ್ಳಿಸಿದ. ಸುಧನ್ವನ ಅನನ್ಯವಾದ ಕೃಷ್ಣ ಭಕ್ತಿಯಿಂದಾಗಿ ಅವನಿಗೆ ಏನೂ ಆಗದೆ ಸಂತೋಷದಿಂದಲೇ ಕೊಪ್ಪರಿಗೆಯಲ್ಲಿ ಕುಳಿತ. ಮುಂದೆ ಇವನು ಅರ್ಜುನನೊಡನೆ ಯುದ್ಧ ಮಾಡಿ ಮಡಿದ– (ಜೈಮಿನಿ ಭಾರತದಿಂದ)

ವರುಷ – ವರ್ಷ, ಮಳೆ,

ನಿರ್ಜರ ವದನ – ಅಗ್ನಿ,

ವೀಶ – ಗರುಡ

## ಪದಸಂಖ್ಯೆ ೧೮೬ :

ಈಸೆ – ಕೊಡಲು,

ತಿಂತ್ರಿಣಿ – ಹುಣಸೇಹಣ್ಣು

## ಪದಸಂಖ್ಯೆ ೧೮೭ :

ನಿರಯ – ನರಕ,

ಭೇದಮತ – ಹರಿಮತ, ಮಧ್ವಮತ

## ಪದಸಂಖ್ಯೆ ೧೮೮ :

ಮ್ಯಾಲಿನೇಳುಲೋಕ :– ಭೂ, ಭುವ, ಸ್ವಹ, ಮಹ, ಜನ, ತಪ, ಸತ್ಯ.

ಕೆಳಗಿನೇಳು ಲೋಕ :– ಅತುಲ, ವಿತಲ, ಸುತಲ, ರಾಸಾತಲ, ತಲಾ ತಲ, ಮಹಾತಲ, ಪಾತಾಳ.

## ಪದಸಂಖ್ಯೆ ೧೮೯ :

ಸೀತೆ – ರಮಾದೇವಿ, ಸಮಾ ಸಮಳು – ದೇಶಕಾಲದಿಂದ ಪರಮಾತ್ಮನಿಗೆ ಸಮಾನಳು, ಗುಣದಿಂದ ಅಸಮಳು.

'ಕಶ್ಚಿನ್ಮಾಂ ವೇತ್ತಿ ....'

(ಭಗವದ್ಗೀತೆಯ ಅಧ್ಯಾಯ ಏಳು ಶ್ಲೋಕ ಮೂರು)

ಸಾವಿರಕ್ಕೆ ಒಬ್ಬನು ಸಿದ್ಧಿಗಾಗಿ ಯತ್ನಿಸುವನು. ಯತ್ನಿಸುವ ಸಿದ್ಧರಲ್ಲಿ ಯಾವನೋ ಒಬ್ಬನು ನನ್ನನ್ನು ಯಥಾರ್ಥವಾಗಿ ತಿಳಿಯುತ್ತಾನೆ.

## ಪದಸಂಖ್ಯೆ ೧೯೦ :

ಗರ್ತ – ತೆಗ್ಗು, ಪ್ರಾಣಾಯಾಮ – ಉಸಿರು ತೆಗೆದುಕೊಳ್ಳುವುದು.

ಹಿಡಿಯುವುದು, ಬಿಡುವುದು, ರೇಚಕ, ಪೂರಕ, ಕುಂಭಕ, ಎಂದು ಕ್ರಮವಾಗಿ ಆ ಕ್ರಿಯೆಗಳಿಗೆ ಹೆಸರು.

ಆಚಮನ – ಬಲ ಅಂಗೈಯಲ್ಲಿ ನೀರು ಹಾಕಿಕೊಂಡು ಮಂತ್ರ ಪೂರ್ವಕ ಸೇವಿಸುವುದು.

ಮೂರೊಂದು ರೂಪ – ನರ, ನಾರಾಯಣ, ಹರಿ, ಕೃಷ್ಣ ಎಂಬ ನಾಲ್ಕು ರೂಪಗಳು. ಇವರು ಯಮ ಧರ್ಮನ ಪತ್ನಿಯಾದ ಮೂರ್ತಾ ದೇವಿಯಲ್ಲಿ ಹುಟ್ಟಿದ ಮಕ್ಕಳು.

## ಪದಸಂಖ್ಯೆ ೧೯೧ :

ಮುದ್ರಿ – ಅಸಹ್ಯ ಮುಖಭಾವನೆ.

ಸಪ್ತಾಂಬು – ೧. ಕೂದಲು, ೨. ಮೀಸೆ, ೩. ಉಗುರು ಸ್ಪರ್ಶವಾದ, ೪. ಮಲಗಿ, ೫. ನಿಂತು, ೬. ಒಂದೇ ಕೈಯಿಂದ ಕುಡಿಯುವುದು, ೭. ಶೌಚ ಶೇಷ ನೀರು, ಈ ಏಳು ಬಗೆಯ ನಿಷಿದ್ಧ ನೀರು.

## ಪದಸಂಖ್ಯೆ ೧೯೨ :

ಹುಳಾಗಿ – ಮಗ್ನನಾಗಿ.

ವಿಧಿಕುಲಾಚರಣೆ – ಸ್ವಕರ್ಮಾಚರಣೆ.

ಪಲಾ – ಪಲ್, ಮಾಂಸ.

ಚಲಾ ಪ್ರತಿಮ – ಜ್ಞಾನಿಗಳು, ಭಗವದ್ಭಕ್ತರು.

ಕಳಾ – ಹೆಂಡ.

ಇಳಾಣ್ಮರು – ರಾಜರು.

ಖಳಾರಿ – ಹರಿ.

ಬಿಂಜಾಲ – ಬಿಂದು + ಜಲ.

ಬಲಾರಿ – ಭೀಮಸೇನ

## ಪದಸಂಖ್ಯೆ ೧೯೬ :

ದ್ವಿಜನಂದನ – ವೇದವ್ಯಾಸ, ಹರಿ

## ಪದಸಂಖ್ಯೆ ೨೦೦ :

ಕಲಭಾಷೆ – ಮುದ್ದು ಮಾತು.

## ಪದಸಂಖ್ಯೆ ೨೦೧ :

ಊರಕದಕೆ

ಅಪ್ಪಣೆಲ್ಲ – ಮುಕ್ತದ್ವಾರ

ಪಾಂಶು – ಧೂಳಿ

## ಪದಸಂಖ್ಯೆ ೨೦೨ :

ಪಂಚತೀರ್ಥ – ಬ್ರಾಹ್ಮಣನ ಬಲ ಹಸ್ತದಲ್ಲಿ ಐದು ತೀರ್ಥಗಳಿರುತ್ತವೆಯೆಂದು ಭಾರದ್ವಜ ಮುನಿಗಳು ಹೇಳಿದ್ದಾರೆ. ಅವುಗಳ ವಿವರ ಹೀಗಿದೆ :-

೧. ಬ್ರಹ್ಮತೀರ್ಥ – ಅಂಗುಷ್ಟ ಮೂಲದಲ್ಲಿ

೨. ಋಷಿತೀರ್ಥ – ಕನಿಷ್ಟ ಮೂಲದಲ್ಲಿ

೩. ಪೈತೃಕತೀರ್ಥ– ತರ್ಜನೀ ಮೂಲದಲ್ಲಿ

೪. ದೇವತೀರ್ಥ – ಬೆರಳುಗಳ ತುದಿಯಲ್ಲಿ

೫. ಆಗ್ನೇಯತೀರ್ಥ – ಅಂಗೈಯಲ್ಲಿ

**ಪಂಚಕರ್ಮ** :- ಬ್ರಹ್ಮಾಂಡ ಪುರಾಣದಲ್ಲಿ ಪಂಚಕರ್ಮಗಳು ಹೀಗೆ ಹೇಳಲ್ಪಟ್ಟಿವೆ. ಗೃಹಸ್ಥಾಶ್ರಮಿಗಳಿಗೆ ಯೋಗ್ಯಕರ್ಮಗಳು :

೧. ಯಜ್ಞ ೨. ದಾನ ೩. ತಪಸ್ಸು
೪. ಸ್ವಾಧ್ಯಾಯ ೫. ಪಿತೃತರ್ಪಣ.

ಪಂಚಾಗ್ನಿಗಳು :- ೧. ದಕ್ಷಿಣ ೨. ಗಾರ್ಹಪತ್ಯ ೩. ಆಹವನೀಯ ೪. ಸಭ್ಯ ೫. ಆವಪಥ್ಯ.

**ಪಂಚಾಹುತಿ** :- ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ.

ಪಂಚಭೇದ :- ಮಧ್ವಸಿದ್ಧಾಂತದ ಪ್ರಕಾರ ಐದು ಭೇದಗಳು ಹೀಗಿವೆ.

೧. ಜೀವ – ಈಶ ಭೇದ
೨. ಜೀವ – ಜೀವ ಭೇದ
೩. ಜೀವ – ಜಡ ಭೇದ
೪. ಜಡ – ಜಡ ಭೇದ
೫. ಜಡ – ಈಶ ಭೇದ

## ಪದಸಂಖ್ಯೆ ೨೦೪ :

ತುರುಕರು – ಆಕಳ ಕರು,
ಸರವಿ – ಹುಲ್ಲುಪಗ್ಗ,
ದರುಶನ ಗ್ರಂಥ – ತತ್ವಶಾಸ್ತ್ರ,
ಪರಕಥಿ – ಪರಮಾತ್ಮನನ್ನು ಬಿಟ್ಟು ಬೇರೆ ಕಥೆ

## ಪದಸಂಖ್ಯೆ ೨೦೭ :

ಗಿದ್ವಾನ – ಪಾವು, ಅಳತೆ,
ಕೊಳವಿ – ಊದುಗೊಳವಿ,
ತಪ್ಪತಾರ – ಬಹಳ,
ಸಪ್ಪಟಿ – ಸಪ್ಪಗಿನ

## ಪದಸಂಖ್ಯೆ ೨೦೮ :

ವ್ರಾತ್ಯ – ಕೀಳು, ಸಂಸ್ಕಾರ, ಶೂನ್ಯ,

ಆವದಾನ – ದಾನ,

ತಿಥಿತ್ರಯ – ದಶಮಿ, ಏಕಾದಶಿ, ದ್ವಾದಶಿ.

## ಪದಸಂಖ್ಯೆ ೨೦೯ :

ಪರಪಾದಿ – ನಾಸ್ತಿಕವಾದಿ,
ಜಲಜವಿದೆ – ಬ್ರಹ್ಮವಿದೆ
ತಟ್ಟಲೆಯ – ತಟ್ಟೆಯಾಕಾರದ ಮಚ್ಚೆ, ಪಾದರಕ್ಷೆ.

## ಪದಸಂಖ್ಯೆ ೨೧೦ :

ಜೋಚು – ನಿಂದಿಸು, ತಾತ್ಸಾರ ಮಾಡು.
ವೀರ್ಯ – ಶಕ್ತಿ ಸಾಮರ್ಥ್ಯ
ಕ – ಬ್ರಹ್ಮ

## ಪದಸಂಖ್ಯೆ ೨೧೩ :

ಈ ಸುಳಾದಿಯು ಈಶಾ ವಾಸ್ಯಾಪನಿಷತ್ತಿಗೆ ವ್ಯಾಖ್ಯಾನದಂತಿದೆ

ವಸುಧ – ಬಂಗಾರ, ಸಂಪತ್ತು
ನಿವೃತ್ತಕರ್ಮಗಳು– ಫಲಾಪೇಕ್ಷೆಯಿಲ್ಲದೆ ಮಾಡುವ ಕರ್ಮಗಳು
ತನುಲಿಂಗ – ಲಿಂಗಶರೀರ
ಈರ – ವಾಯುದೇವರು.
ದ್ಯುನದಿ – ಗಂಗಾನದಿ
ಅನನಂತರ್ಯಾಮಿ – ವಾಯುವಿನ ಅಂತರ್ಯಾಮಿ.

**ಪದಸಂಖ್ಯೆ ೨೧೪ :**

ಲಿಂಗಸುಗೂರಿನ ಸುತ್ತಮುತ್ತಲಿನ ಊರುಗಳ ಹೆಸರುಗಳು ಈ ಪವದಲ್ಲಿ ಬಂದಿವೆ. ಅನೇಕ ಹೆಸರುಗಳು ಅನ್ವರ್ಥವಾಗಿವೆ. ಕೆಲವು ವಿರೋಧಾರ್ಥದಿಂದ ಕೂಡಿವೆ. ಊರ ಹೆಸರುಗಳು ಈ ಕೆಳಗಿನಂತಿವೆ.

ಗುಡಿಹಾಳು, ಈಚಲಹಾಳು, ಎರದಾಳು, ಗೊರವ ಬಾಳು, (ಗೋರೆ ಬಾಳು), ಐದನಹಾಳು, ಭೂಪುರ, ಆಸಿಹಾಳು, ಹೊನ್ನಳ್ಳಿ, ಕಲ್ಲೂರು, (ಕೆಲೂರು), ಮಣ್ಣೂರು (ಮಟ್ಟೂರು), ಹೆಸರೂರು, ಅಡವಿಭಾವಿ, ಹಾಳ್ಕೇರಿ, ನೀರಲಕೆರೆ, ಹೊನ್ನ (ಹುನಗುಂಟಿ), ಕುಪ್ಪೆ, ಛತ್ರ, ಕನಸಾವಿ, ಹಾಲಭಾವಿ, ಗುಂಡಸಾಗರ, ಗುಡ್ಡ, ಕಲ್ಲೆಂಬೋರು, ಸೊನ್ನೂರು, ಗುಂಡೂರು, ಚೆನ್ನ ಪಟ್ಟಣ, ಬೆಲ್ಲದ ಮೊರಡಿ, ಹತ್ತೀಗುಡ್ಡ, ಎಮ್ಮೀಗುಡ್ಡ, ಹುಲಿಗುಡ್ಡ, ಕರಡಿ ಬೆರ್ಚ (ಕರಡುಕಲ್ಲು).

**ಪದಸಂಖ್ಯೆ ೨೧೫ :**

ಭುವನ – ಮನೆ, ಸ್ವರ್ಗ, ಪೃಥ್ವಿ
ಭವನ – ಮನೆ, ಅಸ್ತಿತ್ವ
ಉದಷಾಗಿ – ಹೊತ್ತೇರಿ
ವ್ಯಯ – ವೆಚ್ಚ
ಮೂರುತಿಸುತ – ಮೂರ್ತಾದೇವಿಯ ಮಗ, ನಾರಾಯಣ

**ಪದಸಂಖ್ಯೆ ೨೧೬ :**

ಪರರ ಜಿಂಹಿಪ – ಪರನಿಂದಕ
ಘಳಿಗೆ ಬಡಿವವ – ಗಂಟೆ ಬಾರಿಸುವವ,

**ಪದಸಂಖ್ಯೆ ೨೧೭ ಅ :**

ಡೊಳ್ಳಿನವರು – ದೊಡ್ಡ ಹೊಟ್ಟೆಯವರು

**ಪದಸಂಖ್ಯೆ ೨೧೭ ಬ :**

ಕಾಸಾರ – ಸರೋವರ

**ಪದಸಂಖ್ಯೆ ೨೧೮ :**

ಫರದಿ – ಹೆಂಡತಿ, ಮುತ್ತೈದೆ,
ಸಭಿ – ಉದಯಕಾಲ

**ಪದಸಂಖ್ಯೆ ೨೧೯ :**

**ತಾತ್ವಿಕ ಹಿನ್ನೆಲೆಯ ಹಾಡುಗಳು**

ಕುಣುಪ – ಹೆಣ,
ಆತು – ಹೊಂದಿಕೊಂಡು,

**ಪದಸಂಖ್ಯೆ ೨೨೦ :**

ವೈಜನ – ಪಾಪ,

**ಪದಸಂಖ್ಯೆ ೨೨೧ :**

ದ್ವಿಷಡ್ರೂಪ – ದ್ವಿ – ಎರಡು,
ಷಟ್ – ಆರು, ಎಂಟುರೂಪ
ಕಂಬು – ಶಂಖ,
ರವಿ – ಚಕ್ರ,
ಅಬುಜ – ಚಂದ್ರ
ಪ್ರಥಮಾಂಗ – ತಲೆ, ಚಂದ್ರಶೇಖರ

**ಪದಸಂಖ್ಯೆ ೨೨೪ :**

ಅನಘಾ - ಪಾಪದೂರ.
ನಾರಾಯಣ.

ಅನಘಾರ್ಥಕ್ರಮ - ನಾರಾಯಣ
ಮುದ್ರೆ ಧರಿಸುವ
ಕ್ರಮ.

## ಪದಸಂಖ್ಯೆ ೨೨೭ :

ಸುರಘಟ - ಹೆಂಡದ ಮಡಿಕೆ.
ವಿಷ್ಟ - ಮಲ.
ಆಮಲ್ಯ - ನೆಲ್ಲೀಕಾಯಿ.
ಕೀಕಟ - ಜಿಂಕೆ ಬೇಟೆ
ಯಾಡುವ ಅರಣ್ಯ.
ಮಿತ್ರಕುಲಜ - ಸೂರ್ಯವಂಶದಲ್ಲಿ
ಹುಟ್ಟಿದ
ರಾಮಚಂದ್ರ.
ನಾರಾಯಣ.
ಅರಿ - ಚಕ್ರ.
ಮುನಿ - ಸಪ್ತ ಋಷಿಗಳು.

## ಪದಸಂಖ್ಯೆ ೨೨೮ :

ಅಮರಾಸ್ಯ ಮೂಲೆ - ಆಗ್ನೇಯ ದಿಕ್ಕು.
ಸುಮನಗೋಲಾರಿ- ಮನ್ಮಥನ ಅರಿ,
ರುದ್ರದೇವರ ದಿಕ್ಕು.
ಈಶಾನ್ಯ.
ಲೀಷ್ಣ - ನೆಕ್ಕುವದು.
ಪೇಯ - ಕುಡಿಯುವುದು.
ಸುಮನಸರಿಪು ದಿಕ್ಕು - ದೇವತೆಗಳ
ವೈರಿಯಾದ
ನಿಋತಿಯ ದಿಕ್ಕು.
ನೈಋತ್ಯ.
ಪವ - ವಾಯು

## ಪದಸಂಖ್ಯೆ ೨೨೯ :

ಲೇಖಪ - ದೇವೇಂದ್ರ.
ವಿದ್ಯುನಾಥ - ವೇದನಾಮಕ
ಳಾದ ಲಕ್ಷ್ಮೀಪತಿ

## ಪದಸಂಖ್ಯೆ ೨೩೦ :

ಸಾಮಜಪಾಲಾ - ಗಜವರದಾ
ಸಾಮಗ - ಸಾಮವೇದ
ಪ್ರತಿಪಾದ್ಯ

## ಪದಸಂಖ್ಯೆ ೨೩೧ :

ರಾಯಸುತನಂಗ - ಮಯೂರಧ್ವಜನ
ಅಂಗ.
ಚರಣಧರ - ಚಕ್ರಧರ.

## ಪದಸಂಖ್ಯೆ ೨೩೨ :

ಮಾಂತ - ಲಕ್ಷ್ಮೀಪರಿಯಂತ

## ಪದಸಂಖ್ಯೆ ೨೩೪ :

ದಾನವನೀಕಾಧ್ವಾಂತ
ಭಾನು - ದಾನವ
ಸಮುದಾಯವೆಂಬ
ಕತ್ತಲೆಗೆ
ಸೂರ್ಯನಂತೆ.

## ಪದಸಂಖ್ಯೆ ೨೩೬ :

ನಾಭಿಯ - ಕ್ಷತ್ರಿಯ.
ನಾಭಿಜ - ನಾಭಿರಾಜನ
ಮಗನಾದ ಋಷಭ.

ನಾಭಿಜ – ಆತನ ನಾಭಿಯಿಂದ ಹುಟ್ಟಿದ ಬ್ರಹ್ಮ

## ಪದಸಂಖ್ಯೆ ೨೩೭ :

ಇಳೇಂದ್ರ – ವಸುದೇಂದ್ರ

# ಸಂಪ್ರದಾಯದ ಹಾಡುಗಳು

## ಪದಸಂಖ್ಯೆ ೨೪೦ :

ತನ್ನ ಮಕ್ಕಳ ತಾನೆ ಹತಗ್ರಸುವಾ – ಮತ್ಸ್ಯಾವತಾರ, ಮೀನು ತನ್ನ ಮಕ್ಕಳನ್ನು ತಾನೇ ತಿನ್ನುತ್ತದೆ.

## ಪದಸಂಖ್ಯೆ ೨೪೧ :

ವರುಣ – ನಾರಾಯಣರ ನೆಂಟತನ ಸರಿಯಾದದ್ದು ಎಂದು ವಿವರವಾಗಿ ಚಮತ್ಕಾರಿಕವಾಗಿ ತಿಳಿಸುವ ಪದ.

ವರುಣನಿಗೂ ನಾರಾಯಣನಿಗೂ ನೆಂಟತನ ಮಾಡುವುದಕೆ – ಸರಿಯೆ ? ಸಂದೇಹವೇನು ?

| ನಾರಾಯಣ | ವರುಣ |
|---|---|
| ಹೆಂಡಿರು ಬಹುಮಂದಿ ಅಷ್ಟ ಮಹಿಷಿಯರು, ೧೬೧೦೦ ಮಂದಿ ಗೋಪಿಕಾ ಸ್ತ್ರೀಯರು. | ವರುಣನಿಗೂ (ಸಮುದ್ರರಾಜನಿಗೂ) ಬಹು ನದಿಗಳು ಹೆಂಡಿರು. |
| ಜಾತಪುತ್ರನೊಬ್ಬ ಮನ್ಮಥ | ಚಂದ್ರ ವರುಣನಿಗೆ. |
| ಪಂಡಿತ ಮಗನೊಬ್ಬ ಬ್ರಹ್ಮ | ಭೀಷ್ಮಾಚಾರ್ಯರು. |
| ವಂಶ–ಚಂದ್ರವಂಶದಲ್ಲಿ | ಶಂತನು ಚಕ್ರವರ್ತಿಯಾದ ವರುಣನ ಚಂದ್ರವಂಶದಲ್ಲಿ ಹುಟ್ಟಿದ್ದಾನೆ. |
| ಕೂಸು ಪಾಲಿಸಿದ, ಪ್ರಹ್ಲಾದ | ತನ್ನ ಮಗನಾದ ಭೀಷ್ಮನನ್ನು ಪಾಲಿಸಿದ |
| ಸ್ಥೂಲವಿಗ್ರಹ, ವಿಶ್ವರೂಪ, ವಿರಾಟ ರೂಪ | ಅಪಾರವಾದ ಸಮುದ್ರರೂಪ |
| ಜಡಚೇತನಕ್ಕೆ ಆಲಯ ಮತ್ತು ಚೇತನ ಪ್ರಾಣಿಗಳಾದ | ವರುಣನು ರತ್ನಗಳಿಗೆ ಆಶ್ರಯ ಜಲಚರಗಳಿಗೂ ಆಶ್ರಯ. |
| ಕನಕ (ಪೀತಾಂಬರ) | ಭೂಮಿಯೇ ಪೀತಾಂಬರ |
| ವೈಜಯಂತಿ ತುಳಸಿಹಾರ | ವಜ್ರದ ಹಾರಗಳು |
| ಕಾಲಿನಿಂದ ಭೃಗುಋಷಿಗಳನ್ನು ತುಳಿದರು. | ಸಮುದ್ರಮಥನ ಮಾಡುವಾಗ ಸರ್ವದೇವತೆಗಳು ಸಮುದ್ರವನ್ನು ಕಾಲಿನಿಂದ ತುಳಿದರು. ಸಮುದ್ರ–ಬೀಗಸೊಂತವಾದದ್ದು. |

ಸಮುದ್ರಮಥನ ಮಾಡಿದ ಅನಂತರ ತನ್ನಲ್ಲಿದ್ದ ಎಲ್ಲಾ ಲಕ್ಷ್ಮಿ ಉಚ್ಛೈಶ್ರವ, ಐರಾವತ, ಅಮೃತ ಇತ್ಯಾದಿ ಅನರ್ಘ್ಯವಾದ ವಸ್ತುಗಳನ್ನು ವರುಣನು ಕೊಟ್ಟ. ಇದರಂತೆ ಮುಂದೆ ಯಾರಿಗಾದರೂ ಕೊಡ ಬಹುದೆಂದು ಅವತ್ತಿನಿಂದ ಮುದ್ರಾ (ಬೀಗ) ಸಹಿತನಾದ ಕಾರಣ ಸಮುದ್ರ ನೆನಿಸಿಕೊಂಡ. ತನ್ನ ಮಗಳಾದ ಲಕ್ಷ್ಮೀದೇವಿಯನ್ನು ನಾರಾಯಣನಿಗೆ ಕೊಟ್ಟು ಬೀಗನಾದ. ಇನ್ನೊಬ್ಬರು ತನ್ನನ್ನು ತಡವದಂತೆ ಮಾಡಿಕೊಂಡ. ಅಳಿಯನನ್ನು ತನ್ನ ಮನೆಯಲ್ಲಿಯೇ ಇಟ್ಟುಕೊಂಡ. ಆದ್ದರಿಂದ ಇವನ ವೈಭವ ಹೆಚ್ಚಿತು. ಇತರರ ಬಾಯಿಗೆ, ಈತನನ್ನು ಏನು ಅನ್ನದಂತೆ, ಬೀಗ ಹಾಕಿದಂತೆ ಆಯಿತು.

| ನಾರಾಯಣ | ವರುಣ |
| --- | --- |
| ಒದರುವರು ವರಾಹಾವತಾರದಲ್ಲಿ<br>ಗುರುಹ ಎಂದು ಒದರುತ್ತಾರೆ. | ವರುಣನು ಭೋರೆಂದು<br>ಶಬ್ದಮಾಡುತ್ತಾನೆ. |
| ನೂತನ ಯಜ್ಞೋಪವೀತ<br>ಧರಿಸುವರು. | ಕಲಶಪೂಜಾಕಾಲಕ್ಕೆ ವರುಣ<br>ನೂತನ ಯಜ್ಞೋಪವೀತವನ್ನು<br>ಹಾಕಿಕೊಂಡ. |
| ಪ್ರಖ್ಯಾತವನ್ನು ಕೊಟ್ಟರು, ಅಕ್ಷಯಪಾತ್ರೆ<br>ಸೂರ್ಯಂತರ್ಯಾಮಿ<br>ನಾರಾಯಣ ಕೊಟ್ಟಿದ್ದಾನೆ. | ಕಾಮಧೇನು, ಕಲ್ಪವೃಕ್ಷ,<br>ಚಿಂತಾಮಣಿ ಮೊದಲಾದವು<br>ಗಳನ್ನು ವರುಣಕೊಟ್ಟಿದ್ದಾನೆ. |
| ದಾರಿತೋರಿದರು ವಾನರುಗಳಿಗೆ<br>ಸೇತು ಬಂಧನ | ಕಾಲಕ್ಕೆ ತೋರಿದರು. |
| ಗುಂಜಿಹಾರಯಿಸುವರು, ಗುಲ<br>ಗಂಜಿಹಾರ ಧರಿಸುವನು<br>ಕೃಷ್ಣಾವತಾರದಲ್ಲಿ. | ಸಮುದ್ರ ಗುಲಗಂಜಿ ಬಳ್ಳಿ<br>ಗಳಿರುತ್ತವೆ. |
| ವಾಸವಿವರ್ಜಿತರು (ಬೌದ್ಧಾವತಾರದಲ್ಲಿ) | ಸಮುದ್ರನು ವಾಸವಿವರ್ಜಿತನು, |
| ದ್ವೇಷಿಗಳ ಶರೀರನಾಶಗೊಳಿಸಿ<br>ದರು. (ದೈತ್ಯರನ್ನು) | ವಿಷಕೊಟ್ಟು ದೈತ್ಯರನ್ನು<br>ನಾಶಗೊಳಿಸಿದ. |
| ಕರ್ದಾಮಜಾಲಮಳ ಅಭ್ಯೋ<br>ದಯಕೆ ಕಾರಣರು. ಲಕ್ಷ್ಮಿಯ<br>ಅಭ್ಯೋದಯಕ್ಕೆ ಕಾರಣನಾದ. | ತನ್ನಲ್ಲಿ ಹುಟ್ಟಿದ ಲಕ್ಷ್ಮಿದೇವಿಯನ್ನು<br>ನಾರಾಯಣನಿಗೆ ಕೊಟ್ಟು<br>ಅಭ್ಯೋದಯಕ್ಕೆ ಕಾರಣನಾದ. |
| ಧರೆಗೆ ಅಲಂಕಾರನಾಗಿ ಖಳರ<br>ದುಷ್ಟರನ್ನು ನಾಶಮಾಡಿ ಶಿಷ್ಟ | ಧರೆಗೆ ಸುತ್ತಿ ತನ್ನಲ್ಲಿರುವ ವಜ್ರ<br>ಹಾಗೂ ಹವಳದ ಬಳ್ಳಿಗಳಿಂದ |

ರನ್ನು ಪಾಲಿಸಿ ತನ್ನ ಧ್ವಜ ವಜ್ರಾಂಕಿತ ರೇಖೆಗಳಿಂದ ಭೂಮಿಯನ್ನು ಅಲಂಕಾರ ಮಾಡಿದ. | ಅಲಂಕಾರ ಮಾಡಿದ.

ಶ್ರೀನಿವಾಸಗೆ ಮಾವನೀತ : ಲಕ್ಷ್ಮಿಯನ್ನು ಕೊಟ್ಟು ಸಮುದ್ರನಾಥ ಮಾವನಾದ. | ಈತನೂ ಹಾಗೆ ಗಂಗಾನನು ಕೊಟ್ಟು ನಾರಾಯಣ ಮಾವನಾದ.

---

## ಪದಸಂಖ್ಯೆ ೨೪೨ :

'ಲಲನಿ ಹಡೆದೇಳು ... ಅರಸುತನ ಕೊಲಿಲ್ಲ.'
ಗಂಗೆ ಹಾಗೂ ಭೀಷ್ಮರ ಕಥಾ ಸಂದರ್ಭ.
'ಜಾಮಾತನಿಗೆ ಇಹವು ಮುಖವು ಹತ್ತೊಂಬತ್ತು.'
ಲಿಪನ – ಮುಖ
ಗುರುಸ್ವಾಮಿ.... ದ್ರೋಹಿಗಳವನ ಪರಿವಾರ.
ಗುರುದ್ರೋಹಿ – ಚಂದ್ರ.
ಸ್ವಾಮಿದ್ರೋಹಿ – ಅರ್ಜುನ.
ಪಿತದ್ರೋಹಿ – ಪ್ರಹ್ಲಾದ
ಬ್ರಹ್ಮದ್ರೋಹಿ – ರುದ್ರದೇವರು.
ವಂಶದ್ರೋಹಿ – ಯಾದವರು.
(ಭಾತೃದ್ರೋಹಿ – ವಿಭೀಷಣ)
ನಿಶ್ಚಲನಲ್ಲಿ – ಮತ್ಸ್ಯ.
ಬಲು ಕಠಿಣ – ಕೂರ್ಮ.
ವಕ್ರವದನಾ – ವರಾಹ.
ಬಲುಕೋಪಿ – ನರಸಿಂಹ.
ತಿರಿದುಂಬ – ವಾಮನ.
ಇಬ್ಬರ ಸ್ತ್ರೀಯರ
ಕೊಂದ – ಪರಶುರಾಮನಾಗಿ ರೇಣುಕೆಯನ್ನು ಕೊಂದ.
ಶ್ರೀರಾಮನಾಗಿ ತಾಟಕಿಯನ್ನು ಕೊಂದ
ಅಲವ ಜಾರ – ಶ್ರೀಕೃಷ್ಣ.
ಬತ್ತಲಿರುವ – ಬುದ್ಧ.
ಕಲಹಕೆ ಪ್ರೀಯ – ಕಲ್ಕಿ (ವಿಷ್ಣು)
ದೇವ ಭೂತಿ – ದೇವಹೂತಿ. ಕಪಿಲ ಮಹರ್ಷಿಯ ತಾಯಿ.
ತಾಪರಿಣಿ – ಸುವರ್ಣ, ಗರುಡ, ಆತನ ಪತ್ನಿ.
ವಾರುಣಿ – ವರುಣನ ಪತ್ನಿ. ಶತರೂಪ ಬ್ರಹ್ಮನ ಮಗಳು.

# ರಾಘವೇಂದ್ರ ಸುವ್ವಾಲಿ

## ಪದಸಂಖ್ಯೆ ೨೪೪ :

ಕವಲಿಲ್ಲ – ಎರಡಿಲ್ಲ.
ತೋಯ – ನೀರು.
ಸಪ್ತಜಿಹ್ವ – ಏಳುನಾಲಗೆಯುಳ್ಳ, ಅಗ್ನಿ.
ನೆಪ್ಪು – ನೆನೆಪು.

ಪವನಾಂಶರಿವರು....

ವಾಯುವಿನ ಅಂಶವುಳ್ಳವರು. ಘಾಳಿಯುತ ಪ್ರಹ್ಲಾದ ಬಾಹ್ಲೀಕರಾಯ ನೆನಿಸಿದನು (ಶ್ರೀ ಜಗನ್ನಾಥದಾಸರು.)

ಅಷ್ಟಾಕ್ಷರ ಮಂತ್ರವನ ... ತಪ್ಪದಲೆ ನಿತ್ಯವಾಗಿ...

'ಓಂ ಶ್ರೀ ರಾಘವೇಂದ್ರಾಯ ನಮಃ'

ಎಂಬುದು ಅಷ್ಟಾಕ್ಷರಿ ಮಂತ್ರ. ರಾಯರ ಸ್ತೋತ್ರದಲ್ಲಿ ಶ್ರೀ ಅಪ್ಪಣ್ಣಾ ಚಾರ್ಯರು ಹೇಳಿದಂತೆ ಈ ಅಷ್ಟಾಕ್ಷರಿ ಮಂತ್ರವನ್ನು ವಿಧಿವತ್ತಾಗಿ ಜಪಿಸು ವುದರಿಂದ ಸಮಸ್ತ ಇಷ್ಟಾರ್ಥಗಳು ದೊರೆಯುತ್ತವೆ ಎಂದು ಹೇಳಿದ್ದಾರೆ.

ಮೃತ್ತಿಕೆ ಮಾಲೆ... ಶತಸಿದ್ಧ ಮತ್ತೇನು ಕೇಳಿ..

ರಾಘವೇಂದ್ರ ಸ್ವಾಮಿಗಳಲ್ಲಿ ಬಹು ದಿನದಿಂದ ಸೇವೆ ಮಾಡಿಕೊಂಡಿದ್ದ ಪರಿಚಾರಕನಿಗೊಬ್ಬನಿಗೆ ಮದುವೆ ಯಾಗುವ ಇಚ್ಛೆಯಾಯಿತು. ತನ್ನ ಮನಸ್ಸಿನ ಬಯಕೆಯನ್ನು ಬಹುದಿನಗಳ ಅನಂತರ ಒಮ್ಮೆ ಸ್ವಾಮಿಗಳು ಬಹಿರ್ದೆಸೆಗೆ ಹೊರಟಾಗ ಮೃತ್ತಿಕೆಜಲವನ್ನು ಒದಗಿಸುತ್ತಿರುವಾಗ ಅವರ ಮುಂದೆ ಅರುಹಿದನು. ಗುರುರಾಜರು ಆ ಸಮಯ ದಲ್ಲಿ ಕೈಯಲ್ಲಿದ್ದ ಹಿಡಿ ಮೃತ್ತಿಕೆಯನ್ನೇ ಅವನಿಗೆ ಕೊಟ್ಟು ತಥಾಸ್ತು ಎಂದರು.

ಪರಿಚಾರಕನು ಆ ಮೃತ್ತಿಕೆಯಿಂದ ಕೂಡಿದ ಗಂಟನ್ನು ತೆಗೆದುಕೊಂಡು ಅಲ್ಲಿಂದ ಹೊರಟವನು ರಾತ್ರಿಯ ಹೊತ್ತಿಗೆ ಒಂದು ಗ್ರಾಮದ ಶಾನು ಭೋಗರ ಮನೆಯ ಜಗುಲಿಯ ಮೇಲೆ ಮಲಗಿದನು. ಮಧ್ಯರಾತ್ರಿಯ ಸಮಯ ದಲ್ಲಿ ಒಂದು ಭೂತವು ಬಂದು ಒಳಗೆ ಶಾನುಭೋಗರ ಮಗಳಿಗೆ ಪ್ರಸವ ವೇದನೆ, ಅವಳ ಆರು ಮಕ್ಕಳನ್ನು ತಿಂದಂತೆ ಈ ಸಲದ ಮಗುವನ್ನು ನಾನು ತಿನ್ನಬೇಕು, ನಿಮ್ಮ ಆ ಬೆಂಕಿಯ ಗಂಟನ್ನು ಸರಿಸಿರಿ ಎಂದಿತು. ಅಷ್ಟರಲ್ಲಿ ಆ ಪರಿಚಾರಕನು ಗಂಟಿನಲ್ಲಿಯ ಮೃತ್ತಿಕೆಯನ್ನು ಅದರ ಮೇಲೆ ಎರಚಿದನು. ಕೂಡಲೇ ಆ ಭೂತವು ತೇಜೋಮಯ ದೇಹ ದಿಂದ ಆಕಾಶದಲ್ಲಡಗಿತು.

ಸ್ವಲ್ಪ ಸಮಯದ ಅನಂತರ ಮನೆ ಯಲ್ಲಿ ಸುಖಪ್ರಸವವಾಗಿ ಶಾನುಭೋಗರಿಗೆ ಬಹಳ ಆನಂದವಾಯಿತು. ಹೊರಗೆ ಬಂದು ನೋಡಿದಾಗ ಪರಿಚಾರಕನು ಎಲ್ಲ ವೃತ್ತಾಂತವನ್ನು ಹೇಳಿದನು. ರಾಯರು ಮುಟ್ಟಿದ ಮೃತ್ತಿಕೆಯ ಮಹಿಮೆಯನ್ನು ಹೇಳಿದನು. ಶಾನುಭೋಗರು ಕೃತಜ್ಞತೆ ಹಾಗೂ ಭಕ್ತಿಯಿಂದ ತಮ್ಮ ತಮ್ಮನ ಮಗಳನ್ನು ಆತನಿಗೆ ಕೊಟ್ಟು ಮದುವೆ ಮಾಡಿದನು. ಆ ಸೇವಕ ಪತ್ನೀಸಮೇತ ನಾಗಿ ಮತ್ತೆ ರಾಯರಲ್ಲಿ ಸೇವೆಗಾಗಿ ನಿಂತನು. ನಡೆದ ವೃತ್ತಾಂತವನ್ನೆಲ್ಲಾ ಕೇಳಿ ಗುರುಗಳು ನಸುನಕ್ಕು ದಂಪತಿಗಳನ್ನು ಆಶೀರ್ವದಿಸಿದರು.

'ಮುತ್ತಿನ ಮಾಲಿಕೆ... ಮೊದ ಲಂತೆ ತಂದು'

ಒಮ್ಮೆ ಶ್ರೀ ರಾಘವೇಂದ್ರ ಸ್ವಾಮಿಗಳು ಚೋಳದೇಶದ ಸುಭಿಕ್ಷಕ್ಕಾಗಿ ಯಜ್ಞ ಯಾಗಾದಿ ಜಪತಪಗಳನ್ನು ಮಾಡಿದಾಗ ಆ ನಾಡಿನಲ್ಲಿ ಮಳೆ – ಬೆಳೆ ಚೆನ್ನಾಗಿ ಆಗಿ ರಾಜನಿಗೆ ಹರ್ಷವಾಯಿತು. ರಾಜ ಸ್ವಾಮಿಗಳವರಿಗೆ ಒಂದು ರತ್ನಮಾಲಿಕೆ ಯನ್ನು ಅರ್ಪಿಸಿದನು. ಅವರು ಅದನ್ನು ಯಜ್ಞೇಶ್ವರನಿಗೆ ಅರ್ಪಿಸಿದರು. ರಾಜ ಅದು ತನ್ನ ಅವಮಾನವೆಂದು ಭಾವಿಸಿ ಕ್ರೋಧ ತಪ್ತನಾದನು. ರಾಯರು ಆತನ ದುಗುಡ ವನ್ನು ಕಂಡು ಅಗ್ನಿಯ ಅಂತರ್ಗತನಾದ ಪರಶುರಾಮನನ್ನು ಪ್ರಾರ್ಥಿಸಿದಾಗ ಆ ರತ್ನಹಾರ ಪಳಪಳನೇ ಹೊಳೆಯುತ್ತ ಹೊರಕ್ಕೆ ಬಂದಿತು. ರಾಜನಿಗೆ ಪಶ್ಚಾತ್ತಾಪ ವಾಗಿ ಸ್ವಾಮಿಗಳ ಕ್ಷಮೆಯಾಚಿಸಿ

ಅವರಿಂದ ವಿಶೇಷ ಅನುಗ್ರಹ ಪಡೆದ.

ಪಂಡಿತರು ಮೊದಲಾಗಿ... ಪೆಸರಾದರಿವರು.

ರಾಘವೇಂದ್ರರ ಸ್ವಾಮಿಗಳು ಒಮ್ಮೆ ದಕ್ಷಿಣದೇಶ ಸಂಚಾರ ಕಾಲದಲ್ಲಿ ಒಂದು ಊರಿನಲ್ಲಿ ಮಳೆಯಿಲ್ಲದ ಪಶುಪಕ್ಷಿಗಳೆಲ್ಲಾ ಬಾಯ್ಬಿಡು ವಂತಾಗಿತ್ತು. ಆಗ ಶ್ರೀ ರಾಯರು ತಮ್ಮ ದಂಡಕಾಷ್ಟವನ್ನು ನೆಲಕ್ಕೆ ಊರಿ ಅಲ್ಲಿಯವರ ನೀರಿನ ಬರವನ್ನು ಹಿಂಗಿಸಿದರು.

ಕಟ್ಟಲಿಯ ಭತ್ತದೊಳು... ಮುನಿವರರು.

ಒಮ್ಮೆ ಗುರುರಾಯರು ತಮ್ಮಲ್ಲಿದ್ದ ಸ್ವಲ್ಪವೇ ಆಹಾರಧಾನ್ಯದೊಂದಿಗೆ ಒಂದೆಡೆ ತಂಗಿದ್ದಾಗ ರಾಜನೊಬ್ಬ ತನ್ನ ಪರಿವಾರದೊಡನೆ ಆಗಮಿಸಿದನು. ಆತನನ್ನು ಕೆಲವು ದಿನ ಸತ್ಕರಿಸಿದಾಗ್ಯೂ ಆಹಾರಧಾನ್ಯ ಕಡಿಮೆಯಾಗಲಿಲ್ಲ.

ವಿಪ್ರರೆಲ್ಲರೂ ಕೇಳಿಸಿ ..... ಭೂಪ ಮೆಚ್ಚುವಂದದಿ,

ಗುರುಗಳು ಒಮ್ಮೆ ತಮ್ಮ ಇಹ ಲೋಕತ್ಯಾಗದ ದಿನವನ್ನು ಸೂಚಿಸಿ ಶಿಷ್ಯನಾದ ವೆಂಕಣ್ಣನಿಗೆ ಒಂದು ವೃಂದಾವನವನ್ನು ಕಟ್ಟಿಸಲು ಹೇಳಿದರು. ಅವನು ಅದರಂತೆ ಸುಂದರವಾದ ವೃಂದಾವನವನ್ನು ಕಟ್ಟಿಸಿದಾಗ, ಶ್ರೀಗಳು ಅದು ಮುಂದಿನವರಿಗೆ ಇರಲೆಂದು ತಮಗಾಗಿ ಇಂದಿನ ಮಾಧವರಂ ಹತ್ತಿರವಿರುವ ಒಂದು ಶಿಲೆಯಿಂದ ನಿರ್ಮಿಸಲು ಹೇಳಿದರು. ಆ ಶಿಲೆ ಶ್ರೀರಾಮನ ಪಾದಸ್ಪರ್ಶದಿಂದ ಪಾವನವಾಗಿದ್ದುದು ಎಂದು ಅನಂತರ ವಿವರಿಸಿದರು. ವೆಂಕಣ್ಣನು ಅದೇ ರೀತಿ ಮಾಡಿದನು.

## ಪದಸಂಖ್ಯೆ ೨೪೫ :

ಹಗೆಯನ್ನುಳಿದು ಪಾಂಚಜನ್ಯ ಘಳಿಸಿದನೆ – ಹಯಗ್ರೀವನೆ,

ಭೃಗುಕುಲೋದ್ಭವ – ಪರಶುರಾಮ,

## ಪದಸಂಖ್ಯೆ ೨೪೬ :

ತಮ್ಮನಾತಮ್ಮ – ರಾಮನ ತಮ್ಮ ಲಕ್ಷ್ಮಣ.

ಲಕ್ಷ್ಮಣ ಎಂದರೆ ಬಲರಾಮ, ಆತನ ತಮ್ಮ ಶ್ರೀಕೃಷ್ಣ.

ಹೇಮಾಂಗದ – ರುಕ್ಮಾಂಗದ,

ಕನಕಾಂಬಕ

ಕಶ್ಯಪುರಿಪು – ಹಿರಣ್ಯಾಕ್ಷ, ಹಿರಣ್ಯಕಶಿಪುಗಳ ವೈರಿ.

ಧನಪತಿಮಿತ್ರ – ಕುಬೇರನ ಸಖ, ಮಹಾರುದ್ರ,

ಸತ್ರಾಯಣ ಸುತ – ಪರಾಶರಸುತ, ವೇದವ್ಯಾಸ.

## ಪದಸಂಖ್ಯೆ ೨೪೭ :

ಅಷ್ಟನಾಮ – ವಿಶ್ವ, ತೈಜಸ, ಪ್ರಾಜ್ಞ, ತುರ್ಯ, ಆತ್ಮ, ಅಂತರಾತ್ಮ, ಜ್ಞಾನಾತ್ಮ, ಪರಮಾತ್ಮ.

ಅಕ್ಷರ ಜೇಷ್ಟ – ಲಕ್ಷ್ಮಿಗಿಂತ ಹಿರಿಯನಾದ ಶ್ರೀಹರಿ.

ತ್ರಾತ – ರಕ್ಷಣೆ ಮಾಡಿದಾತ.

ನಾರಾಜ ಹಾಗೂ ಮೂರುತಿ ಸುತ – ವೃಷಭನಾಮಕ ಪರಮಾತ್ಮ.

## ಪದಸಂಖ್ಯೆ ೨೫೩ :

ಕುಸುತ – ಭೂಮಿಯ ಮಗ– ನರಕಾಸುರ

## ಪದಸಂಖ್ಯೆ ೨೫೫ :

ಜಾಂಬೂನದಾಕ್ಷ – ಹಿರಣ್ಯಾಕ್ಷ.

ಶಾತಕುಂಭಕಶ್ಯಪ – ಹಿರಣ್ಯ ಕಶ್ಯಪು.

## ಪದಸಂಖ್ಯೆ ೨೫೬ :

ಅನ್ನಾಜ – ಬ್ರಹ್ಮ.

ಪ್ರಾಣಾಜ್ಯ – ಪ್ರಾಣದೇವರು ತುಪ್ಪ

# ಅನುಬಂಧ – ೨

## ಪದಸಂಖ್ಯೆಯ ಕ್ರಮದಲ್ಲಿ ನಾಮಸೂಚಿ

### (ಶ್ರೀ ಪ್ರಾಣೇಶದಾಸರ ಪದಗಳಿಂದ)

| | ಪದ ಸಂಖ್ಯೆ |
|---|---|
| ಶಂಭುನಂದನ | ೧ |
| ಮುನಿವ್ಯಾಸ | ೧ |
| ಶರಧಿಜಾ | ೨ |
| ಕುಂಡಲೀಶ ಶಯನ | ೨ |
| ಅಜಾಂಡೋದರ | ೨ |
| ಮೇಷ | ೨ |
| ಶಿರೀಟಿ ಸೂತ | ೩ |
| ಪವಮಾನ ತಾತ | ೩ |
| ಘಟಜ | ೪ |
| ಮಂದಾಕಿನಿ ಪಿತ | ೫ |
| ಆಖಂಡಲ | ೫ |
| ಸಂವತ್ಸರಾಂಬರಧರ | ೬ |
| ಬಂಗಡಲೊಡೆಯ | ೭ |
| ವಾರಿಶಿಜಾದೃಹಿಣ | ೮ |
| ಕಾಳಿಮದಾಪಹ | ೮ |
| ಕಿಟಿ | ೮ |
| ಕಪಿಲ ರೂಪಿ | ೮ |
| ಭೈಷ್ಮೀವಲ್ಲಭ | ೮ |
| ಅಂತರಿಕ್ಷಾಳಕ | ೯ |
| ಮಂಥಾರಿ | ೯ |
| ಶಿಶುಪಾಲ | ೯ |
| ದಂತವಕ್ರ | ೯ |
| ಸಾಮಜ | ೧೦ |
| ದ್ರೌಪದಿ | ೧೦ |
| ಮುಚುಕುಂದ | ೧೦ |
| ಸುದಾಮ | ೧೦ |
| ಪೂತನಿ | ೧೦ |
| ಮೃತ್ಯುಂಜಯ | ೧೦ |
| ಕೇಶವ | ೧೦ |
| ಮುಕುಂದ | ೧೦ |
| ವಾಮನ | ೧೦ |
| ಮುರಾಂತಕ | ೧೦ |
| ಅಕ್ರೂರ | ೧೦ |
| ಜಾಂಬವತಿ | ೧೦ |
| ಶಂಕರ | ೧೦ |
| ವಿಷ್ಣು | ೧೧ |
| ದೇವಕಿ | ೧೧ |
| ಕಾಲನೇಮಿ | ೧೧ |

| | ಪದ ಸಂಖ್ಯೆ | | ಪದ ಸಂಖ್ಯೆ |
|---|---|---|---|
| ಜಮದಗ್ನಿ | ೩೬ | ಇಂಗಡಲಾತ್ಮಜ | ೮೨ |
| ಬುದ್ಧಾವತಾರ | ೩೬ | ಶ್ರೀಬೂದುರ್ಗಾಂಭ್ರಣಿ | ೧೨೧ |
| ಅಚ್ಯುತ | ೩೬ | ಕುಂಭಿಣೀಜೆ | ೮೩ |
| ಧನಪಜ | | ದುರ್ಮತಿಧೌತವೃಜನಿ | ೮೩ |
| ೩೮ | | ಮಂಗಳಾದೇವಿ | ೨೫೭ |
| ಮೂಲೇಶ | ೪೩ | ಜಯಂತ | ೨೭೦ |
| ಗೋಪಿಕಾ | ೫೪ | ಅಕ್ಷರೆ | ೨೭೧ |
| ವಿರಿಂಚೇಶ | ೫೫ | ಕಾಳೀನಾಥ | ೮೭ |
| ಜಂಭಾರಿ | ೫೫ | ಖೇಚರ | ೮೭ |
| ಅಕ್ರೂರ | ೫೯ | ಅಂತಕಾತ್ಮಜ | ೮೭ |
| ಕುವಲಯಾಪೀಡ | ೫೯ | ಘನವಾಹಸುತ | ೮೯ |
| ವೃಜ | ೬೦ | ಭಾನುನಂದನ | ೯೦ |
| ಚಾಣೂರ | ೬೨ | ಪಾಕಶಾಸನಿ | ೯೧ |
| ಮುಷ್ಟಿಕ | ೬೨ | ಯಮಜ | ೯೧ |
| ಮಧುರಾಪುರ | ೬೬ | ಕಿರ್ಮೀರ | ೯೧ |
| ಅಧೋಕ್ಷಜ | ೬೬ | ಸಂಜೀವನ | ೯೪ |
| ಸತ್ಯಭಾಮಿ | ೭೦ | ಮಧ್ವಮುನಿ | ೯೪ |
| ನಾಗಾರಿ | ೭೦ | ಆರ್ಯಮಾ | ೯೬ |
| ನಾಗವರದ | ೭೫ | ಮಿತ್ರ | ೯೬ |
| ವಸಧೀಜೆ | ೭೯ | ಸವಿತೃ | ೯೬ |
| ದಶಕಾರಿಸತಿ | ೭೯ | ಮಧ್ಯಗೇಹ | ೯೭ |
| ಪಯೋದಧಿಜಾತೆ | ೭೯ | ಪ್ರಾಣ | ೯೮ |
| ಖಚರಾಳ | ೭೯ | ಅಪಾನ | ೯೮ |
| ಖಚರಾಶ | ೭೯ | ವ್ಯಾನ | ೯೮ |
| ವೈನತೇಯವರೂಢ | ೮೦ | ಉದಾನ | ೯೮ |
| ದಿವಿಷತ್ಪೂಜಿತ | ೮೧ | ಸಮಾನ | ೯೮ |
| ಕರ್ವಮಜಾಲಯೆ | ೮೨ | ಹರಿದಶ್ವ | ೯೯ |

| | ಪದ ಸಂಖ್ಯೆ | | ಪದ ಸಂಖ್ಯೆ |
|---|---|---|---|
| ಯಮುನಾ | ೧೧೬ | ನೇತ್ರವತಿ | ೧೧೬ |
| ನರ್ಮದಾ | ೧೧೬ | ಪಾಪನಾಶಿ | ೧೧೬ |
| ತುಂಗಾ | ೧೧೬ | ಸೀತಾ | ೧೧೬ |
| ಸಿಂಧು | ೧೧೬ | ಅಳಕನಂದಾ | ೧೧೬ |
| ಭವನಾಶಿನಿ | ೧೧೬ | ಹಯಗ್ರೀವ | ೧೧೬ |
| ಕುಮುದ್ವತಿ | ೧೧೬ | ತಾಪಿನಿ | ೧೧೬ |
| ವಂಝಾರ | ೧೧೬ | ಕಾಳಿ | ೧೧೬ |
| ಭೀಮ | ೧೧೬ | ಸೌಪರಣಿ | ೧೧೬ |
| ತಾಮ್ರಪರ್ಣಿ | ೧೧೬ | ಪಿನಾಕಿ | ೧೧೬ |
| ಮಲಹಾ | ೧೧೬ | ಕಪಿಲ | ೧೧೬ |
| ವಾರುಣಿ | ೧೧೬ | ಜಮದಗ್ನಿ | ೧೧೬ |
| ಫಲ್ಗುಣಿ | ೧೧೬ | ಮರುದ್ವತಿ | ೧೧೬ |
| ಶ್ರೋಣ | ೧೧೬ | ಮದಿರ | ೧೧೬ |
| ಭದ್ರಾ | ೧೧೬ | ಮೇನುಕಾ | ೧೧೬ |
| ಗಂಡಕಿ | ೧೧೬ | ಸೂನಾಸಿ | ೧೧೬ |
| ಹೇಮಾ | ೧೧೬ | ಚಕ್ರವತಿ | ೧೧೬ |
| ಮೂರುವೇಣಿ | ೧೧೬ | ಗರುಡ | ೧೧೬ |
| ಗಾಯಿತ್ರಿ | ೧೧೬ | ಶಂಖವತಿ | ೧೧೬ |
| ವೇಗವತಿ | ೧೧೬ | ಕುಹು | ೧೧೬ |
| ಕೌಸಿಕ | ೧೧೬ | ಮಹೇಶ್ವರಿ | ೧೧೬ |
| ಮಣಿಕರಣಿಕ | ೧೧೬ | ಜಯಮಂಗಳ | ೧೧೬ |
| ಗೌತಮಿ | ೧೧೬ | ಯೋಗಕೃತು | ೧೧೬ |
| ಭಾಗೀರಥಿ | ೧೧೬ | ಮಾಲಾ | ೧೧೬ |
| ಕಾಗಿನಿ | ೧೧೬ | ಗದಾಧರಿ | ೧೧೬ |
| ವೇತ್ರವತಿ | ೧೧೬ | ಮಾಲಿನಿ | ೧೧೬ |
| ಹೇಮವತಿ | ೧೧೬ | ಗಾರ್ಗಿಣಿ | ೧೧೬ |

# ಅನುಬಂಧ – ೩

## ಪದಸಂಖ್ಯೆಯ ಕ್ರಮದಲ್ಲಿ ವಿಶೇಷ ಪದಸೂಚಿ

## (ಶ್ರೀ ಪ್ರಾಣೇಶದಾಸರ ಪದಗಳಿಂದ)

| | ಪದ ಸಂಖ್ಯೆ | | ಪದ ಸಂಖ್ಯೆ |
|---|---|---|---|
| ಉರಗ ಪರ್ವತ | ೨ | ಕುರುಪ | ೨೭ |
| ತನ್ಮಾತ್ರಾದೂರ | ೨ | ನಕ ಕಹ | ೨೭ |
| ಕಘಲೋಕ | ೪ | ಬಕಾಪ | ೨೮ |
| ಘಮುಖ | ೪ | ಜರಿಜಾಹ | ೨೮ |
| ಸಂವತ್ಸರ ಪಿತ | ೬ | ಅನ್ನಾದ | ೨೮ |
| ಕಾಶ್ಯಪಿ | ೭ | ಇಳಿಪತಿ | ೩೦ |
| ಶಂಕಾನುಜ | ೧೦ | ವಿಷಾಹಿಪ | ೩೨ |
| ಗರುಡಾಂಕ | ೧೦ | ಶ್ರೀದ | ೩೨ |
| ಉರಗಪರ್ಯಂಕ | ೧೦ | ಮಹಾಣು | ೩೨ |
| ಮಾ– ಕಾ–ವಿ– ಫಣಿ | ೧೧ | ಸುಜ್ಞೇಯ | ೩೩ |
| ಕ್ಷೋಣಿಪಹ | ೧೧ | ಕೃತಯುಗ | ೪೫ |
| ಕೋಲ | ೧೧ | ಪ್ರಭವ | ೩೬ |
| ಕುಬುಜೆ | ೧೧ | ಪ್ರತಿಪದ | ೩೬ |
| ಧಾತತಾತ | ೧೧ | ವೈವಸ್ವತ | ೩೬ |
| ದಂಡಜವರದ | ೧೧ | ವಿಭವಾಬ್ದ | ೩೬ |
| ಭಾಗವತ | ೨೭ | ಋಕ್ಷಧೃತಿಯೋಗ | ೩೬ |

| | ಪದ ಸಂಖ್ಯೆ |
|---|---|
| ಹದ್ದನೇರುವ | ೨೪೮ |
| ಬತ್ತಲಿರುವವ | ೧೭೫ |
| ಎರಧಾಳು | ೨೧೪ |
| ಗೊರವಬಾಳು | ೨೧೪ |
| ಗುಡಿಹಾಳು | ೩.೨೪ |
| ಈಚಲಹಾಳು | ೩.೨೪ |
| ಐದನಹಾಳು | ೩.೨೪ |
| ಅಸಿಹಾಳು | ೩.೨೪ |
| ಹೊನ್ನಹಳ್ಳಿ | ೩.೨೪ |
| ಕಲ್ಲೂರು | ೩.೨೪ |
| ಮಣ್ಣೂರು | ೩.೨೪ |
| ಹೆಸರೂರು | ೩.೨೪ |
| ಅಡವಿಭಾವಿ | ೩.೨೪ |
| ಹಾಕ್ಕೇರಿ | ೩.೨೪ |
| ನೀರಲಕೇರಿ | ೩.೨೪ |
| ಹೊನ್ನಕುಪ್ಪಿ | ೩.೨೪ |
| ಕನಸವಿ | ೩.೨೪ |
| ಹಾಳಭಾವಿ | ೩.೨೪ |
| ಗುಂಡಸಾಗರ | ೩.೨೪ |
| ಇಲಕಲ್ಲು | ೩.೨೪ |
| ಸೊನ್ನ | ೩.೨೪ |
| ಭಂಗಾರಗುಂಡು | ೩.೨೪ |
| ಚೆನ್ನಪಟ್ಟಣ | ೩.೨೪ |
| ಬೆಲ್ಲದಮೊರಚಿ | ೩.೨೪ |

| | ಪದ ಸಂಖ್ಯೆ |
|---|---|
| ಹುಲಿಗುಡ್ಡ | ೩.೨೪ |
| ಕರಡಿಚಿರ್ಚ | ೩.೨೪ |
| ಪಂಚಭೇದ | ೨೨೩ |
| ಗೀತಾಭಾಷ್ಯ | ೨೨೬ |
| ಅಣುಭಾಷ್ಯ | ೨೨೬ |
| ಅನುವ್ಯಾಖ್ಯಾನ | ೨೨೬ |
| ತತ್ವಸಂಖ್ಯಾನ | ೨೨೬ |
| ತತ್ವೋದ್ಯೋತ | ೨೨೬ |
| ಋಗ್ಭಾಷ್ಯ | ೨೨೬ |
| ಐತರೇಯ | ೨೨೬ |
| ತೈತ್ತಿರೀಯ | ೨೨೬ |
| ಬೃಹದಾರಣ್ಯಕ | ೨೨೬ |
| ಈಶಾವಾಸ್ಯ | ೨೨೬ |
| ಕಾಠಕ | ೨೨೬ |
| ಛಾಂದೋಗ್ಯ | ೨೨೬ |
| ಅಥರ್ವಣ | ೨೨೬ |
| ಮುಂಡಕ | ೨೨೬ |
| ಷಟ್ಪ್ರಶ್ನ | ೨೨೬ |
| ತಳವಕಾರ | ೨೨೬ |
| ಘಟಜ | ೨೬೧ |
| ಸೂರುತಿಸೀರಿ | ೨೬೪ |
| ಸಾರಾವಳಿ | ೨೪೮ |
| ಏಕಾದಶೀವ್ರತ | ೨೪೮ |
| ಅಲವಬೋಧ | ೨೨೭ |
| ಮಂತ್ರ | ೨೨೬ |

# ಅನುಬಂಧ – ೪

## ಪದಸಂಖ್ಯೆಯ ಕ್ರಮದಲ್ಲಿ ನಾಮಸೂಚಿ

### ಗುರು ಪ್ರಾಣೇಶ ವಿಠ್ಠಲರ ಕೀರ್ತನೆಗಳು

| ನಾಮಸೂಚಿ | ಪ. ಸಂ. |
|---|---|
| ಪಂಢರಿರಾಯ | ೨೮೦ |
| ಮಹಿದಾಸ | ೨೮೧ |
| ಶ್ವೇತರಾಯ | ೨೮೯ |
| ಕೋಲಾಸುರ | ೨೮೯ |
| ಸುಗ್ರೀವ | ೨೯೦ |
| ಪವನ | ೨೯೧ |

### ಶ್ರೀಶ ಪ್ರಾಣೇಶವಿಠ್ಠಲರ ಕೀರ್ತನೆಗಳು

| ನಾಮಸೂಚಿ | ಪ. ಸಂ. |
|---|---|
| ಅನಂತಶಯನ | ೨೯೯ |
| ಬೆಳಗಾವಿ | ೨೯೯ |
| ಕಟ್ಟಿ | ೨೯೯ |
| ಪುರುಷೋತ್ತಮ | ೩೦೦ |

# ಅನುಬಂಧ – ೫

## ಕೀರ್ತನೆಗಳ ಅಕಾರಾದಿ

## ಹ

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೮೦. | ಹೆಂಡತಿಕಿಂತೆಮ್ಮ ಹೆಚ್ಚು ನೋಡಿದೆನೆಂದು | ೬೮ |
| ೨೮೧. | ಹೇ ದಯಾಬ್ಧೇ ಪಾಲಿಸೆನ್ನನು : ಶ್ರೀದ ಹನುಮಂತ | ೧೦೦ |
| ೨೮೨. | ಹೋಗುವಳಗಸೀಯ ಪರಿಯಂತಾ | ೨೦೭ |

**ಕ್ಷ**

| | | |
|---|---|---|
| ೨೮೩. | ಕ್ಷೀರವಾರಿಧಿ ಸಂಭೂತಿ ಪ್ರದ್ಯುಮ್ನ ಮಾತೆ | ೮೧ |

## ಶ್ರೀಗುರುಪ್ರಾಣೇಶದಾಸರು

| | | |
|---|---|---|
| ೨೮೪. | ಕಂಗಳು ದಣಿಯ ನೋಡಲೆ ಮನವೆ | ೨೯೭ |
| ೨೮೫. | ತಪ್ಪುಗಳೆಣಿಸದೆ ಎನ್ನಪ್ಪ ಕಾಯಬೇಕು | ೨೯೬ |
| ೨೮೬. | ತಂಗಿನೀ ಕೇಳಿದ್ಯಾ ರಾಘವೇಂದ್ರಾಘಂಗಳ | ೨೯೫ |
| ೨೮೭. | ತಂದೆ ಪ್ರಾಣೇಶ ವಿಠಲರಾಯ ಒಲಿದು ತೆರಳಿದರು | ೨೮೪ |
| ೨೮೮. | ತೆರಳಿದರು ಪರಮತೋಷದಲಿ ಹರಿಪುರಕೆ | ೨೯೪ |
| ೨೮೯. | ದಯಮಾಡೆ ದಯಮಾಡೆ | ೨೮೮ |
| ೨೯೦. | ದಯಾನಿಧೆ ದಯಮಾಡಬೇಕು | ೨೮೨ |
| ೨೯೧. | ಪವನ ಸಂಭೂತಾ ಒಲಿದು | ೨೯೧ |
| ೨೯೨. | ಪಂಚಶರ ಪಿತನೆ ಅಹಿಮಂಚದಲಿ ಮಲಗಿಹನೆ | ೨೮೫ |
| ೨೯೩. | ಪಾಹಿ ಪಂಢರಿರಾಯಾ | ೨೮೦ |
| ೨೯೪. | ಪೊರೆಯ ಬೇಕೆಲಾ | ೨೮೧ |
| ೨೯೫. | ಮಹದೇವಾ ಮಹದೇವಾ | ೨೯೩ |
| ೨೯೬. | ಮಂಗಳಂ ಮಂಗಳಂ .... ಶ್ರೀನಿವಾಸನರ್ಧಾಂಗಿ | ೨೮೯ |
| ೨೯೭. | ಯಾಯಾವರವ ನೀಡಿ | ೨೮೭ |
| ೨೯೮. | ವಾಣಿ ಬ್ರಹ್ಮನ ರಾಣಿ | ೨೯೨ |
| ೨೯೯. | ಶ್ರೀ ಮದಾನಂದ ತೀರ್ಥರೆಂಬ | ೨೯೦ |
| ೩೦೦. | ಶ್ರೀಹರಿ ಸ್ಮರಣೆಯ ಮಾಡೋ ಸ್ವಾಮಿ | ೨೮೬ |
| ೩೦೧. | ಸುಖದ ಸುಂದರ ವಿಠಲರಾಯಾ | ೨೮೩ |

# ಅನುಬಂಧ – ೬

## ಆಕರ ಗ್ರಂಥಗಳು

| | |
|---|---|
| ೧. ಶ್ರೀ ಪ್ರಾಣೇಶ ವಿಠಲರ ಕೀರ್ತನೆಗಳು ಮತ್ತು ಶ್ರೀ ಗುರುಪ್ರಾಣೇಶ, ಶ್ರೀಶಪ್ರಾಣೇಶವಿಠಲರ ಕೀರ್ತನೆಗಳು. | ಸಂ. ಗೋರೆಬಾಳ ಹನುಮಂತ ಲಿಂಗಸುಗೂರು |
| ೨. ಸಾತ್ವಿಕ ಸ್ತವನ ಅಥವಾ ಋಜುನಮನ | ಸಂ. ಸುಳಾದಿ ಕುಪ್ಪೇರಾಯರು ಲಿಂಗಸುಗೂರು<br>ಪ್ರಕಾಶಕರು : ವರದೇಂದ್ರ ಹರಿದಾಸ ಸಾಹಿತ್ಯ ಮಂಡಲಿ ಲಿಂಗಸುಗೂರು. |
| ೩. ಶ್ರೀರತ್ನಾಕರ ಸುತಾ ಸ್ತುತಿ | ಸಂ. ________"________ |
| ೪. ಬೋಧಾಮೃತ | ಸಂ. ________"________ |
| ೫. ಗುರುನಮನ | ಸಂ. ________"________ |
| ೬. ಕರ್ನಾಟಕ ಭಕ್ತವಿಜಯ | ಬೇಲೂರು ಕೇಶವದಾಸರು |
| ೭. ಕನ್ನಡ ಸಾಹಿತ್ಯ ಚರಿತ್ರೆ | ಲೇ : ರಂ. ಶ್ರೀ ಮುಗಳಿ, |
| ೮. ಶ್ರೀ ಮಧ್ವಾಚಾರ್ಯರ ಜೀವನ ಮತ್ತು ಉಪದೇಶಗಳು | ಲೇ : ಮೂಲ ಬಿ.ಎನ್.ಕೆ. ಶರ್ಮಾ<br>ಅನುವಾದಕ : ಬಾದರಾಯಣಮೂರ್ತಿ |
| ೯. ದಾಸ ಸಾಹಿತ್ಯದ ಹಾದಿಯಲ್ಲಿ | ಲೇ : ಪ್ರೊ. ವಸಂತ ಕುಷ್ಟಗಿ |

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು